# ಕುಣಬಿ ಸಮುದಾಯದ

## ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ

## (ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧಕರು
**ಮಲ್ಲಿಕಾರ್ಜುನ ಪ. ಸೊಬರದ**



ಮಾರ್ಗದರ್ಶಕರು
**ಡಾ. ಎ. ಎಸ್. ಪ್ರಭಾಕರ**
ಸಹಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ, ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ ೫೮೩ ೨೭೬

ನವೆಂಬರ್ - ೨೦೧೧

# ಕುಣಬಿ ಸಮುದಾಯದ
# ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ
## (ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

ಮಲ್ಲಿಕಾರ್ಜುನ ಪ. ಸೊಬರದ

ಮಾರ್ಗದರ್ಶಕರು

ಡಾ. ಎ.ಎಸ್. ಪ್ರಭಾಕರ

ಸಹಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ






ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬.


ನವ್ಹೆಂಬರ್-೨೦೧೧

## ಪ್ರಮಾಣ ಪತ್ರ

**ಕುಣಬಿ ಸಮುದಾಯದ: ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ** (ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಎ.ಎಸ್. ಪ್ರಭಾಕರ ಅವರ ಮಾರ್ಗದರ್ಶನದಲ್ಲಿ ಸಮಾಜಶಾಸ್ತ್ರ ವಿಷಯದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಇಲ್ಲವೆ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: ೧೦-೧೧-೨೦೧೧

**ಮಲ್ಲಿಕಾರ್ಜುನ ಪ. ಸೊಬರದ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ,
ಸಮಾಜ ವಿಜ್ಞಾನ ನಿಕಾಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪರಿವಿಡಿ

# ಕೋಷ್ಟಕಗಳ ಪಟ್ಟಿ

**ಕೋಷ್ಟಕ ೧**

**ಅಂಕಿ-ಅಂಶಗಳ ೨**

**ಪತ್ರಿಕಾ ವರದಿಗಳ ಪಟ್ಟಿ ೩**



**ದಾಖಲೆ / ಸುತ್ತೋಲೆ ಪಟ್ಟಿ ೪**



**ಛಾಯಾಚಿತ್ರಗಳ ಪಟ್ಟಿ ೫**

# ಅಧ್ಯಾಯ ಒಂದು

## ಪ್ರವೇಶ

**ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿ**

೧.೧ ಅಧ್ಯಯನದ ತಾತ್ವಿಕತೆ

೧.೨ ಅಧ್ಯಯನದ ಉದ್ದೇಶಗಳು

೧.೩ ಅಧ್ಯಯನದ ವ್ಯಾಪ್ತಿ

೧.೪ ಅಧ್ಯಯನದ ವೈಧಾನಿಕತೆ

೧.೫ ಪ್ರಬಂಧದ ಅಧ್ಯಾಯಗಳು

೧.೬ ಕುಣಬಿ ಸಮುದಾಯ ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ ೧

# ಪ್ರವೇಶ

ಉತ್ತರ ಕನ್ನಡ ಬಹುಮುಖಿ ಸಂಸ್ಕೃತಿಯ ಪ್ರದೇಶ. ಈ ಸಮುದಾಯಕ್ಕೆ ಬಹು ಪ್ರಾಚೀನ ಇತಿಹಾಸವಿದೆ. ಆರಂಭದಿಂದಲೇ ರೋಮ್, ಅರಬ್ ಮುಂತಾದ ರಾಷ್ಟ್ರಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು. ಅಂದಿನಿಂದಲೂ ಕಾರವಾರ ಮತ್ತು ಹೊನ್ನಾವರ ಪ್ರಸಿದ್ಧಿ ಪಡೆದ ಬಂದರುಗಳು.

ಸಮುದಾಯಗಳ ಕುರಿತು ಹಿಂದಿನ ಕಾಲದಿಂದಲೂ ಅಧ್ಯಯನ ನಡೆಯುತ್ತ ಬಂದಿದೆ. ಆದರೆ ವಿವಿಧ ಭಾಷೆ, ಸಂಸ್ಕೃತಿ, ಸಮಾಜದ ಅಧ್ಯಯನದಲ್ಲಿ ಆಸಕ್ತಿ ಬೆಳೆದಿರುವುದು ತೀರ ಇತ್ತೀಚಿನ ದಿನಗಳಲ್ಲಿ ಮಾತ್ರ. ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಭಾಷಾಶಾಸ್ತ್ರಜ್ಞರು, ವಿವಿಧ ಸಮುದಾಯ, ಸಮಾಜಗಳ ಅಧ್ಯಯನ ನಡೆಸಿ ಬೇರೆ ಬೇರೆ ಸಮುದಾಯಗಳ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ತಿಳಿಯಲು ಅವಿರತವಾಗಿ ಪ್ರಯತ್ನಿಸುತ್ತಿದ್ದಾರೆ. 'ಸಂಸ್ಕೃತಿ ಮತ್ತು ಭಾಷೆಯನ್ನು ಹೊಂದಿರುವ ಕಾರಣದಿಂದಾಗಿಯೆ ಮಾನವ ಇತರ ಜೀವಿಗಳಿಂದ ಭಿನ್ನವಾಗಿದ್ದಾನೆ. ಮಾನವ ತನಗೆ ವಿಶಿಷ್ಟವಾದ ಸಂಸ್ಕೃತಿಯನ್ನು ರೂಢಿಸಿಕೊಂಡಿರುವುದರಿಂದ ಇತರರ ಜೊತೆಗೂಡಿ ಬಾಳುವೆ ನಡೆಸುವ ಅವಕಾಶವೊಂದನ್ನು ರೂಢಿಸಿಕೊಂಡಿದ್ದಾನೆ'[೧] ಎಂಬುದು ತುಂಬಾ ಮಹತ್ವದ ಸಂಗತಿಯಾಗಿದೆ. ಸಾಮಾನ್ಯವಾಗಿ ಮನುಷ್ಯ ಸಮಾಜ ಜೀವಿ. ಭಿನ್ನ ಭಿನ್ನ ಗುಂಪುಗಳಿಗೆ ಸೇರಿದ್ದರೂ ಒಟ್ಟಾಗಿ ಬದುಕುವ ಕಲೆಯನ್ನು ಕರಗತ ಮಾಡಿಕೊಂಡಿರುತ್ತಾನೆ. ಬುಡಕಟ್ಟು ಸಂಸ್ಕೃತಿಗಳು ನಾಡಿನಿಂದ ದೂರವಿದ್ದುಕೊಂಡೇ ತಮ್ಮ ಸಾಂಸ್ಕೃತಿಕ ವಿಶಿಷ್ಟತೆಗಳನ್ನು ನಮ್ಮ ಮುಂದೆ ತೆರೆದಿಟ್ಟಿವೆ. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಸಮುದಾಯಗಳು ವಲಸಿಗರಾಗಿ ಬಂದಿದ್ದರಿಂದ ಅಲ್ಲಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡಿದ್ದಾರೆ. ಅಲ್ಲದೆ ಇಲ್ಲಿ ಗುಡ್ಡ, ಬೆಟ್ಟ, ಕಾಡುಗಳು ಇದ್ದ ಕಾರಣ ಬುಡಕಟ್ಟುಗಳು ಬೇರೆ ನೆಲೆಗಳಿಂದ ಸ್ಥಳಾಂತರಗೊಂಡು ಇಲ್ಲಿಗೆ ಬಂದು ನೆಲೆಸಿದ್ದು ಕಂಡುಬರುತ್ತದೆ. ಕರ್ನಾಟಕದಲ್ಲಿ ವಾಸಿಸುತ್ತಿರುವ ಬುಡಕಟ್ಟು ಸಮುದಾಯಗಳಲ್ಲಿ 'ಕುಣಬಿಯರು' ಪ್ರಮುಖವಾಗಿ ಗಮನ ಸೆಳೆಯುತ್ತಾರೆ. ಈ ಕುಣಬಿಯರು ತಮ್ಮದೇ ಆದ ಸಂಸ್ಕೃತಿ, ಭಾಷೆ, ರೂಢಿ, ನಂಬಿಕೆ, ಸಂಪ್ರದಾಯಗಳನ್ನು ರೂಢಿಸಿಕೊಂಡು ಇಲ್ಲಿಯೇ ವಾಸವಾಗಿದ್ದಾರೆ.

ಹಿಂದಿನ ಕಾಲದಲ್ಲಿ ಜಾತಿಕಟ್ಟು ಬಿಗಿಯಾಗಿದ್ದ ಕಾರಣ ಜಾತಿ, ಬುಡಕಟ್ಟುಗಳು ಪರಸ್ಪರ ಬೆರೆಯಲಿಲ್ಲ. ಹೀಗಾಗಿ ಇವರ ಭಾಷೆ, ನಡೆ, ನುಡಿ, ರೂಢಿ, ನಂಬಿಕೆ, ಸಂಪ್ರದಾಯ, ಉಡಿಗೆ ತೊಡಿಗೆಗಳಲ್ಲಿ ಇಂದಿಗೂ ಪ್ರತ್ಯೇಕತೆ ಉಳಿದುಕೊಂಡಿದೆ. ಉತ್ತರ ಕನ್ನಡ ಜಿಲ್ಲೆಯ ಕೆಲವು ಜಾತಿ

ಮತ್ತು ಬುಡಕಟ್ಟುಗಳಿಗೆ ಭಿನ್ನ ಭಿನ್ನ ವೇಷ-ಭೂಷಣಗಳಿವೆ. ಉದಾಹರಣೆಗೆ ಇಲ್ಲಿಯ ಸ್ತ್ರೀಯರ ವೇಷ-ಭೂಷಣಗಳಿಂದಲೇ ಇವರು ಇಂಥ ಜಾತಿಯವರು, ಇವರು ಇಂಥ ಸಮುದಾಯದವರು ಎಂದು ಸುಲಭವಾಗಿ ಗುರುತಿಸಬಹುದಾಗಿದೆ.

ಕಾಲಾಂತರದಲ್ಲಿ ತಮ್ಮ ಮೂಲ ಸಂಸ್ಕೃತಿಯನ್ನು ಹೆಚ್ಚು ಉಳಿಸಿಕೊಳ್ಳದೆ ಬುಡಕಟ್ಟುಗಳು ಜಾತಿಗಳಾದ ಉದಾಹರಣೆಗಳಾಗಿವೆ. ಸಕಲ ಜೀವಿಗಳನ್ನು ಒಟ್ಟಾರೆ ತೆಗೆದುಕೊಂಡರೆ ಮಾನವನು ಒಂದು ಪ್ರಾಣಿ ಎಂದು ಪರಿಗಣಿಸಲ್ಪಡುತ್ತಾನೆ. ಯಾಕೆಂದರೆ ಮಾನವನು ಎಲ್ಲ ಪ್ರಾಣಿಗಳಂತೆ ಜೀವಂತವಾಗಿರಲು ಆಹಾರವನ್ನು ಸೇವಿಸಬೇಕು. ಆದರೆ ತನಗೇ ವಿಶಿಷ್ಟವಾಗಿರುವ ಸಂಸ್ಕೃತಿಯಿಂದ ಉಳಿದ ಪ್ರಾಣಿಗಳಿಗಿಂತ ಭಿನ್ನವಾಗಿ ನಿಲ್ಲುತ್ತಾನೆ.

'ಬುಡಕಟ್ಟು ಸಮುದಾಯ ಸಾಮಾನ್ಯವಾಗಿ ಪ್ರತ್ಯೇಕವಾದ ರಾಜಕೀಯ ಮತ್ತು ಭಾಷಿಕ ಗಡಿಯನ್ನು ಹೊಂದಿ ಸಮಾಜದ ಮುಖ್ಯ ವಾಹಿನಿಯಿಂದ ದೂರವಾಗಿ ಇರುವುದು ಎನ್ನುವುದು ಸಾಮಾನ್ಯವಾದ ಗ್ರಹಿಕೆಯಾಗಿದೆ. ವಸಾಹತುಶಾಹಿಯ ಉದಯದೊಂದಿಗೆ ಯುರೋಪಿಯನ್ ಮಾನವಶಾಸ್ತ್ರಜ್ಞರು ಬುಡಕಟ್ಟುಗಳನ್ನು 'ನಾಗರಿಕ ಪ್ರಪಂಚದಿಂದ ದೂರವಾಗಿರುವ ಅನಾಗರಿಕರು' ಎಂದು ಕರೆದಿದ್ದಾರೆ. ಆದರೆ ಅವನ್ನೇ ಇಂದು ಪ್ರಬಲವಾದ ಸ್ವತಂತ್ರ ಗುಣಲಕ್ಷಣಗಳನ್ನು ಹೊಂದಿರುವ ದೇಶೀಯ ಜನರೆಂದು ಕರೆಯುವುದುಂಟು'[೨] ಏನೇ ಆಗಲಿ 'ಬುಡಕಟ್ಟು' ಎನ್ನುವುದು ಒಂದು ಸ್ವತಂತ್ರ ಘಟಕ ಎನ್ನುವುದರಲ್ಲಿ ಎರಡು ಮಾತಿಲ್ಲ.

ಒಂದೇ ಭೌಗೋಳಿಕ ಪರಿಸರದಲ್ಲಿಯೇ ಹಲವು ಬುಡಕಟ್ಟು ಸಮುದಾಯಗಳು ವಾಸಿಸುತ್ತಿದ್ದು ತಮ್ಮ ತಮ್ಮ ಜೀವನದ ವಿಶಿಷ್ಟ ರೀತಿ, ಸಂಸ್ಕೃತಿ, ರೂಢಿ, ನಂಬಿಕೆ, ಸಂಪ್ರದಾಯ, ಭಾಷೆಯ ಬದುಕನ್ನು ಕಟ್ಟಿಕೊಂಡು, ಕಾಪಾಡಿಕೊಂಡು ಬಂದಿರುವುದು ನಡೆದಿರುವ ಅಧ್ಯಯನಗಳಿಂದ ತಿಳಿದುಬರುತ್ತದೆ. ಮಾನವಶಾಸ್ತ್ರಜ್ಞರು ಇಡೀ ಮಾನವ ಕೋಟಿಯ ದೈಹಿಕ ಲಕ್ಷಣಗಳ ಆಧಾರದ ಮೇಲೆ ಶಾಸ್ತ್ರೀಯವಾಗಿ ಅಧ್ಯಯನ ಮಾಡಿ ಬುಡಕಟ್ಟು, ಸಮುದಾಯ, ಜಾತಿ, ಜನಾಂಗ, ಮೊದಲಾದವುಗಳನ್ನು ಸಂಬೋಧಿಸಿದ್ದಾರೆ.

'ನಮ್ಮಲ್ಲಿ 'ಸಂಸ್ಕೃತಿ' ಎಂಬ ಪದದ ಪ್ರಯೋಗವಾದಾಗಲೆಲ್ಲ ನಾವು ಪ್ರಧಾನವಾಗಿರುವ ಸಂಸ್ಕೃತಿಗಳನ್ನೇ ಉದಾಹರಣೆಗೆ ತೆಗೆದುಕೊಳ್ಳುತ್ತೇವೆ. ಉದಾಹರಣೆಗೆ ಭಾರತೀಯ ಸಂಸ್ಕೃತಿಯ ವಿಷಯ ಬಂದಾಗ ಆರ್ಯರ ವೇದಗಳು ಮತ್ತು ಪುರಾಣಗಳ ಕುರಿತೇ ಚರ್ಚಿಸುವುದು ಹೆಚ್ಚು.'[೩] ಉಳಿದ ಸಂಸ್ಕೃತಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಆದರೆ ಪ್ರಧಾನ ಸಂಸ್ಕೃತಿಗಳ ಬೇರುಗಳು ಇರುವುದು ಅನೇಕ ಉಪಸಂಸ್ಕೃತಿಗಳಲ್ಲಿ ಎಂಬುವುದನ್ನು ತಿಳಿಯಲು ಸಾಕಷ್ಟು ಆಧಾರಗಳು ದೊರಕುತ್ತವೆ. 'ದಕ್ಷಿಣ ಕನ್ನಡದ 'ಕೊರಗ' ಸಮುದಾಯವನ್ನು ಹೆಸರಿಸುವ ಶ್ರೀ ವೀರಪ್ಪ

ಮೊಯಿಲಿಯವರು ಅವರ ವಾದ್ಯಗಳಿಂದ ಹೊರಹೊಮ್ಮುವ ಹದಿನೆಂಟಕ್ಕೂ ಹೆಚ್ಚು ಸಂಗೀತಗಳ ನಾದಗಳ ಕುರಿತು ಬರೆದು ಬುಡಕಟ್ಟು ಅನನ್ಯತೆಯನ್ನು ಎತ್ತಿ ಹಿಡಿಯುತ್ತಾರೆ. ಕೊರಗರ ವಾಸಸ್ಥಾನಗಳನ್ನು 'ಕೊಟ್ಟ'ಗಳೆಂದು ಕರೆಯುತ್ತಾರೆ. ಈ ಕೊಟ್ಟಗಳು ಕೇವಲ ಅವರ ವಾಸಸ್ಥಾನವಾಗಿರದೆ ಅವರ ಕ್ರಿಯಾಶೀಲ ಬದುಕಿನ ಕೇಂದ್ರಗಳಾಗಿವೆ ಎಂದು ಹೇಳುತ್ತಾರೆ. ಹೀಗಾಗಿ ಭಾರತೀಯ ಸಂಸ್ಕೃತಿಯ ಅಧ್ಯಯನ ಮಾಡುವವರು ಇಂಥ ಉಪ ಸಂಸ್ಕೃತಿಗಳನ್ನು ಅಧ್ಯಯನ ಮಾಡದಿದ್ದರೆ ಅವರ ಅಧ್ಯಯನ ಪೂರ್ಣವಾಗುವುದಿಲ್ಲ ಎನ್ನುವುದು ಶ್ರೀ ವೀರಪ್ಪ ಮೊಯಿಲಿಯವರ ವಾದ. ಹಾಗೆಯೇ ಮುಂದುವರೆದು ಹೇಳುತ್ತಾ 'ಪ್ರಧಾನ ಸಂಸ್ಕೃತಿ' 'ಸುಖಿ ಸಂಸ್ಕೃತಿ' ಎಂದು ಕರೆಯಲ್ಪಟ್ಟರೆ ಬುಡಕಟ್ಟು ಸಂಸ್ಕೃತಿಯನ್ನು 'ಶ್ರಮ ಸಂಸ್ಕೃತಿ' ಎಂದು ಕರೆಯುತ್ತಾರೆ. ಪ್ರಧಾನ ಸಂಸ್ಕೃತಿಯಲ್ಲಿ ಪುರೋಹಿತ ಮಹತ್ವವನ್ನು ಪಡೆದರೆ, ತಳ ಸಂಸ್ಕೃತಿಯಲ್ಲಿ ಎಲ್ಲರೂ ಸಮಾನ ಸಾಮಾಜಿಕ ಅಂತಸ್ತನ್ನು ಅನುಭವಿಸುತ್ತಾರೆ'.[೪]

ಸಂಸ್ಕೃತಿ ನಿರಂತರ ಬದಲಾವಣೆ ಪ್ರಕ್ರಿಯೆ. ಬುಡಕಟ್ಟುಗಳು ಆಧುನಿಕ ಸಮಾಜಕ್ಕೆ ತೆರೆದುಕೊಂಡಾಗ ಬದಲಾವಣೆ ಹೊಂದಬಹುದು. ಉದಾಹರಣೆಗೆ ಬಿಳಿಗಿರಿ ರಂಗನ ಬೆಟ್ಟದ ಸೋಲಿಗರಿಗೆ ಕರ್ನಾಟಕ ಸರಕಾರ ಅವರ ವಾಸಸ್ಥಳದಲ್ಲಿಯೇ ಶಾಲೆಗಳನ್ನು ತೆರೆದು ಅವರ ಭಾಷೆಯಲ್ಲಿಯೇ ಪಠ್ಯಪುಸ್ತಕಗಳನ್ನು ರಚಿಸಿದೆ. ಇಂಥ ಸಂದರ್ಭಗಳಲ್ಲಿ ಬದಲಾವಣೆಯ ಗಾಳಿ ಬೀಸುವುದು ಸಹಜ. 'ಹಾಗೆಯೇ ಕಾಡು ಮೇಡುಗಳಲ್ಲಿ ಅಲೆಯುತ್ತಿದ್ದ ಓರಿಸ್ಸಾ ಬುಡಕಟ್ಟು ಸಮುದಾಯದ ಮಕ್ಕಳೀಗ ಬರೀ ಕಾಡಿನ ಮಕ್ಕಳಲ್ಲ ಅವರೀಗ ನಾಡಿನ ಮಕ್ಕಳು, ನಾಡು, ನಾಗರಿಕತೆ ಎಂದರೇನು ಎಂದು ತಿಳಿಯುವುದರೊಂದಿಗೆ ಹೈಟೆಕ್ ಶಿಕ್ಷಣವು ಅವರಿಗೆ ದೊರೆಯುತ್ತದೆ'[೫] ವಿಜಯ ಕರ್ನಾಟಕ ಕನ್ನಡ ದಿನಪತ್ರಿಕೆ ಲೇಖನದಲ್ಲಿ ಡಾ. ಅಚ್ಯುತ್ ಸಮಂತ ಎನ್ನುವವರು ರಾಷ್ಟ್ರದ ಮೊಟ್ಟಮೊದಲ ಆದಿವಾಸಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ಬುಡಕಟ್ಟು ಸಮುದಾಯದ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ. ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಒಕ್ಕಲಿಗ ಸಮುದಾಯದ ಸುಕ್ರಿ ಬೊಮ್ಮಗೌಡ ತಮ್ಮ ಸಂಸ್ಕೃತಿಯ ಕಣಜವನ್ನು ಜನಪದ ಹಾಡುಗಳ ಮೂಲಕ ತೆರೆದಿಟ್ಟು ಸರಕಾರದಿಂದ 'ಜಾನಪದ ಕೋಗಿಲೆ' ಪ್ರಶಸ್ತಿಯನ್ನು ಗಳಿಸಿದ್ದಾರೆ ಎನ್ನುವುದನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದಾಗಿದೆ. ಈ ಸಂದರ್ಭದಲ್ಲಿ ಬುಡಕಟ್ಟು ಸಂಸ್ಕೃತಿಯ ಮಹತ್ವದ ಕುರಿತು ನೊಬೆಲ್ ಪ್ರಶಸ್ತಿ ವಿಜೇತ ಓಕ್ಟಾವಿಯಾ ಪಾಜ್ (Octavia Paz) ಅವರ ಮಾತು ತುಂಬ ಪ್ರಸ್ತುತವೆನಿಸುತ್ತದೆ. 'India is a ethnographic and historical museum. But it is a living museum, one in which the most modern modernity co-exists with archaisms that have survived for millennium'.[೬]

ಉತ್ತರ ಕನ್ನಡ ಜಿಲ್ಲೆ 'ವಿಶಾಲವಾದ ಬಯಲು, ಸಮುದ್ರ ತೀರದ ಕರಾವಳಿ ಪ್ರದೇಶ, ಸಹ್ಯಾದ್ರಿಯ ದಟ್ಟ ಕಾಡಿನ ಮಲೆನಾಡು ಪ್ರದೇಶಗಳು ಉತ್ತರ ಕನ್ನಡ ಜಿಲ್ಲೆಗೆ ಮೂರು ರೀತಿಯ ಪ್ರಾಕೃತಿಕ ಅಂದವನ್ನು ಕರುಣಿಸಿದೆ'.[೭] ಈ ಕರಾವಳಿ, ಮಲೆನಾಡು, ಬಯಲು ಸೀಮೆಗಳೆಂಬ ಮೂರು ಭೌಗೋಳಿಕ ಅಂಶಗಳು ಕೇವಲ ಹವಾಮಾನ, ಭೂಗುಣಗಳಿಗೆ ಸೀಮಿತವಾಗಿರದೆ ಜನ ಜೀವನದಲ್ಲೂ ವೈವಿಧ್ಯತೆಯನ್ನು ತಂದುಕೊಟ್ಟಿವೆ.

ಇಂತಹ ಭೌಗೋಳಿಕ ಪರಿಸರದಲ್ಲಿಯೇ ನೆಲೆನಿಂತ ಹಲವು ಬುಡಕಟ್ಟು ಸಮುದಾಯಗಳಲ್ಲಿ 'ಕುಣಬಿ'ಯರು ಒಂದು. ಇವರು ಗುಜರಾತ, ಮಹಾರಾಷ್ಟ್ರ, ಗೋವಾ ಕಡೆಯಿಂದ ಪೋರ್ಚುಗೀಸರ ದಬ್ಬಾಳಿಕೆಯಿಂದ ಕರ್ನಾಟಕದ ಕಡೆಗೆ ವಲಸೆ ಬಂದಿರುವುದನ್ನು ಇತಿಹಾಸದ ಮೂಲದಿಂದ ತಿಳಿಯಲಾಗಿದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಹನ್ನೊಂದು ತಾಲೂಕುಗಳಿವೆ, ಇವುಗಳಲ್ಲಿ ಜೊಯಿಡಾ, ತಾಲೂಕು ಅತೀ ದೊಡ್ಡವಾಗಿದ್ದು ಇವುಗಳ ಒಟ್ಟು ವಿಸ್ತೀರ್ಣ ೧೦೨೯೧ ಚದರ ಕಿ.ಮೀ. ಇದೆ ಎಂದು 'ಉತ್ತರ ಕನ್ನಡ ಜಿಲ್ಲೆಯ ಅಂಕಿಅಂಶಗಳ ನೋಟ' ೨೦೦೯–೧೦ ಎಂಬ ಕಿರು ಹೊತ್ತಿಗೆಯಲ್ಲಿ ಉಲ್ಲೇಖಿಸಲಾಗಿದೆ'.[೮]

ಉತ್ತರ ಕನ್ನಡ ಜಿಲ್ಲೆಯಲ್ಲಿ ಸುಮಾರು ಐವತ್ತಕ್ಕೂ ಹೆಚ್ಚಿನ ಜಾತಿ, ಬುಡಕಟ್ಟು ಸಮುದಾಯಗಳ ವಾಸ್ತವ್ಯವಿದೆ. ರಾಜ್ಯದ ಕರಾವಳಿ ತೀರದ ಜಿಲ್ಲೆಗಳಲ್ಲಿ ಒಂದಾದ ಈ ಜಿಲ್ಲೆ ತನ್ನ ಪ್ರಾಕೃತಿಕ ಸೌಂದರ್ಯದಿಂದಲೇ 'ಕರ್ನಾಟಕದ ಕಾಶ್ಮೀರ' ಎಂದು ಹೆಸರು ವಾಸಿಯಾಗಿದೆ.

ಭೌಗೋಳಿಕವಾಗಿ ಉತ್ತರ ಕನ್ನಡ ಜಿಲ್ಲೆ ದಕ್ಷಿಣೋತ್ತರವಾಗಿ ನೂರು ಮೈಲುಗಳಷ್ಟು ಉದ್ದವೂ, ಪೂರ್ವಪಶ್ಚಿಮವಾಗಿ ಅರವತ್ತು ಮೈಲಿಗಳಷ್ಟು ಅಗಲವೂ ಇದೆ. ಇದರ ಉತ್ತರಕ್ಕೆ ಬೆಳಗಾವಿ ಜಿಲ್ಲೆ, ಪೂರ್ವಕ್ಕೆ ಧಾರವಾಡ ಮತ್ತು ಶಿವಮೊಗ್ಗ ಜಿಲ್ಲೆಗಳು ಇವೆ. ಪಶ್ಚಿಮಕ್ಕೆ ಅರಬ್ಬಿ ಸಮುದ್ರ ಮತ್ತು ಗೋವಾ, ದಕ್ಷಿಣಕ್ಕೆ ಉಡುಪಿ, ದಕ್ಷಿಣ ಕನ್ನಡ ಜಿಲ್ಲೆಗಳಿವೆ. ಈ ಜಿಲ್ಲೆಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಪಂಚಮರೆಂಬ ಐದು ವರ್ಣಗಳ ಜನರೊಂದಿಗೆ ಹಿಂದುಗಳು, ಕ್ರೈಸ್ತರು, ಮುಸ್ಲಿಮರು, ಜೈನರು ಮುಂತಾದ ಧರ್ಮದ ಸಮುದಾಯದವರು ವಾಸಿಸುತ್ತಿದ್ದಾರೆ. 'ಜಿಲ್ಲೆಯ ಒಟ್ಟು ಜನಸಂಖ್ಯೆ ೧೯೯೧ರ ಜನಗಣತಿಯಂತೆ ೧೨,೨೦,೨೬೦ ಎಂದು ಜಿಲ್ಲಾಡಳಿತ ಪ್ರಕಟಿಸಿದೆ. ಇದರಲ್ಲಿ ೧೧,೯೯೦ ಜನ ಪರಿಶಿಷ್ಟ ಜಾತಿಗೆ ಸೇರಿದ ಜನರಿದ್ದಾರೆ ಎಂದು ಸೂಚಿಸಿದ್ದಾರೆ'.[೯]

ಈ ಜಿಲ್ಲೆಯಲ್ಲಿ ಹವ್ಯಕ, ಹೆಗ್ಗಡೆ, ದೈವಜ್ಞ, ಗೌಡಸಾರಸ್ವತ ಮುಂತಾದ ಬ್ರಾಹ್ಮಣರು; ನಾಡವರು, ನಾಮಧಾರಿಗಳು, ಕೊಮಾರಪಂಥ, ಕೊಂಕಣರು, ಮರಾಠರು ಮೊದಲಾದ

ಕೃಷಿಕರು; ಕುಂಬಾರ, ಆಚಾರಿ, ಗಾಣಿಗ, ವರ್ಣೇಕರ ಮುಂತಾದ ಕುಲಕಸುಬಿನವರು; ಅಂಬಿಗ, ಹರಿಕಾಂಥ, ಖಾರ್ವಿ, ಗಾಬಿತ ಇತ್ಯಾದಿ ಮೀನುಗಾರರು; ಅಗೇರ, ಮುಕ್ರಿ, ಹಳ್ಳೇರ, ಚಮಗಾರ, ಮೊಗೆರ, ದಲಿತರು ಇನ್ನೂ ಇತ್ಯಾದಿ ಹಲವು ಜಾತಿ ಜನರು ವಾಸಿಸುತ್ತಿದ್ದಾರೆ. ಹಾಲಕ್ಕಿಗಳು, ಗೊಂಡರು, ಕುಣಬಿಯರು, ಸಿದ್ದಿಯವರು, ಗೌಳಿಯವರು ಮುಂತಾದ ಬುಡಕಟ್ಟು ಸಮುದಾಯಗಳು ಇಲ್ಲಿಯೇ ನೆಲೆಸಿದ್ದಾರೆ.

ಪ್ರತಿಯೊಂದು ಸಮುದಾಯಗಳ ಆಚಾರ-ವಿಚಾರ, ನಡೆ-ನುಡಿ, ನಂಬಿಕೆ-ಸಂಪ್ರದಾಯಗಳಲ್ಲಿ ಅನೇಕ ವೈವಿಧ್ಯತೆಗಳಿವೆ. ಅವುಗಳಲ್ಲಿ 'ಕುಣಬಿ' ಸಹ ಒಂದು ಬುಡಕಟ್ಟು ಸಮುದಾಯ. ಇವರು ತಮ್ಮದೇ ಆದ ಸಂಸ್ಕೃತಿ ಮತ್ತು ಭಾಷೆಯನ್ನು ಅಳವಡಿಸಿಕೊಂಡು ಬಂದಿರುವುದು ಪ್ರಸ್ತುತ ಅಧ್ಯಯನದಿಂದ ತಿಳಿದುಬರುತ್ತದೆ.

ಬುಡಕಟ್ಟುಗಳನ್ನು ಗುರುತಿಸಲು ೧೯೫೩ರ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಆಯೋಗವು ಬುಡಕಟ್ಟುಗಳ ಎಂಟು ಲಕ್ಷಣಗಳನ್ನು ಈ ರೀತಿಯಾಗಿ ಹೇಳಿದೆ:

೧. 'ನಾಗರಿಕ ಸಮುದಾಯದಿಂದ ದೂರವಿದ್ದು ಕಾಡು ಮತ್ತು ಬೆಟ್ಟಗಳಲ್ಲಿ ಬದುಕುವವರು.
೨. ನಿಗ್ರೋಯಿಡ್, ಅಸ್ಟ್ರೋಲಾಯಿಡ್, ಮಂಗೋಲಾಯಿಡ್ ಮತ್ತು ಕೊಕೊಸೈಡ್ ಈ ನಾಲ್ಕು ಜನಾಂಗಗಳಲ್ಲಿ ಯಾವುದಾದರೂ ಒಂದಕ್ಕೆ ಸೇರಿರಬೇಕು.
೩. ಬುಡಕಟ್ಟುಗಳು ಪ್ರತ್ಯೇಕವಾದ ಭಾಷೆಯನ್ನು ಹೊಂದಿರಬೇಕು.
೪. ಪಿತೃಪೂಜೆ, ದೆವ್ವಗಳ ಆರಾಧನೆಯನ್ನು ಮಾಡುವ ಪ್ರಾಚೀನ ಆಚರಣೆಯನ್ನು ಹೊಂದಿರಬೇಕು.
೫. ಪ್ರಾಚೀನ ವೃತ್ತಿಗಳಾದ ಬೇಟೆ, ಬೇಸಾಯ ಮತ್ತು ಕಾಡುತ್ಪತ್ತಿಯನ್ನು ಸಂಗ್ರಹಿಸುವ ವೃತ್ತಿಗಳನ್ನು ಮಾಡುವವರಾಗಿರಬೇಕು.
೬. ಮಾಂಸ ಸೇವನೆಯನ್ನು ಮಾಡುವವರಿರಬೇಕು.
೭. ಬುಡಕಟ್ಟುಗಳು ಸಾಮಾನ್ಯವಾಗಿ ಅರೆಬೆತ್ತಲೆ, ಬೆತ್ತಲೆಯಾಗಿದ್ದು, ಮರದ ತೊಗಟೆ, ಎಲೆಗಳನ್ನು ಬಳಸುವವರಾಗಿರಬೇಕು.
೮. ವಲಸೆ ಸಂಸ್ಕೃತಿಯನ್ನು ಹೊಂದಿದ್ದು ಕುಣಿತ, ಕುಡಿತಗಳಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿರಬೇಕು'.[೧೦]

ಈ ಮೇಲಿನ ಎಂಟು ಲಕ್ಷಣಗಳನ್ನು ನೋಡಿದಾಗ ಕುಣಬಿಯರು ಇದರಲ್ಲಿ ಕನಿಷ್ಠ ಪಕ್ಷ ಆರು ಲಕ್ಷಣಗಳನ್ನು ಹೊಂದಿದ್ದಾರೆ ಎಂಬುದನ್ನು ಗಮನಿಸಲಾಗಿದೆ. 'ಒಂದು ನಿರ್ಧಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂತಹ ರಾಜಕೀಯವಾಗಿ ಅಥವಾ

ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು"[೧೧] ಎಂದು 'ಲಂಡನ್ ರಾಯಲ್ ಆಂಥ್ರೋಪೊಲಾಜಿಕಲ್ ಇನ್ಸ್‌ಟಿಟ್ಯೂಟ್' ವ್ಯಾಖ್ಯಾನಿಸಿದೆ.

ಪ್ರಮುಖ ಬುಡಕಟ್ಟುಗಳನ್ನು ಕುರಿತಂತೆ ಅಲ್ಲಲ್ಲಿ ಸ್ಥಳೀಯ ಮಟ್ಟದ ಅಧ್ಯಯನಗಳು, ಕೆಲವು ಸಮುದಾಯಗಳ ಬಗ್ಗೆ ಪಿಎಚ್.ಡಿ. ಅಧ್ಯಯನಗಳೂ ಆಗಿವೆ. ಆದರೆ ಅಲೆಮಾರಿ ಮತ್ತು ಅರೆ-ಅಲೆಮಾರಿ ಸ್ವರೂಪದ ಸಮುದಾಯಗಳು ಎಲ್ಲ ವಿಚಾರಗಳಲ್ಲೂ ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಸಾಮಾಜಿಕವಾಗಿ ಕೂಡಾ ಅಭದ್ರತೆಯಿಂದ ಬಳಲುತ್ತಿರುವ ಇಂಥಹ ಸಣ್ಣ ಸಮುದಾಯಗಳು ಆತ್ಮವಿಶ್ವಾಸವಿಲ್ಲದ ದೀನ ಬದುಕನ್ನು ಬದುಕುತ್ತಿವೆ. ಸೋಜಿಗವೆಂದರೆ ಇಂಥ ನಿರ್ಲಕ್ಷಿತ ಸಣ್ಣ ಸಮುದಾಯಗಳು ಕೂಡ ಸಾಂಸ್ಕೃತಿಕವಾದ ಅನನ್ಯತೆಯನ್ನು ಕಾಪಾಡಿಕೊಂಡು ಬಂದಿವೆ ಎಂಬುದು, ತಮ್ಮದೇ ಆದ ಭಾಷೆ, ಸಂಸ್ಕೃತಿ ಮತ್ತು ಸಾಮಾಜಿಕ ಪದ್ಧತಿಗಳನ್ನು, ಪರಂಪರೆಯಿಂದ ಬಂದ ವೃತ್ತಿಪರತೆಯನ್ನು, ಸ್ಥಳೀಯವಾದ ಜ್ಞಾನ ಪರಂಪರೆಯನ್ನು ರಕ್ಷಿಸಿಕೊಂಡು ಬಂದಿವೆ.

ಅದರಲ್ಲೂ ಆರ್ಥಿಕ ಸಂಕಷ್ಟ, ಸಾಮಾಜಿಕ ಅಭದ್ರತೆ ಹಾಗೂ ಆಧುನಿಕತೆಯ ಸಮಕಾಲೀನ ಸವಾಲುಗಳನ್ನು ಎದುರಿಸಬೇಕಾದ ಅನಿವಾರ್ಯತೆಗಳಿಗೆ ಒಳಗಾಗಿರುವ ಇಂತಹ ಸಮುದಾಯಗಳು ಸಾಮಾಜಿಕವಾಗಿ ಯಾವ ಗುಂಪಿಗೆ ಸೇರುತ್ತವೆ, ಅವುಗಳ ಸಾಂಸ್ಕೃತಿಕ ಪರಂಪರೆ ಯಾವುದು, ಸಾಮಾಜಿಕ ಮತ್ತು ಆರ್ಥಿಕ ಮುಖಗಳನ್ನು ಆಧ್ಯಯನ ಈ ಸಮುದಾಯಗಳಲ್ಲಿ ಅರೆಅಲೆಮಾರಿ ಎನಿಸಿದ 'ಕುಣಬಿ' ಸಮುದಾಯವು ಒಂದು.

ದುರ್ಗಮವಾದ ಅರಣ್ಯಗಳಲ್ಲಿ ವಾಸಿಸುತ್ತ ಕುಮರಿ ಬೇಸಾಯವನ್ನು ತನ್ನ ಪಾರಂಪರಿಕ ಕಸುಬನ್ನಾಗಿ ಪೋಷಿಸಿಕೊಂಡು ಬಂದಿದ್ದ ಈ ಸಮುದಾಯ ನಿಸರ್ಗದ ಬಗೆಗೆ ಅಪಾರವಾದ ತಿಳುವಳಿಕೆಯನ್ನು ಇಟ್ಟುಕೊಂಡಿರುವಂಥದ್ದು. ಆದರೆ ಈ ಸಮುದಾಯ ಪ್ರಸ್ತುತದಲ್ಲಿ ಎದುರಿಸುತ್ತಿರುವ ಸವಾಲುಗಳು ಹಲವಾರು. ಕುಣಬಿ ಜನ ಸಮುದಾಯ ಇಂದು ಎದುರಿಸುತ್ತಿರುವ ಭೂಮಿ ಸಮಸ್ಯೆ, ಅರಣ್ಯ ಸಮಸ್ಯೆ, ಸಾಮಾಜಿಕ ದಬ್ಬಾಳಿಕೆ, ವ್ಯವಸ್ಥೆಯ ನಿರ್ಲಕ್ಷ್ಯ, ಶೈಕ್ಷಣಿಕ ಹಿನ್ನಡೆ ಹಾಗೂ ಸಾಂಸ್ಕೃತಿಕ ಶಿಥಿಲತೆಗಳನ್ನು ಅಧ್ಯಯನ ಮಾಡುವ ಮೂಲಕ ನಿಜವಾದ ಸಮಸ್ಯೆಗಳನ್ನು ಮನಗಾಣುವುದು. ಈ ಅಧ್ಯಯನದ ಉದ್ದೇಶವಾಗಿದೆ.

### ೧.೧ ಅಧ್ಯಯನದ ತಾತ್ವಿಕತೆ

ಇದು ಆದಿವಾಸಿ ಸಮುದಾಯದ ವರ್ತಮಾನಗಳ ಸ್ಥಿತಿಗತಿಗಳ ಕುರಿತ ಅಧ್ಯಯನವಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಷ್ಟೇ ಅಲ್ಲ, ಇಡೀ ದಕ್ಷಿಣ ಭಾರತದಲ್ಲಿಯೇ ಅತ್ಯಂತ ವಿಶಿಷ್ಟವೆನಿಸುವ ಕುಣಬಿ ಸಮುದಾಯವನ್ನು ಈ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಕರ್ನಾಟಕದಲ್ಲಿ ಉತ್ತರ ಕನ್ನಡ ಜಿಲ್ಲೆ ಅತ್ಯಂತ ವಿಶಿಷ್ಟವಾದ ಭೂಪ್ರದೇಶ. ಸಂಪದ್ಭರಿತ ಅರಣ್ಯ, ತುಂಬಿ

ಹರಿಯುವ ನದಿಗಳು, ಧುಮ್ಮಿಕ್ಕುವ ಜಲಪಾತಗಳು, ಮೋಹಕ ಕಣಿವೆಗಳು ಮತ್ತು ಅಪಾರ ವೈವಿಧ್ಯಮಯ ಸಮುದಾಯ ಹೊಂದಿರುವ ಜಿಲ್ಲೆ. ಪ್ರಾಯಶಃ ಕರ್ನಾಟಕದಲ್ಲಿ ಅತ್ಯಂತ ಹೆಚ್ಚು ವೈವಿಧ್ಯಮಯ ಸಮುದಾಯಗಳು ಬದುಕುತ್ತಿರುವುದು ಉತ್ತರ ಕನ್ನಡ ಜಿಲ್ಲೆಯಲ್ಲಿ. ಸಿದ್ಧಿಯರು, ಗೌಳಿಗರು, ಕುಣಬಿಯರು, ಮುಕ್ರಿಯರು, ಹಳ್ಳೇರು, ಹರಿಕಾಂತರು, ಕರೆಒಕ್ಕಲು, ಗಾಮೊಕ್ಕಲು, ಹಾಲಕ್ಕಿ ಒಕ್ಕಲು, ಆಗೆರ, ಮೇದ, ಡುಂಗ್ರಿ, ಗರಾಸಿಯಾ, ಗೊಂಡರು, ಹಸಲರು, ಮುಂತಾದ ವಿಶಿಷ್ಟ ಸಮುದಾಯಗಳು ಉತ್ತರ ಕನ್ನಡ ಜಿಲ್ಲೆಯಲ್ಲಿವೆ. ಮೇಲೆ ಉಲ್ಲೇಖಿಸಿರುವ ಎಲ್ಲ ಸಮುದಾಯಗಳಿಗೆ ಬುಡಕಟ್ಟು ಲಕ್ಷಣಗಳಿದ್ದು, ಅದರಲ್ಲಿ ಮೇದ, ಡುಂಗ್ರಿ, ಗರಾಸಿಯಾ, ಸಿದ್ಧಿ, ಗೊಂಡಿ ಮತ್ತು ಹಸಲರು ಮಾತ್ರ ಸರಕಾರದ ಘೋಷಿತ ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿದ್ದಾರೆ. ಉಳಿದಂತೆ ಯಾವ ಸಮುದಾಯಗಳು ಪರಿಶಿಷ್ಟ ಪಂಗಡಗಳೆಂದು ಪರಿಗಣಿಸಲ್ಪಟ್ಟಿಲ್ಲ. ಆದರೆ ಮೇಲೆ ಉಲ್ಲೇಖಿಸಲ್ಪಟ್ಟಿರುವ ಸಮುದಾಯಗಳು ಮೇಲ್ನೋಟಕ್ಕೇನೆ ಬುಡಕಟ್ಟುಗಳೆಂದು ಪರಿಗಣಿಸಲ್ಪಡುವಷ್ಟು ದಟ್ಟ ಬುಡಕಟ್ಟು ಲಕ್ಷಣಗಳನ್ನು ಹೊಂದಿವೆ. ಜೊತೆಗೆ ಮಾನವಶಾಸ್ತ್ರೀಯ ಮಾನದಂಡಗಳ ಮೂಲಕ ಅಧ್ಯಯನಕ್ಕೊಳಪಡಿಸಿದರೆ ಈ ಸಮುದಾಯಗಳು ಆದಿವಾಸಿ ಸಮುದಾಯಗಳೆಂದು ಪರಿಗಣಿಸುವಲ್ಲಿ ಹೊಸದಿಗಂತ ತೆರೆಯಬಲ್ಲದು.

ಪರಿಶಿಷ್ಟ ಪಂಗಡ, ಬುಡಕಟ್ಟು ಅಥವಾ ಟ್ರೈಬ್ ಎಂದು ಪರಿಗಣಿಸಲ್ಪಡಲು ಇರುವ ಶೈಕ್ಷಣಿಕ ಅಥವಾ ಸರಕಾರಿ ಮಾನದಂಡಗಳೇನೇ ಇದ್ದರೂ ಸಹ ಗೌಳಿ, ಕುಣಬಿ, ಕರೆ ಒಕ್ಕಲು, ಹಳ್ಳೇರು, ಶುದ್ಧಾಂಗವಾಗಿ ಈ ದೇಶದ ಆದಿವಾಸಿ ಸಮುದಾಯಗಳಿಗೆ ಇರಬಹುದಾದ ಎಲ್ಲ ಆದಿಮ ಲಕ್ಷಣಗಳನ್ನು ಸಾಂಕೇತಿಕವಾಗಿ ಮಾತ್ರವಲ್ಲದೆ ಆಚರಣೆಗಳಲ್ಲಿ ಮತ್ತು ನಿತ್ಯದ ಲೌಕಿಕದ ವ್ಯವಹಾರಗಳಲ್ಲಿ ಇನ್ನೂ ಜೀವಂತವಾಗಿ ಇಟ್ಟುಕೊಂಡಿದ್ದಾರೆ. ಈ ಕಾರಣದಿಂದ ಸರಕಾರದ ಘೋಷಿತ ಪರಿಶಿಷ್ಟ ಪಂಗಡದ ಪಟ್ಟಿಯನ್ನು ಪಕ್ಕಕ್ಕಿಟ್ಟು ಆದಿವಾಸಿ ಲಕ್ಷಣಗಳಿರುವ ಮೇಲ್ಕಾಣಿಸಿದ ಸಮುದಾಯಗಳನ್ನು ಬುಡಕಟ್ಟುಗಳೆಂದು ಪರಿಗಣಿಸಬಹುದಾಗಿದೆ.

ಪ್ರಸ್ತುತ ಈ ಅಧ್ಯಯನದ ಪ್ರಮುಖ ಉದ್ದೇಶವೇನೆಂದರೆ ಕರ್ನಾಟಕ ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಸಿಸುತ್ತಿರುವ ಕುಣಬಿ ಬುಡಕಟ್ಟು ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಈ ಪ್ರಬಂಧದಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳಲ್ಲಿ ಕುಣಬಿಗರು ಪ್ರಮುಖರು. ಯಾವ ಶೈಕ್ಷಣಿಕ ಕಸರತ್ತುಗಳಿಲ್ಲದೆಯೇ ಮೇಲ್ನೋಟಕ್ಕೇನೇ ಕುಣಬಿಗಳನ್ನು ಒಂದು ಬುಡಕಟ್ಟು ಸಮುದಾಯವೆಂದು ಪರಿಗಣಿಸಬಹುದಾದಷ್ಟು ದಟ್ಟ ಬುಡಕಟ್ಟು ಲಕ್ಷಣಗಳನ್ನು ಈ ಸಮುದಾಯ ಹೊಂದಿದೆ. ಕುಣಬಿಗಳು ಕೇವಲ ತಮ್ಮ ಉಡಿಗೆ, ತೊಡುಗೆ, ಭಾಷೆ, ಸಂಸ್ಕೃತಿ ಮತ್ತು ಸಾಮಾಜಿಕ ಪದ್ಧತಿಗಳಿಂದ ಭಿನ್ನವಾಗಿಲ್ಲ. ಕುಣಬಿಗಳ

ನಿತ್ಯದ ಬದುಕು ಮತ್ತು ಪ್ರಾಚೀನ ಸಾಂಸ್ಕೃತಿಕ ಕುರುಹುಗಳಿಂದಲೂ ಕುಣಬಿಗಳು ಇತರೆ ಸಮುದಾಯಗಳಿಗಿಂತ ಭಿನ್ನವಾಗಿದ್ದಾರೆ. ಕುಣಬಿಗಳು ಅಗಮ್ಯ ಕಾಡುಗಳಲ್ಲಿ ವಾಸಿಸುತ್ತಿದ್ದರೂ ಸಹ 'ಮುಖ್ಯವಾಹಿನಿ' ಎಂದು ಕರೆಯಲ್ಪಡುವ ಸಮಾಜದಿಂದ ದೂರ ಉಳಿದಿಲ್ಲ.

ಕುಣಬಿ ಸಮುದಾಯವು ಪರಿಶಿಷ್ಟ ವರ್ಗಕ್ಕೆ ಸೇರದ ಬುಡಕಟ್ಟು ಸಮುದಾಯವಾಗಿದ್ದು ಹೆಚ್ಚಾಗಿ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಯಲ್ಲಾಪುರ, ಅಂಕೋಲಾ, ಕಾರವಾರ ತಾಲೂಕಿನಲ್ಲಿ ನೆಲೆಸಿದೆ. ಅಲ್ಲಲ್ಲಿ ಸಣ್ಣ ಸಣ್ಣ ಘಟಕಗಳು ಹಳಿಯಾಳ, ಕುಂದಾಪೂರ ಹಾಗೂ ಶಿರಸಿ ತಾಲೂಕಿನಲ್ಲಿ ಕಾಣಿಸುತ್ತವೆ. ಕೆಲವು ಗುಂಪುಗಳು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕು ಮತ್ತು ಉಡುಪಿ ಜಿಲ್ಲೆಯ ಕಾರ್ಕಳ ಹಾಗೂ ಬಂಟ್ವಾಳ ತಾಲೂಕಿನಲ್ಲಿ ನೆಲೆಸಿವೆ. ಶಿವಮೊಗ್ಗ, ಚಿಕ್ಕಮಗಳೂರು ಹಾಗೂ ಬೆಳಗಾವಿ ಜಿಲ್ಲೆಯ ಕೆಲ ಪ್ರದೇಶಗಳಲ್ಲಿ ಇವರು ಕಂಡುಬರುತ್ತಾರೆ. ಅಲ್ಲದೆ ಕೇರಳ ಮತ್ತು ಮಹಾರಾಷ್ಟ್ರ ರಾಜ್ಯದ ಕೆಲವು ಪ್ರದೇಶಗಳಲ್ಲಿದ್ದಾರೆ. ಕುಣಬಿ ಸಮುದಾಯವು ಸಹ ದಕ್ಷಿಣ ಭಾರತದ ಪ್ರಮುಖ ಬುಡಕಟ್ಟು ಸಮುದಾಯಗಳಲ್ಲಿ ಒಂದು ಎಂದು ಗುರುತಿಸಕೊಂಡಿದೆ. ಅವರು ಸಾಮಾಜಿಕವಾಗಿ ಹಿಂದುಳಿದವರಾಗಿ. ಶಿಕ್ಷಣ ಮತ್ತು ಆರ್ಥಿಕವಾಗಿ ಬಡವರಾಗಿ ಮತ್ತು ರಾಜಕೀಯದಲ್ಲಿ ಅಸಂಘಟತರಾಗಿ ತೋರುತ್ತಾರೆ. ಅವರನ್ನು ಉತ್ತರ ಕನ್ನಡ ಜಿಲ್ಲೆಯ ಅತ್ಯಂತ ದುರ್ಬಲ ಸಮುದಾಯ ಎಂದು ಗುರುತಿಸಲಾಗಿದೆ. ಕುಣಬಿ ಸಮುದಾಯದ ಸಾಮಾಜಿಕ ಹಾಗೂ ಆರ್ಥಿಕ ಸ್ಥಾನಮಾನಗಳು ಕರ್ನಾಟಕದ ಇತರ ಪಂಗಡಗಳಂತೆ ಕೆಳಮಟ್ಟದಲ್ಲಿವೆ. ಆದಾಗ್ಯೂ ಕರ್ನಾಟಕ ಸರಕಾರವು ಕುಣಬಿ ಸಮುದಾಯವನ್ನು ಪರಿಶಿಷ್ಟ ಪಂಗಡದ ಯಾದಿಯಲ್ಲಿ ಸೇರಿಸಿಲ್ಲ.

ಇನ್ನೊಂದು ಮಹತ್ವದ ಸಂಗತಿಯೆಂದರೆ ಇದುವರೆಗೆ ಕುಣಬಿ ಸಮುದಾಯದ ಬಗ್ಗೆ ಅಚ್ಚುಕಟ್ಟಾದ ಪ್ರಾಯೋಗಿಕ ಸಮೀಕ್ಷೆ ನಡೆದಿಲ್ಲ. ಅಲ್ಲದೇ ಕುಣಬಿ ಸಮುದಾಯದ ಜೀವನ ಮತ್ತು ಅವರ ಸಮಸ್ಯೆಗಳ ಬಗೆಗೆ ಸಮಗ್ರ ಪ್ರೌಢ ಅಧ್ಯಯನ ಕೂಡ ಆಗಿಲ್ಲ. ಆದರೂ ಅಲ್ಲಲ್ಲಿ ಕೆಲವು ಲೇಖನಗಳು, ವರದಿಗಳು ಪ್ರಾದೇಶಿಕ ದಿನಪತ್ರಿಕೆಯಲ್ಲಿ ಸಚಿತ್ರ ಲೇಖನಗಳು, ಜಿಲ್ಲಾ ಗೆಜೆಟೀಯರ್‌ನಲ್ಲಿ ಅಂಕಿಅಂಶ ಸಹಿತ ವರದಿ, ರಾಜ್ಯ ಪರಿಪತ್ರ ಸಮೀಕ್ಷೆಗಳು ಕುಣಬಿ ಸಮುದಾಯದ ಬಗ್ಗೆ ತಜ್ಞರ, ಸಂಶೋಧಕರ ಗಮನ ಸೆಳೆಯುವಲ್ಲಿ ಸಫಲವಾಗಿವೆ. ಈ ದಿಸೆಯಲ್ಲಿ ಕೆಲವೊಂದು ನಿಚ್ಚಳ ಸಂಗತಿಗಳು ಹಾಗೂ ಸಮಸ್ಯೆಗಳು ಕುಣಬಿ ಸಮುದಾಯದ ಅಧ್ಯಯನ ಸಮೀಕ್ಷೆ ಹಾಗೂ ಪ್ರೌಢ ಪ್ರಬಂಧದ ಆಯ್ಕೆಗೆ ಪ್ರೇರಕವಾಗಿವೆ.

ಇಂದಿಗೂ ಕುಣಬಿ ಸಮುದಾಯಗಳ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳಲ್ಲಿ ಯಾವ ಬದಲಾವಣೆಗಳಾಗಿಲ್ಲ. ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಇನ್ನೂ ಹೀನಾಯ

ಸ್ಥಿತಿಯಲ್ಲಿರುವ ಇಂದಿಗೂ ಅವಮಾನಿತ ಬದುಕನ್ನೇ ನಡೆಸುತ್ತಿರುವುದನ್ನು ಕಾಣಬಹುದು. ಅಲ್ಪಸ್ವಲ್ಪವಾಗಿ ಅಕ್ಷರ ಕಲಿಯುವುದಕ್ಕೆ ಈಗಿನ ಮಕ್ಕಳು ಶಾಲೆಗೆ ಹೋಗುತ್ತಿವೆಯಾದರೂ ಮಧ್ಯದಲ್ಲಿಯೇ ಶಾಲೆ ಬಿಡುವ ಮಕ್ಕಳ ಪ್ರಮಾಣ ಕುಣಬಿ ಸಮುದಾಯಗಳಲ್ಲಿ ಹೆಚ್ಚಾಗಿದೆ. ರಾಜಕೀಯವಾಗಿ ಬೆಳೆಯಲು ಈ ಸಮುದಾಯಕ್ಕೆ ಇನ್ನೂ ಎಷ್ಟು ಶತಮಾನಗಳು ಬೇಕಾಗುತ್ತವೋ ಕಾದು ನೋಡಬೇಕಾಗಿದೆ.

ಸಮುದಾಯದ ಸಾಮಾಜಿಕ ಚರಿತ್ರೆಯಲ್ಲಿ ಕುಣಬಿಯರಿಗೆ ಯಾವ ಅಧಿಕಾರ ವಲಯದಲ್ಲೂ ಸ್ಥಾನಮಾನಗಳು ಲಭ್ಯವಾಗಿಲ್ಲದಿರುವುದು ಕಂಡುಬರುತ್ತದೆ. ಸಮಾಜದ ನ್ಯಾಯ ಪಂಚಾಯ್ತಿಯ ನಿರ್ಣಾಯಕ ಅಧಿಕಾರಸ್ಥ ಸ್ಥಾನಗಳಾಗಲಿ, ರಾಜಕೀಯಾಧಿಕಾರವಾಗಲಿ, ಕುಣಬಿಯರಿಗೆ ದಕ್ಕದೆ ಹೋಗಿರುವುದು ಈ ಸಮುದಾಯದ ಮೌಖಿಕ ಚರಿತ್ರೆಯಲ್ಲಿ ಕಂಡುಬರುತ್ತದೆ. ಈ ಎಲ್ಲ ಮಹತ್ವದ ಚರ್ಚೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

### ೧.೨ ಅಧ್ಯಯನದ ಉದ್ದೇಶಗಳು

ಈ ಕೆಳಗಿನ ಉದ್ದೇಶಗಳನ್ನಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

೧. ಕುಣಬಿಗಳ ಉಗಮ, ವಲಸೆ, ಸಾಮಾಜಿಕ ಸ್ತರೀಕರಣ, ವಸತಿ, ಉಪಭಾಷೆ, ಉಡುಪು, ಆಹಾರಪದ್ಧತಿ, ಆರೋಗ್ಯ ಮತ್ತು ಶಿಕ್ಷಣಗಳಿಗೆ ಸಂಬಂಧಿಸಿದಂತೆ ಕುಣಬಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ವಿಶ್ಲೇಷಣೆ.

೨. ಕುಣಬಿಗಳ ಸಾಮಾಜಿಕಾರ್ಥಿಕ ಬದುಕಿನ ಚಾರಿತ್ರಿಕತೆಯನ್ನು ವಿವರಿಸಿಕೊಳ್ಳುವುದು.

೩. ವರ್ತಮಾನದಲ್ಲಿ ಕುಣಬಿಯರ ಸಾಮಾಜಿಕ ಅಧಿಕಾರ, ಕುಟುಂಬ ನಿರ್ವಹಣೆ, ಆರ್ಥಿಕತೆಯ ಸ್ವರೂಪ ಮತ್ತು ವರ್ತಮಾನದ ದುಡಿಮೆಯ ಮಾದರಿಗಳನ್ನು ಮತ್ತು ಕುಣಬಿಯರ ಸಾಮಾಜಿಕಾರ್ಥಿಕ ಸ್ಥಾನಮಾನಗಳನ್ನು ವಿಶ್ಲೇಷಿಸುವುದು.

೪. ಸರಕಾರದ ಬೃಹತ್ 'ಅಭಿವೃದ್ಧಿ' ಯೋಜನೆಗಳು ಕುಣಬಿ ಸಮುದಾಯ ಮೇಲೆ ಉಂಟುಮಾಡಿರುವ ಪರಿಣಾಮಗಳನ್ನು ವಿವರಿಸಿಕೊಳ್ಳುವುದು.

### ೧.೩ ಅಧ್ಯಯನದ ವ್ಯಾಪ್ತಿ

ಕುಣಬಿಯರು ಶಿವಮೊಗ್ಗ, ಉಡುಪಿ, ದಕ್ಷಿಣ ಕನ್ನಡ, ಚಿಕ್ಕಮಗಳೂರು, ಕೊಡಗು ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆಸಿದ್ದಾರೆ. ಈಗಾಗಲೇ ನಾನು ಸ್ಪಷ್ಟಪಡಿಸಿರುವಂತೆ ಕುಣಬಿ ಸಮುದಾಯ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಯಲ್ಲಾಪೂರ, ಅಂಕೋಲಾ, ಕಾರವಾರ ತಾಲೂಕಿನಲ್ಲಿ ಕಾಣಿಸಿಕೊಳ್ಳುತ್ತಾರೆ. ಆದ್ದರಿಂದ ನನ್ನ ಅಧ್ಯಯನಕ್ಕೆ ಈ ತಾಲೂಕುಗಳನ್ನು

ಆರಿಸಿಕೊಂಡಿದ್ದೇನೆ. ಉಳಿದ ಭಾಗಗಳಿಗೆ ಭೇಟಿ ನೀಡಿದ್ದೇನಾದರೂ ಅಂಕಿ-ಅಂಶ ಇತ್ಯಾದಿ ಮಾಹಿತಿಗಳಿಗೆ ಈ ನಾಲ್ಕು ತಾಲೂಕಿನ ಕುಣಬಿ ವಾಸಸ್ಥಳಗಳನ್ನು ಆಧಾರವಾಗಿಟ್ಟುಕೊಂಡಿದ್ದೇನೆ.

ಈ ತಾಲೂಕುಗಳನ್ನೇ ಆಯ್ಕೆ ಮಾಡಿಕೊಳ್ಳಲು ಬಲವಾದ ಕಾರಣಗಳು ಇವೆ. ಆ ಕಾರಣಗಳೆಂದರೆ,

೧. ಜೋಯಿಡಾ, ಯಲ್ಲಾಪೂರ, ಅಂಕೋಲಾ ಮತ್ತು ಕಾರವಾರ ತಾಲೂಕಿನಲ್ಲಿ ಕುಣಬಿ ಜನಸಂಖ್ಯೆ ಅತಿ ಹೆಚ್ಚಾಗಿದೆ.

೨. ಕಮರಿ ಬೇಸಾಯ ವ್ಯಾಪಕತೆ ಹೆಚ್ಚು.

೩. ಅನೇಕ ಅಭಿವೃದ್ಧಿ ಯೋಜನೆಗಳು ಜಾರಿಗೊಂಡ ತಾಲೂಕುಗಳು ಇವು.

೪. ಇಂದಿಗೂ ದಟ್ಟಾರಣ್ಯ ಉಳಿದು ಜೀವ ವೈವಿಧ್ಯವನ್ನು ಕಾಪಾಡಿಕೊಂಡಿರುವ ಪ್ರದೇಶ ಇವುಗಳಾಗಿವೆ.

ಈ ಎಲ್ಲ ಅಂಶಗಳು ಒಂದು ಸಮುದಾಯದ ಜೀವನ ವಿಧಾನವನ್ನು ರೂಪಿಸುವ ಹಾಗೂ ಸ್ಥಿತ್ಯಂತರಗಳಿಗೆ ಒಳಪಡಿಸುವ ಅಂಶಗಳಾಗಿದ್ದು ಅಧ್ಯಯನಕ್ಕೆ ಸೂಕ್ತವಾದ ಪ್ರದೇಶ ಇವುಗಳಾಗಿವೆ. ಆದ್ದರಿಂದ ಕುಣಬಿ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ 'ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ' ಎಂಬ ಶೀರ್ಷಿಕೆಯಡಿ ಕುಣಬಿಯರು ನೆಲೆಸಿರುವ ಈ ಸಮುದಾಯಗಳನ್ನು ಮಾತ್ರ ಅಧ್ಯಯನ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ.

| ಅ.ನಂ. | ತಾಲೂಕಾ | ಕುಣಬಿಗಳು ವಾಸವಾಗಿರುವ ಹಳ್ಳಿಗಳು | ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಹಳ್ಳಿಗಳು |
|---|---|---|---|
| ೧ | ಜೋಯಿಡಾ | ೧೫೮ | ೩೨ |
| ೨ | ಕಾರವಾರ | ೨೬ | ೦೫ |
| ೩ | ಯಲ್ಲಾಪೂರ | ೨೦ | ೦೪ |
| ೪ | ಅಂಕೋಲಾ | ೦೬ | ೦೧ |
| | ಒಟ್ಟು | ೨೧೦ | ೪೨ |

ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ಕುಣಬಿಗಳು ವಾಸವಾಗಿರುವ ಉತ್ತರ ಕನ್ನಡ ಜಿಲ್ಲೆಯ ನಾಲ್ಕು ತಾಲೂಕುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕುಣಬಿಗಳು ವಾಸವಾಗಿರುವ ಈ ನಾಲ್ಕು ತಾಲೂಕುಗಳ ೨೧೦ ಗ್ರಾಮಗಳಲ್ಲಿ ವ್ಯಾಪಕ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ. ಅಲ್ಲದೆ ೧೦೦೦ ಕುಟುಂಬಗಳ Household Survey ಯನ್ನು ಅಂಕಿ ಅಂಶಗಳನ್ನು ನಿಶ್ಚಿತ ಪ್ರಶ್ನಾವಳಿಯ ಮೂಲಕ ಸಂಗ್ರಹಿಸಲಾಗಿದೆ. ಜೊತೆಗೆ ೩೦೦ ಜನ ಕುಣಬಿ

ಸಮುದಾಯದ ಪ್ರಮುಖರನ್ನು 'ವ್ಯಕ್ತಿ ಅಧ್ಯಯನ'ಕ್ಕೆ ಸಂದರ್ಶಿಸಲಾಗಿದೆ. ಈ ನಾಲ್ಕು ತಾಲೂಕಿನಲ್ಲಿ ನೆಲೆಸಿರುವ ಕುಣಬಿ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ನಾಲ್ಕು ತಾಲೂಕಿನ ೨೧೦ ಗ್ರಾಮಗಳಲ್ಲಿ ೪೨ ಗ್ರಾಮಗಳನ್ನು ಅವುಗಳ ವೈಶಿಷ್ಟ್ಯತೆಗನುಗುಣವಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಸಮಷ್ಟಿಯಿಂದ ಶೇಕಡ ೨೦ ನಿದರ್ಶಕಗಳನ್ನು (ಗ್ರಾಮ) Sampling ವಿಧಾನದ ಮೂಲಕ ಆಯ್ಕೆ ಮಾಡಿಕೊಳ್ಳಲಾಗಿದೆ.

### ೧.೪ ಅಧ್ಯಯನದ ವೈಧಾನಿಕತೆ

ಪ್ರಸ್ತುತ ಅಧ್ಯಯನಕ್ಕೆ ಉತ್ತರ ಕನ್ನಡ ಜಿಲ್ಲೆಯ ಪರಿಸರದಲ್ಲಿ ಬದುಕುತ್ತಿರುವ 'ಕುಣಬಿ' ಸಮುದಾಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಮುಖ್ಯವಾಗಿ ಉತ್ತರ ಕನ್ನಡ ಜಿಲ್ಲೆಯು ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ವೈವಿಧ್ಯಮಯ ಜನಸಮುದಾಯಗಳಿಂದ ಕೂಡಿದ ಜಿಲ್ಲೆಯಾಗಿದೆ. ಸಿದ್ದಿ, ಕುಣಬಿ, ಗಾಮೊಕ್ಕಲು, ಮುರ್ರೆ, ಅಗೇರ, ಕರೆಒಕ್ಕಲು, ಕೋಮಾರಪಂತ, ಹಸಲ, ಗೌಳಿ ಮುಂತಾದ ಜನ ಸಮುದಾಯಗಳು ಉತ್ತರ ಕನ್ನಡ ಜಿಲ್ಲೆಯ ಜನ ವೈವಿಧ್ಯದ ಸಿರಿವಂತಿಕೆಯನ್ನು ಹೆಚ್ಚಿಸಿದೆ. ಅದರಲ್ಲಿ ಕುಣಬಿಗಳು ವಿಶೇಷವಾಗಿ ಕಂಡುಬರುತ್ತಾರೆ. ತಮ್ಮ ಅಪರೂಪದ ಉಡುಗೆ ತೊಡಿಗೆ, ಅನನ್ಯ ಜೀವನ ವಿಧಾನಗಳಿಂದ ಕುಣಬಿಗಳು ಭಿನ್ನರಾಗಿ ಕಾಣುತ್ತಾರೆ. ಕುಣಬಿಗಳು ಸದರಿ ಸಮುದಾಯದ ಸಾಂಸ್ಕೃತಿಕ ಚೈತನ್ಯವನ್ನು ಜೀವಂತವಾಗಿಟ್ಟುಕೊಂಡು ಬಂದವರು. ಪ್ರಸ್ತುತ ನಾನು ಕುಣಬಿ ಸಮುದಾಯದ ಸಾಮಾಜಿಕಾರ್ಥಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಉದ್ದೇಶಿಸಿದ್ದೇನೆ. ಮುಖ್ಯವಾಗಿ ಇದು ಕ್ಷೇತ್ರಕಾರ್ಯಧಾರಿತ ಅಧ್ಯಯನವಾಗಿದೆ. ಈಗಾಗಲೇ ಈ ಸಮುದಾಯದ ಮೇಲೆ ನಡೆದ ಅಧ್ಯಯನಗಳನ್ನು ಗಮನಿಸಿ, ಅದರ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಈ ಸಮುದಾಯದ ವರ್ತಮಾನದ ಸ್ಥಿತಿಗತಿಗಳನ್ನು ಅಧ್ಯಯನ ಮಾಡುವ ಸಲುವಾಗಿ ಪ್ರಸ್ತುತ ಅಧ್ಯಯನಕ್ಕೆ ಈ ಕೆಳಗಿನ ವಿಧಾನಗಳನ್ನು ಅನುಸರಿಸಲಾಗಿದೆ.

೧. ಲಭ್ಯ ಸಾಹಿತ್ಯ ಆಕರಗಳ ಅಧ್ಯಯನ

೨. ಚಾರಿತ್ರಿಕ ವಿಧಾನ

೩. ಪ್ರಶ್ನಾವಳಿ ಮಾದರಿ

೪. ಗುಂಪು ಚರ್ಚೆ ಮತ್ತು ಸಂದರ್ಶನ ವಿಧಾನ

೫. ಅವಲೋಕನ ವಿಧಾನ

೬. ವ್ಯಕ್ತಿ ಅಧ್ಯಯನ ವಿಧಾನ

೭. ನಮೂನೆ ವಿಧಾನ

**೧. ಲಭ್ಯ ಸಾಹಿತ್ಯ ಆಕರಗಳ ಅಧ್ಯಯನ**

ವಸಾಹತು ಆಡಳಿತದ ಕಾಲದಿಂದ ಇಲ್ಲಿಯವರೆಗೆ ಕುಣಬಿಗಳ ಕುರಿತು ನಡೆದಿರುವ ಅಧ್ಯಯನಗಳನ್ನು ಪರಾಮರ್ಶಿಸಲಾಗುವುದು. ಜೊತೆಗೆ ಕುಣಬಿಗಳ ಮೌಖಿಕ ಸಾಹಿತ್ಯವನ್ನು ಪ್ರಧಾನ ಆಕರವೆಂದು ಪರಿಗಣಿಸಲಾಗುವುದು.

**೨. ಚಾರಿತ್ರಿಕ ವಿಧಾನ**

ಲಭ್ಯ ಮೌಖಿಕ ಮತ್ತು ಲಿಖಿತ ಸಾಹಿತ್ಯಿಕ ಆಕರಗಳ ಮೂಲಕ ಕುಣಬಿಗಳ ಸಮಾಜದ ಮತ್ತು ಕುಣಬಿ ಸಮುದಾಯದವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಗತಿತಾರ್ಕಿಕ ಅಧ್ಯಯನ ವಿಧಾನದ ಮೂಲಕ ಅಧ್ಯಯನ ಮಾಡಲಾಗಿದೆ. ಇದಕ್ಕಾಗಿ ಕುಣಬಿಗಳ ಮೌಖಿಕ ಸಾಹಿತ್ಯ, ಆಚರಣೆ, ಆರಾಧನಾ ಪರಂಪರೆ, ಸ್ಮಾರಕಗಳು ಮತ್ತು ವಿಧಿ ನಿಷೇಧಗಳನ್ನು ಪ್ರಧಾನವಾಗಿ ಮತ್ತು ಲಿಖಿತ ಆಕರಗಳನ್ನು ಅನುಷಂಗಿಕವಾಗಿ ಬಳಸಿಕೊಳ್ಳಲಾಗಿದೆ.

**೩. ಪ್ರಶ್ನಾವಳಿ ಮಾದರಿ**

ಪಾಲ್ಗೊಳ್ಳುವಿಕೆಯಿಂದ ನಿರೀಕ್ಷಣಾ ವಿಧಾನದ ಮೂಲಕ ಮಾಹಿತಿ ಸಂಗ್ರಹಿಸುವುದರ ಜೊತೆಗೆ ಪೂರ್ವನಿರ್ಧಾರಿತ ಹಾಗೂ ಪೂರ್ವನಿರ್ಧಾರಿತವಲ್ಲದ ಪ್ರಶ್ನಾವಳಿಯನ್ನುಳ್ಳ ಸಂದರ್ಶನದ ಶೆಡ್ಯೂಲ್ ತಯಾರಿಸಿ ಕುಣಬಿಯರ ವರ್ತಮಾನದ ಸಾಮಾಜಿಕಾರ್ಥಿಕ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳಲು ನಿಶ್ಚಿತ ಪ್ರಶ್ನಾವಳಿಯನ್ನು ರೂಪಿಸಿಕೊಂಡು ಸದರಿ ಪ್ರಶ್ನಾವಳಿಯನ್ನು ಕುಣಬಿ ಸಮುದಾಯದವರ 'Household Data' ಸಂಗ್ರಹಿಸಲು ಬಳಸಲಾಯಿತು. ಈ ಪ್ರಶ್ನಾವಳಿಯನ್ನು ಮನೆಯ ಯಜಮಾನನಿಗೆ ಕೊಡಲಾಯಿತು, ಪ್ರಸ್ತುತ ಮಾಹಿತಿಯನ್ನು ಕುಟುಂಬದ ಯಜಮಾನ, ಹಳ್ಳಿಯ ಸಮುದಾಯದ ಮುಖಂಡ, ಕುಣಬಿ ಮುಖ್ಯಸ್ಥ, ಸ್ಥಳೀಯ ನಾಯಕರು, ಸಮುದಾಯದಲ್ಲಿರುವ ಹಿರಿಯರು ಮತ್ತು ತಿಳುವಳಿಕಸ್ಥರಿಂದ ಆಯ್ದ ಗ್ರಾಮದಲ್ಲಿನ ಕುಣಬಿ ಕುಟುಂಬಗಳ ಸಾಮಾನ್ಯ ವಿವರಗಳನ್ನು ಸಂಗ್ರಹಿಸಲಾಯಿತು. ಈ ಮಾಹಿತಿ ಸಂಗ್ರಹಕ್ಕೆ ಕುಣಬಿಗಳ ಮಾದರಿ (Sample) ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಸರ್ವೆ ಮಾಡಲಾಗಿದೆ.

**೪. ಗುಂಪು ಚರ್ಚೆ ಮತ್ತು ಸಂದರ್ಶನ**

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕುಣಬಿ ಸಮುದಾಯಗಳ ಆಯ್ದ ಗ್ರಾಮಗಳಲ್ಲಿನ ವ್ಯಕ್ತಿಗಳನ್ನು ಸಂದರ್ಶನ ಮಾಡಲಾಗಿದೆ. ಕುಣಬಿ ಸಮುದಾಯದ ವಿಭಿನ್ನ ಮುಖಗಳ ಬಗ್ಗೆ ಜ್ಞಾನ ಪಡೆಯುವ ಸಲುವಾಗಿ ಕೆಲವು ಗುಂಪಾಗಿಸಿ ನಿಶ್ಚಿತ ಪ್ರಶ್ನಾವಳಿಯ ಮೂಲಕ ಗುಂಪು-ಚರ್ಚೆಗಳನ್ನು ಏರ್ಪಡಿಸಲಾಗಿತ್ತು. ಅನೇಕ ಗುಂಪು ಚರ್ಚೆಗಳಲ್ಲಿ ಜನರು ಮುಕ್ತ ಹಾಗೂ ನೇರವಾಗಿ ಮಾತನಾಡಿದರಲ್ಲದೆ, ಅವರ ಪ್ರತಿಕ್ರಿಯೆಗಳು ಮಾಹಿತಿಪೂರ್ಣವಾಗಿದ್ದವು.

ಸಮುದಾಯದ ಸದಸ್ಯರು ವಿಭಿನ್ನವಾದ ದೃಷ್ಟಿಕೋನಗಳನ್ನು ದಾಖಲಿಸಲು ಅತ್ಯಂತ ಕಾಳಜಿವಹಿಸಲಾಯಿತು. ಗುಂಪು ಚರ್ಚೆಗಳಿಂದ ಸಾಧಕ-ಬಾಧಕಗಳೆರಡೂ ಇದ್ದವು. ಧನಾತ್ಮಕವಾಗಿ ಹೇಳಬೇಕೆಂದರೆ, ಗುಂಪು ಚರ್ಚೆಗಳಲ್ಲಿ ಭಾಗವಹಿಸಿದವರಲ್ಲಿ ಒಬ್ಬರಲ್ಲಾ ಒಬ್ಬರು ಹೆಚ್ಚು ಕಡಿಮೆ ಎಲ್ಲಾ ಪ್ರಶ್ನೆಗಳಿಗೂ ಉತ್ತರಿಸಿದರು. ಹಾಗೆಯೇ, ಯಾರಾದರೂ ಅಸ್ಪಷ್ಟವಾದ ಅಥವಾ ತಪ್ಪು ಉತ್ತರವನ್ನು ಕೊಟ್ಟಿದ್ದರೆ, ತಕ್ಷಣವೇ ಉಳಿದವರು ಅದನ್ನು ಸರಿಪಡಿಸುತ್ತಿದ್ದರು. ಗುಂಪು ಚರ್ಚೆಯನ್ನು ಸಾಧ್ಯವಾಗಿಸಿ ಅವರಿಂದ ಮಾಹಿತಿ ಪಡೆಯಲಾಗಿದೆ. ಇದರಿಂದ ವ್ಯಕ್ತಿಗತ ಮತ್ತು ಸಾಮುದಾಯಿಕ ಜನಾಭಿಪ್ರಾಯಗಳನ್ನು ಪಡೆಯಲು ಸಾಧ್ಯವಾದಂತಾಗಿದೆ.

**೫. ಅವಲೋಕನ ವಿಧಾನ**

ಕುಣಬಿಗಳ ಜೀವನೋಪಾಯದ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕುಣಬಿಯರ ಜೊತೆಯಲ್ಲಿಯೇ ಸಾಕಷ್ಟು ದೀರ್ಘಾವಧಿಯವರೆಗೆ ಕುಣಬಿಗಳ ನೆಲೆವಾಸಗಳಲ್ಲಿ ಇರುವುದರಿಂದ ಅಮೂಲ್ಯ ತಿಳುವಳಿಕೆಯನ್ನು ಪಡೆಯಲಾಗಿದೆ. ಸಹಭಾಗಿತ್ವ ಅವಲೋಕನ ವಿಧಾನವು, ಅಂಕಿ ಅಂಶಗಳು ಕೊಡುವ ತಿಳುವಳಿಕೆಗಿಂತ ಹೆಚ್ಚು ಆಳವಾದ ತಿಳುವಳಿಕೆಯನ್ನು ನೀಡಬಲ್ಲದು. ಅಧ್ಯಯನಕ್ಕೆ ಒಳಪಡುವ ಕುಣಬಿಗಳ ಮಾದರಿ (Sample) ಗ್ರಾಮಗಳಲ್ಲಿ ಕೆಲವು ದಿನ ಇರುವುದರ ಮೂಲಕ ಕುಣಬಿಗಳ ಹಬ್ಬಹರಿದಿನಗಳು, ಮದುವೆ, ನೃತ್ಯ, ಬೇಟೆಗಳು, ಆರಾಧನೆ, ಔಷಧಿ ಸಸ್ಯಗಳ ಸಂಗ್ರಹಣೆ, ಜೀವನ ವಿಧಾನ, ಧಾರ್ಮಿಕ ಚಟಿವಟಿಕೆಗಳು ಮತ್ತು ಕುಣಬಿಯರ ಮುಖಾಮುಖಿ ಮಾಡುವ ಸಮಾಜಿಕಾರ್ಥಿಕ ಸಂಘರ್ಷಗಳನ್ನು ಅರ್ಥ ಮಾಡಿಕೊಳ್ಳಲು ಯತ್ನಿಸಲಾಗಿದೆ.

**೬. ವ್ಯಕ್ತಿ ಅಧ್ಯಯನ ವಿಧಾನ**

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕುಣಬಿ ಸಮುದಾಯದ ಆಯ್ದ ಗ್ರಾಮಗಳಲ್ಲಿನ ವ್ಯಕ್ತಿಗಳನ್ನು ಸಂದರ್ಶನ ಮಾಡಲಾಗಿದೆ. ಪಕ್ಷಪಾತರಹಿತವಾಗಿ ಮತ್ತು ಮೌಲ್ಯಾಂಕನದಲ್ಲಿ ಖಚಿತತೆಯನ್ನು ಖಾತ್ರಿಪಡಿಸುವ ಉದ್ದೇಶದಿಂದ ಸೂಕ್ತವಾದ ಮಾದರಿ ತಂತ್ರದ ಅಳವಡಿಕೆ ಬಹಳ ಮುಖ್ಯವಾದದ್ದು. ವ್ಯಕ್ತಿ ಅಧ್ಯಯನಕ್ಕೆ ೩೦೦ ಉತ್ತರದಾಯಿಗಳ ಕುಣಬಿಯರನ್ನು ಆಯ್ದುಕೊಳ್ಳಲಾಗಿದೆ. ಈ ಅಧ್ಯಯನಕ್ಕೆ ಗೃಹಿಣಿಯರನ್ನು, ದಿನಗೂಲಿಗಳನ್ನು, ಕೃಷಿಕೂಲಿಗಳನ್ನು, ಸರಕಾರಿ ನೌಕರರನ್ನು, ಹಳ್ಳಿಯ ಸಮುದಾಯದ ಮುಖಂಡ, ಕುಣಬಿ ಮುಖ್ಯಸ್ಥ, ಸ್ಥಳೀಯ ನಾಯಕರು, ಸಮುದಾಯದಲ್ಲಿರುವ ಹಿರಿಯರು, ಕುಟುಂಬದ ಯಜಮಾನ, ಚಳುವಳಿಗಾರರನ್ನು ಮತ್ತು ಮಂಡಲ ಪ್ರಧಾನ, ತಹಸೀಲ್ದಾರರು, ಸಮಾಜ ಕಲ್ಯಾಣ ಅಧಿಕಾರಿಗಳನ್ನು, ITDP (Integrated Tribal Development Programme), ವ್ಯಕ್ತಿ ಅಧ್ಯಯನಕ್ಕೆ ಆಯ್ಕೆ

ಮಾಡಿಕೊಳ್ಳಲಾಗಿದೆ. ವ್ಯಕ್ತಿ ಸಂದರ್ಶನಕ್ಕೆ ಪ್ರತ್ಯೇಕ ನಿಶ್ಚಿತ ಪ್ರಶ್ನಾವಳಿಯನ್ನು ರೂಪಿಸಲಾಗಿತ್ತು. ಇದರಿಂದ ವ್ಯಕ್ತಿಗತ ಮತ್ತು ಸಾಮುದಾಯಿಕ ಜನಾಭಿಪ್ರಾಯಗಳನ್ನು ಪಡೆಯಲು ಸಾಧ್ಯವಾದಂತಾಗಿದೆ.

**೭. ನಮೂನೆ ವಿಧಾನ**

ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ, ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಯಲ್ಲಾಪುರ, ಕಾರವಾರ, ಅಂಕೋಲಾ ತಾಲೂಕುಗಳಲ್ಲಿ ಹೆಚ್ಚಾಗಿದ್ದಾರೆ. ಹಳಿಯಾಳ, ಶಿರಸಿ, ಹೊನ್ನಾವರ ತಾಲೂಕುಗಳಲ್ಲಿ ಕಡಿಮೆ ಪ್ರಮಾಣದಲ್ಲಿದ್ದಾರೆ. ಪ್ರಸ್ತುತ ಕುಣಬಿ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನಕ್ಕಾಗಿ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಯಲ್ಲಾಪುರ, ಕಾರವಾರ, ಅಂಕೋಲಾ ತಾಲೂಕುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಈ ಸಮೀಕ್ಷೆಯ ಒಟ್ಟು ೪ ತಾಲೂಕುಗಳಲ್ಲಿ ೨೧೦ ಗ್ರಾಮಗಳಿವೆ. ಈ ೨೧೦ ಗ್ರಾಮಗಳಿಂದ ೪೨ ಗ್ರಾಮಗಳನ್ನು ಮಾದರಿ ವಿಧಾನದ ಮೂಲಕ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ೪ ತಾಲೂಕಿನಲ್ಲಿ ನೆಲೆಸಿರುವ ಕುಣಬಿಯರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಯ ಮಾಹಿತಿಯನ್ನು ಪಡೆಯುವ ಉದ್ದೇಶದಿಂದ ೩೦೦ ಜನರನ್ನು ಸಂದರ್ಶನದ ಮಾದರಿ ಸಮೀಕ್ಷೆಗಾಗಿ ಆಯ್ಕೆ ಮಾಡಿಕೊಂಡು ಮಾಹಿತಿಯನ್ನು ಪಡೆಯಲಾಗಿದೆ.

**೧.೫ ಪ್ರಬಂಧದ ಅಧ್ಯಾಯಗಳು**

**ಅಧ್ಯಾಯ ೧ : ಪ್ರಸ್ತಾವನೆ**

ಮೊದಲ ಅಧ್ಯಾಯವು ಒಟ್ಟಾರೆ ಮಹಾಪ್ರಬಂಧದ ತಾತ್ವಿಕ ನಿಲುವನ್ನು ಸ್ಥೂಲವಾಗಿ ವಿವರಿಸುತ್ತದೆ. ಕುಣಬಿ ಸಮುದಾಯಗಳ ಕುರಿತು ಹಲವಾರು ಅಧ್ಯಯನಗಳು ನಡೆದಿವೆ. ಹಾಗೆ ವರದಿಗಳು, ಲೇಖನಗಳು ಪ್ರಕಟಗೊಂಡಿವೆ. ಆದರೆ ಉತ್ತರ ಕನ್ನಡ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಕುಣಬಿ ಸಮುದಾಯ ಕುರಿತಾಗಿ ಇಲ್ಲಿಯವರೆಗೂ ಅಂತಹ ಮಹತ್ವದ ಅಧ್ಯಯನಗಳು ನಡೆದಿಲ್ಲವೆಂದೆ ಹೇಳಬಹುದು. ಅಂತಹ ಕೊರತೆಯನ್ನು ಈ ಅಧ್ಯಯನವು ಅಲ್ಪಮಟ್ಟಿಗಾದರೂ ಪೂರೈಸಲಿದೆ.

ಇಲ್ಲಿಯವರೆಗೆ ಕುಣಬಿಯರನ್ನು ಕುರಿತು ನಡೆದಿರುವ ಚರ್ಚೆಗಳನ್ನು ಗಮನದಲ್ಲಿರಿಸಿಕೊಂಡು ಪ್ರಸ್ತುತ ಅಧ್ಯಯನದ ಸೈದ್ಧಾಂತಿಕ ನಿಲುವುಗಳನ್ನು ಮೊದಲ ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪ್ರಾದೇಶಿಕ ವಿವರಗಳನ್ನು ಮತ್ತು ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಈ ಮಹಾಪ್ರಬಂಧ ಬರೆಯಲು ಅನುಸರಿಸಿದ ಅಧ್ಯಯನದ ವಿಧಾನಗಳನ್ನು ಇಲ್ಲಿ ವಿವರಿಸಲಾಗಿದೆ. ಈ ಅಧ್ಯಾಯದ ಕೊನೆಯಲ್ಲಿ ಕುಣಬಿ ಸಮುದಾಯ ಕುರಿತು ಈವರೆಗೆ ನಡೆದ ಅಧ್ಯಯನಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

**ಅಧ್ಯಾಯ ೨ : ಕುಣಬಿ ಸಮುದಾಯದವರ ಮೂಲ ಮತ್ತು ಚರಿತ್ರೆ**

ಪ್ರಸ್ತುತ ಅಧ್ಯಾಯವು ಈ ಮಹಾಪ್ರಬಂಧಕ್ಕೆ ಒಂದು ಪ್ರವೇಶಿಕೆಯನ್ನು ಒದಗಿಸುತ್ತದೆ. ಇದರಲ್ಲಿ ಉತ್ತರ ಕನ್ನಡ ಜಿಲ್ಲೆಯ ಪ್ರದೇಶಗಳ ಭೌಗೋಳಿಕ ಮತ್ತು ಅದರ ಚಾರಿತ್ರಿಕತೆಯನ್ನು ಸ್ಥೂಲವಾಗಿ ವಿವರಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಸ್ಥೂಲ ಪರಿಚಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಪರಿಶಿಷ್ಟ ಜಾತಿ, ಸಮುದಾಯದ ಅಂಕಿ–ಅಂಶಗಳ ವಿವರಗಳನ್ನು ನೀಡಲಾಗಿದೆ.

ಕುಣಬಿ ಸಮುದಾಯದ ಚಾರಿತ್ರಿಕ ರೂಪಾಂತರಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಕುಣಬಿಯರ ಮೂಲ, ಭಾರತದ ವಿವಿಧ ರಾಜ್ಯಗಳ ಕುಣಬಿಗಳ ಅವಲೋಕನ, ಕರ್ನಾಟಕದ ಕುಣಬಿಯರು. ಹಾಗೆಯೇ ಕುಣಬಿ ಸಮುದಾಯದ ಸಾಂಸ್ಕೃತಿಕ ಜಗತ್ತನ್ನು ಸ್ಥೂಲವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.

**ಅಧ್ಯಾಯ ೩ : ಸಮಾಜ ಮತ್ತು ಸಂಸ್ಕೃತಿ**

ಈ ಅಧ್ಯಾಯದಲ್ಲಿ ಕುಣಬಿಯರ ಸಾಮಾಜಿಕ ಸ್ಥಿತಿಗತಿಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಸಾಮಾಜಿಕ ಶ್ರೇಣೀಕರಣ, ವಸತಿ, ಉಪಭಾಷೆ, ಆಹಾರ ಪ್ರವೃತ್ತಿಗಳು, ಆರೋಗ್ಯ, ಸಾಮಾಜಿಕ, ಉಡುಗೆ–ತೊಡುಗೆ, ಬಂಧುತ್ವ, ಮದುವೆ, ಮುಂತಾದವುಗಳಿಗೆ ಸಂಬಂಧಿಸಿದಂತೆ ಕುಣಬಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ವಿವಾಹ ಹಾಗೂ ಸಾಮಾಜಿಕ ನಿರ್ಬಂಧಗಳನ್ನು ಅವಲೋಕಿಸುವುದರೊಂದಿಗೆ ಅವರು ಆರಾಧಿಸುವ ದೈವಗಳು, ಹಬ್ಬ–ಹರಿದಿನಗಳು ಮುಂತಾದವುಗಳೊಂದಿಗೆ ಕುಣಬಿಗಳ ಭಾಷೆ, ಅವರ ಸಂಸ್ಕೃತಿ, ಕಲೆ, ನೃತ್ಯ, ಹಾಡುಗಳು, ವಾದ್ಯ ಪರಿಕರಗಳು ಮುಂತಾದವುಗಳನ್ನು ಪತ್ತೆ ಹಚ್ಚಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕುಣಬಿ ಸಮುದಾಯದ 'ಮನೆವಾರು (Household Survey) ಸಮೀಕ್ಷೆ' ಮತ್ತು 'ವ್ಯಕ್ತಿಗಳ (Case Study) ಸಂದರ್ಶನ'ಗಳನ್ನು ಆಧರಿಸಿದ ವಾಸ್ತವದ ತಿಳುವಳಿಕೆಯನ್ನು ಮುಖ್ಯವಾಗಿಟ್ಟುಕೊಂಡು ಕುಣಬಿ ಸಮುದಾಯದ ಸಾಮಾಜಿಕ ಸ್ಥಿತಿಗತಿಯನ್ನು ವಿವರಿಸಲಾಗಿದೆ. ಕುಣಬಿಗಳ ಕೆಲವು ನಿರ್ಧಿಷ್ಟ ಸಾಮಾಜಿಕ ಮತ್ತು ಸಾಂಸ್ಕೃತಿಕ ಮುಖಗಳಲ್ಲಿ ಉಂಟಾಗಿರುವ ಬದಲಾವಣೆಗಳನ್ನು ಸಹ ಚರ್ಚಿಸಲಾಗಿದೆ.

**ಅಧ್ಯಾಯ ೪ : ಆರ್ಥಿಕ ಸ್ಥಿತಿಗತಿ**

ಮೂರನೆಯ ಅಧ್ಯಾಯದಲ್ಲಿ ಕುಣಬಿ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳನ್ನು ವಿವರಿಸಿದರೆ, ನಾಲ್ಕನೆಯ ಅಧ್ಯಾಯದಲ್ಲಿ ಕುಣಬಿ ಸಮುದಾಯದ ಆರ್ಥಿಕ ಸ್ಥಿತಿಗತಿಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಇಲ್ಲಿಯೂ ಸಹ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕುಣಬಿಗಳ

ವಿಭಿನ್ನ ಪ್ರದೇಶಗಳಲ್ಲಿನ 'ಮನೆವಾರು (Household Survey) ಸಮೀಕ್ಷೆ' ಮತ್ತು 'ವ್ಯಕ್ತಿಗಳ (Case Study) ಸಂದರ್ಶನ' ಅಂಕಿ-ಅಂಶಗಳನ್ನು ಮತ್ತು ವಿವರಗಳನ್ನು ಮುಖ್ಯವಾಗಿಟ್ಟುಕೊಂಡು ಈ ಅಧ್ಯಯನ ಮಾಡಲಾಗಿದೆ.

ಕುಣಬಿಗಳ ಮೂಲ ವೃತ್ತಿಗಳು ಯಾವುವು? ಮೂಲ ವೃತ್ತಿಗಳಿಂದ ಆ ಸಮುದಾಯ ದೂರ ಉಳಿಯಲು ಕಾರಣಗಳೇನು? ಇಂದಿಗೂ ಮೂಲ ವೃತ್ತಿಗಳನ್ನು ಅನುಸರಿಸುತ್ತಿರುವ ಕುಟುಂಬಗಳು ಎಷ್ಟಿವೆ? ಪ್ರಸ್ತುತ ದಿನಗಳಲ್ಲಿ ಜೀವನಾಧಾರಕ್ಕಾಗಿ ಆಯ್ಕೆ ಮಾಡಿಕೊಂಡ ವೃತ್ತಿಗಳು ಯಾವುವು? ಹಾಗೂ ಒಟ್ಟು ಸಮುದಾಯದಲ್ಲಿ ಆರ್ಥಿಕವಾಗಿ ಮುಂದುವರೆದ ಮತ್ತು ಹಿಂದುಳಿದ ಕುಟುಂಬಗಳೆಷ್ಟು? ಎಂಬುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಜೊತೆಗೆ ಅವರ ಮನೆಗಳ ಸ್ವರೂಪ, ಶೈಕ್ಷಣಿಕ ಸ್ಥಾನಮಾನ, ವರ್ತಮಾನ ಸ್ಥಿತಿಗತಿ ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ೫ : ಕುಣಬಿ ಸಮುದಾಯದ ಹೋರಾಟಗಳು ಮತ್ತು ಸಂಘಟನೆಗಳು:**

ಕುಣಬಿ ಸಮುದಾಯದ ರಾಜಕೀಯ ಸ್ಥಿತಿಗತಿಗಳನ್ನು ಚರ್ಚಿಸಲಾಗಿದೆ. ರಾಜಕೀಯದಲ್ಲಿ ಕುಣಬಿ ಸಮುದಾಯದ ಒಲವು, ಧ್ಯೇಯ, ಧೋರಣೆ ಮತ್ತು ಆಸಕ್ತಿಯ ಬಗ್ಗೆ ಸಮೀಕ್ಷೆ ಕೈಗೊಂಡು ಅವರ ಅಭಿಪ್ರಾಯದ ವಿವರಗಳನ್ನು ನೀಡಲಾಗಿದೆ. ಭೂವ್ಯಾಜ್ಯ, ರಾಜಕೀಯ ತಿಳುವಳಿಕೆ ಮತ್ತು ಪಾಲ್ಗೊಳ್ಳುವಿಕೆ, ಭೂಹೋರಾಟಗಳು, ಅರಣ್ಯ ಹಕ್ಕುಗಳ ಕುರಿತ ಹೋರಾಟಗಳು, ಮೀಸಲಾತಿ ಕುರಿತ ಚಳುವಳಿ, ಕುಣಬಿಯ ಸಂಘಟನೆಗಳು, ಮುಂತಾದವುಗಳನ್ನು ಈ ಅಧ್ಯಾಯದಲ್ಲಿ ಶೋಧಿಸಲಾಗಿದೆ.

**ಅಧ್ಯಾಯ ೬ : ಅಭಿವೃದ್ಧಿ ಯೋಜನೆಗಳು ಮತ್ತು ಕುಣಬಿ ಸಮುದಾಯ**

ಉತ್ತರ ಕನ್ನಡ ಜಿಲ್ಲೆ ಇದೀಗ ಸಂಪೂರ್ಣವಾಗಿ ತನ್ನನ್ನು ಆಧುನಿಕ ಯೋಜನೆಗಳಿಗೆ ಒಡ್ಡಿಕೊಂಡು ತಲ್ಲಣಗಳನ್ನು ಅನುಭವಿಸುತ್ತಿದೆ. ಈ ಜಿಲ್ಲೆಯಲ್ಲಿ ಸರಕಾರ ಹತ್ತು ಹಲವು ಬೃಹತ್ 'ಅಭಿವೃದ್ಧಿ ಯೋಜನೆ'ಗಳನ್ನು ಜಾರಿಮಾಡಿದೆ. ಹಲವಾರು ಆಣೆಕಟ್ಟುಗಳು, ವಿದ್ಯುತ್ ಯೋಜನೆಗಳು, ಕೈಗಾ ಅಣು ವಿದ್ಯುತ್ ಯೋಜನೆ, ಸೀಬರ್ಡ್ಸ್ ನೌಕಾನೆಲೆ, ಕೊಂಕಣ ರೈಲ್ವೆ ಯೋಜನೆ, ಅನೇಕ ಗಣಿಗಾರಿಕೆ ಯೋಜನೆಗಳು, ಈ ಜಿಲ್ಲೆಯ ನೈಸರ್ಗಿಕ ಸಂಪತ್ತನ್ನು ಮತ್ತು ಬಹುಸಂಖ್ಯಾತ ದುಡಿವ ವರ್ಗಗಳನ್ನು ನಿರ್ದಯವಾಗಿ ಶೋಷಣೆ ಮಾಡಿದೆ. ಈ ಯೋಜನೆಗಳಿಂದ ಅನೇಕ ಆದಿವಾಸಿ ಸಮುದಾಯಗಳು ಒಕ್ಕಲೆದ್ದು ಹೋಗಿವೆ. ತಮ್ಮ ಪಾರಂಪರಿಕ ವಾಸದ ನೆಲೆ, ಕುಣಬಿಯರ ಬಹುತೇಕ ಕುಮರಿ ಜಮೀನು ಈ ಜಲಾಶಯಗಳ ಗರ್ಭದಲ್ಲಿ ಮುಳುಗಿ ಹೋಯಿತು. 'ಅಣಶಿ ನ್ಯಾಷನಲ್ ಪಾರ್ಕ್' ಕಾಯ್ದೆ ಪ್ರಕಾರ ಆ ವ್ಯಾಪ್ತಿಯ ಅರಣ್ಯದೊಳಗೆ ಇರುವ ಕುಟುಂಬಗಳು ಕೂಡ ಹೊರಗೆ ಬರಬೇಕಾಯಿತು. ಈ ಸ್ಥಳಾಂತರವು

ಕುಣಬಿಯರ ಮೇಲೆ ಯಾವ ಯಾವ ಪರಿಣಾಮವನ್ನು ಬೀರಿದೆ. ಈ ಸ್ಥಳಾಂತರದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯಾರ್ಥಿಕ ಆಯಾಮಗಳು ಕುಣಬಿಯರ ಮೇಲೆ ಯಾವ ಬಗೆಯ ಪರಿಣಾಮಗಳನ್ನು ಉಂಟು ಮಾಡಿದೆ ಎಂಬುದನ್ನು ವಿವರಿಸಲಾಗಿದೆ.

ಅರಣ್ಯದ ಉಪ ಉತ್ಪನ್ನ ಮತ್ತು ಕುಣಬಿಯರ ಪಾರಂಪರಿಕ ಹಕ್ಕುಗಳು ಹಾಗೂ ಅರಣ್ಯ ಇಲಾಖೆಯ ಸರಕಾರಿ ಕಾನೂನುಗಳ ನಡುವಿನ ಸಂಘರ್ಷಾತ್ಮಕ ನಿಲುವುಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

**ಅಧ್ಯಾಯ ೭ : ಸಮಾರೋಪ**

ಈ ಎಲ್ಲ ಅಧ್ಯಯನದಿಂದ ಬಂದ ಫಲಿತಗಳು ಹಾಗೂ ಸಲಹೆಗಳನ್ನು ಸಮಾರೋಪದಲ್ಲಿ ನೀಡಲಾಗಿದೆ. ಹಾಗೆ ಅನುಬಂಧದಲ್ಲಿ ತಿಳುವಳಿಕೆದಾರರ ಸೂಚಿ, ವ್ಯಕ್ತಿ ಅಧ್ಯಯನ ಪ್ರಶ್ನಾವಳಿ, ಪತ್ರಿಕಾ ವರದಿಗಳು, ಅಂಕಿ-ಅಂಶಗಳ ಪಟ್ಟಿ, ರೇಖಾಚಿತ್ರಗಳು, ನಕ್ಷೆಗಳು, ಛಾಯಾಚಿತ್ರಗಳನ್ನು ಕೊಡಲಾಗಿದೆ.

ಕೊನೆಯಲ್ಲಿ ಅಧ್ಯಯನಕ್ಕೆ ಪೂರಕ ಮಾಹಿತಿಗಳನ್ನು ಒದಗಿಸಿದ ಪರಾಮರ್ಶನ ಗ್ರಂಥಗಳ ವಿವರ ನೀಡಲಾಗಿದೆ.

**೧.೬ ಕುಣಬಿ ಸಮುದಾಯ ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ**

ಕುಣಬಿ ಸಮುದಾಯ ಕುರಿತು ಅಧ್ಯಯನಗಳು ವಸಾಹತು ಕಾಲಘಟ್ಟದಲ್ಲಿಯೇ ಪ್ರಾರಂಭವಾದವು. ಕುಣಬಿ ಸಮುದಾಯ ಕುರಿತು ಇಲ್ಲಿಯವರೆಗೂ ನಡೆದಿರುವ ಅಧ್ಯಯನಗಳು ಮುಖ್ಯವಾಗಿ ಅವರ ಇರುವಿಕೆಯ ಕ್ರಮ, ಅವರ ಸಾಮಾಜಿಕ ಬದುಕು ಮತ್ತು ಐತಿಹಾಸಿಕ ಹಿನ್ನೆಲೆಯನ್ನು ಕುರಿತದ್ದಾಗಿದೆ. ಈ ಅಧ್ಯಯನಗಳು ನನ್ನ ಅಧ್ಯಯನದುದ್ದಕ್ಕೂ ಮಾರ್ಗದರ್ಶಕಗಳಾಗಿವೆ. ಇವುಗಳು ಕುಣಬಿ ಸಮುದಾಯ ಕುರಿತು ಇನ್ನುಮುಂದೆ ಯಾವ ಬಗೆಯಲ್ಲಿ ಮುಖ್ಯ ವಿಷಯ ಕುರಿತು, ಯಾವ ಕ್ಷೇತ್ರವನ್ನು ಕುರಿತು ಅಧ್ಯಯನ ನಡೆಸಬೇಕು ಎಂಬುದನ್ನು ತಿಳಿಸುವ ಗ್ರಂಥಗಳಾಗಿವೆ. ಈ ಗ್ರಂಥಗಳು ಅವುಗಳ ಪ್ರಾಮುಖ್ಯತೆಯೊಂದಿಗೆ ಈ ಕೆಳಗಿನಂತಿವೆ.

- ಬಾಂಬೆ ಗೆಜೆಟೀಯರ್ – 'ಕರ್ನಾಟಕ ಭಾಗದ್ದು ಅಥವಾ ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು' ಭಾಗ-೧೩ ಎಂಬ ಗ್ರಂಥದಲ್ಲಿ 'ಕುಣಬಿ ಸಮುದಾಯ ನೆಲೆಸಿರುವ ತಾಲೂಕು, ಅವರ ಜನಸಂಖ್ಯೆಗಳ ಬಗ್ಗೆ ಕುರಿತು ವಿವರಿಸಲಾಗಿದೆ', ೧೮೮೩ (ಪುಟ ಸಂಖ್ಯೆ ೪೩೮-೪೪೧).
- ಮಾನವಶಾಸ್ತ್ರಜ್ಞರಲ್ಲಿ ಒಬ್ಬರಾದ 'Thurston' ರವರು 'ದಕ್ಷಿಣ ಭಾರತದಲ್ಲಿ ಬುಡಕಟ್ಟು' (Caste and tribes of South India)ಗಳು (೧೯೦೯) ಅಧ್ಯಯನದಲ್ಲಿ ಕುಣಬಿಯರನ್ನು ಬುಡಕಟ್ಟು ಎಂದು ಮೊಟ್ಟಮೊದಲು ಗುರುತಿಸಿ ತಮ್ಮ ಕೃತಿಯಲ್ಲಿ ದಾಖಲಿಸಿದ್ದಾರೆ. ಸುಮಾರು

೧೦೦ ವರ್ಷಗಳ ಹಿಂದೆಯೆ ಕುಣಬಿಯರ ವಿವಿಧ ಆಚರಣೆಗಳು, ಸಂಪ್ರದಾಯಗಳ ವಿವರಣೆ ಮತ್ತು ವಿಧಾನಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ.

ದಕ್ಷಿಣ ಭಾರತದಲ್ಲಿರುವ ಅನೇಕ ಬುಡಕಟ್ಟು, ಜಾತಿಗಳ ಬಗ್ಗೆ ಥರ್ಸಟನ್‌ರ ಕೃತಿ ಸಂಕ್ಷಿಪ್ತ ಮಾಹಿತಿ ಕೊಡುತ್ತದೆ. ಆದರೆ ಅವರ ಸಮಸ್ಯೆಗಳು, ಬದಲಾವಣೆಗಳು, ಅಭಿವೃದ್ಧಿ ಬಗ್ಗೆ ಏನೂ ಹೇಳುವದಿಲ್ಲ (ಪು. ೩೪)

- ನಂಜುಂಡಯ್ಯ ಅನಂತ್ ಕೃಷ್ಣ ಅಯ್ಯರ (೧೯೨೮) 'The Mysore Tribes and Caste' (Vol. II) ಅಧ್ಯಯನದಲ್ಲಿ ಕುಣಬಿಗಳಲ್ಲಿ ಒಂದು ಉಪವಿಭಾಗವಾದ 'ಅರೆ ಕುಣಬಿ' (ಮರಾಠಾ ಕುಣಬಿ ಎಂದು ನಮೂದಿಸಲ್ಪಟ್ಟಿರುವರು)ಗಳ ಬಗ್ಗೆ ಸಂಕ್ಷಿಪ್ತ ಅಧ್ಯಯನ ಮಾಡಿದ್ದಾರೆ. ಬುಡಕಟ್ಟಿನ ಆಂತರಿಕ ಸಂರಚನೆ, ವಿವಾಹದ ವಿಧಿ-ನಿಷೇಧಗಳು, ಬುಡಕಟ್ಟು ಸಮಿತಿ, ಧರ್ಮ, ಕುಮ್ರಿ ಬೇಸಾಯ, ಆಹಾರ, ಉಡುಗೆ, ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಅರೆ ಕುಣಬಿಗಳ ಜೀವನ ವಿಧಾನವನ್ನು ಅಭ್ಯಸಿಸಿದ್ದಾರೆ.
- ೧೯೫೦ರಲ್ಲಿ ಎ.ಎ.ಡಿ. ಲೂಯಿಸ್ ರವರು 'ಟ್ರೈಬ್ಸ್ ಆಫ್ ಮೈಸೂರ್'ನಲ್ಲಿ ಕುಣಬಿಯರ ಕುರಿತು ವಿವರಣೆ ನೀಡಿದ್ದಾರೆ. ಇವರ ಪ್ರಕಾರ ಉತ್ತರ ಕನ್ನಡ ಜಿಲ್ಲೆಯ ಭಟ್ಕಳ, ಕುಮಟಾ, ಅಂಕೋಲಾ, ಕಾರವಾರ ಮತ್ತು ಸೂಪಾ ತಾಲೂಕುಗಳಲ್ಲಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಕಾರ್ಕಳ, ಉಡುಪಿ, ಕುಂದಾಪುರ ತಾಲೂಕುಗಳಲ್ಲಿ ನಾವು ಕುಣಬಿಗಳನ್ನು ಕಾಣುತ್ತೇವೆ. ನೆರೆಯ ಜಿಲ್ಲೆಗಳಲ್ಲಿಯೂ ಕಾಣುತ್ತೇವೆ.

ಅವರು ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದಾರೆ. ಕೇರಳದ ಕುಣಬಿಗಳನ್ನು ಹಿಂದುಳಿದ ವರ್ಗಗಳಾದ (ಓ.ಬಿ.ಸಿ.) ಎಂದು ವರ್ಗೀಕರಿಸಿ ಪರಿಶಿಷ್ಟ ಜಾತಿ ಗುಂಪಿಗೆ ಸೇರಿಸಲ್ಪಟ್ಟು ಶೈಕ್ಷಣಿಕ ಸೌಲಭ್ಯಗಳನ್ನು ನೀಡಲಾಗಿದೆ. ೧೯೨೧, ೧೯೩೧ ಮತ್ತು ೧೯೪೧ರ ಮದ್ರಾಸ್ ಪ್ರಾಂತ್ಯದ ಜನಗಣತಿಯ ಪ್ರಕಾರ ದಕ್ಷಿಣ ಕನ್ನಡ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿಯ ಕುಣಬಿ ಜನಸಂಖ್ಯೆಯು ೭೪೮೫ ರಷ್ಟು, ಅದರಲ್ಲಿ ೩೬೮೪ ಪುರುಷರು ಮತ್ತು ೩೬೦೧ ಸ್ತ್ರೀಯರು.

**ಕೋಷ್ಟಕ-೧.೧**

| ಜನಗಣತಿ ಆಯೋಗ | ಜನಗಣತಿಯಂತೆ ಕುಣಬಿಗಳ ಜನಸಂಖ್ಯೆ |
|---|---|
| ೧೯೦೧ | ೧೦೩೫೨ |
| ೧೯೧೧ | ೧೦೩೬೬ |
| ೧೯೨೧ | ೭೨೦೦ |
| ೧೯೩೧ | ೧೨೦೧೧ |
| ೧೯೪೧ | ೧೧೮೮೫ |

ಇವರಲ್ಲಿ ಮರಾಠಿ, ಕೊಂಕಣಿ, ತುಳು, ಕನ್ನಡ ಭಾಷೆಗಳ ಪರಿಜ್ಞಾನ, ಪರಿಣತಿಯನ್ನು ಹೊಂದಿದ್ದಾರೆ. ಇವರು ಮಾಂಸಾಹಾರಿಗಳಾಗಿದ್ದು ಬೇಟೆಯಲ್ಲಿ ವಿಶಿಷ್ಟ ಪರಿಣಿತಿಯನ್ನು ಹೊಂದಿದ್ದು, ಪ್ರಮುಖವಾಗಿ ಪ್ರತಿ ದಿನ ಅಕ್ಕಿಯನ್ನು ಆಹಾರವಾಗಿ ಉಪಯೋಗಿಸುವರು. ಇವರು ಅನಕ್ಷರಸ್ಥರಾಗಿದ್ದು ಈಗ ಇವರು ವಾಸಿಸುವ ಗ್ರಾಮಗಳಲ್ಲಿ ಸರಕಾರವು ಶಾಲೆ, ಅಂಗನವಾಡಿ ಕೇಂದ್ರಗಳನ್ನು ಪ್ರಾರಂಭಿಸಿದ್ದರಿಂದ ಈಗ ಕೆಲವು ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ ಎಂದು ವಿವರಗಳಿವೆ (ಪುಟ ಸಂಖ್ಯೆ ೯೧-೯೩).

- ಎಂ.ಎ. ಶೆರ್ರಿಂಗ್ ರವರ 'ಹಿಂದು - ಟ್ರೈಬ್ಸ್ ಆಂಡ್ ಕ್ಯಾಸ್ಟ್', ವಾಲ್ಯೂಮ-೨, ೧೯೭೪ (ಅ.ನಂ. ೧೬-ಕುಣಬಿ) ರಲ್ಲಿ ಝುಲವಾರ ಪ್ರಾಂತದಲ್ಲಿರುವ ಕಟ್ಟಿವಾರ, ಮಾಚೂ ಕಾಂಟಾ, ಹಲ್ಲರ, ಸೂರತ್ ಜಿಲ್ಲೆಯ ಜುನಾಘಡ ಬಂಟ್ವಾ ತಾಲೂಕುಗಳಲ್ಲಿ, ಗೋವೆಲ್‌ವಾರ ಜಿಲ್ಲೆ ಮತ್ತು ವಾಂಡ ಸುರವೆಯಂ ಉಪವಿಭಾಗದ ಕೆಲವು ಭಾಗಗಳಲ್ಲಿ ಇವರು ಇದ್ದಾರೆಂದು ವಿವರಣೆಯನ್ನು ನೀಡಿದ್ದಾರೆ (ಪುಟ ಸಂಖ್ಯೆ ೨೨೨).
- ಡಾ. ಹಿ.ಚಿ. ಬೋರಲಿಂಗಯ್ಯ - 'ಕುಣಬಿ'ಯರು ಎಂಬ ಗ್ರಂಥದಲ್ಲಿ. ಫ್ರಾನ್ಸಿಸ್ ಬುಕಾನನ್ - ೧೯೭೫ ತನ್ನ ವರದಿಯಲ್ಲಿ 'ಕುಣಬಿಗಳು ಕರ್ನಾಟಕದ ಮೂಲ ಬುಡಕಟ್ಟು', ಆಗ ಉಂಟಾಗಿದ್ದ ಪ್ಲೇಗ್ ರೋಗದ ಕಾರಣ ಗೋವಾಗೆ ವಲಸೆ ಹೋಗಿ ಪೋರ್ಚುಗೀಸ್ ಕಾಲದಲ್ಲಿ ಪುನಃ ಕರ್ನಾಟಕದ ಜೋಯಿಡಾ ಭಾಗಕ್ಕೆ ವಾಪಸಾಗಿದೆ ಎಂದು ಇವರನ್ನು ಕುರಿತು ವಿವರಿಸಲಾಗಿದೆ (ಪುಟ ಸಂಖ್ಯೆ ೧೮).
- ಎಲ್.ಜಿ. ಹಾವನೂರು - ಕರ್ನಾಟಕದ ಹಿಂದುಳಿದ ವರ್ಗಗಳ ಆಯೋಗ ವರದಿ - ವಾಲ್ಯೂಮ್ ೧, ಪಾರ್ಟ್ ೧, ಮುಖ್ಯ ವರದಿ - ೧೯೭೫ದಲ್ಲಿ ವೆಂಕಪ್ಪಗೌಡ ಶಿಕ್ಷಕರು

ದಕ್ಷಿಣ ಕನ್ನಡ ಜಿಲ್ಲೆಯ ಕುಣಬಿಗಳು ಒಂದು ಗುಡ್ಡಗಾಡಿನ ಬುಡಕಟ್ಟು ಸಮುದಾಯ, ಅವರ ಭಾಷೆ, ಸಂಸ್ಕೃತಿ ಹಾಗೂ ಕರ್ನಾಟಕ ರಾಜ್ಯದ ಪುನರ್‌ರಚನೆಯಾಗುವುದಕ್ಕಿಂತ ಮೊದಲು ಅವರನ್ನು ಪರಿಶಿಷ್ಟ ಜಾತಿ ಎಂದು ಪರಿಗಣಿಸಲಾಗಿತ್ತು ಎಂಬ ಮುಖ್ಯ ಅಂಶದ ಬಗ್ಗೆ ಬೆಳಕನ್ನು ಚೆಲ್ಲುತ್ತದೆ (ಪುಟ ಸಂಖ್ಯೆ ೨೪೨).

- ಎಲ್.ಜಿ. ಹಾವನೂರು – ಕರ್ನಾಟಕದ ಹಿಂದುಳಿದ ವರ್ಗಗಳ ಆಯೋಗ ವರದಿ – ವಾಲ್ಯೂಮ್ ೩, ೧೯೭೫. ಜಾತಿವಾರು ಸಂಖ್ಯೆಯಲ್ಲಿ 'ಕುಣಬಿ' ಎಂಬುದನ್ನು ಸಹ ಸೇರಿಸಿದ್ದಾರೆ (ಪುಟ ಸಂಖ್ಯೆ ೧೯೧).
- ಪ್ರೊ. ಜಿ. ವೆಂಕಟಸುಬ್ಬಯ್ಯ – ಕನ್ನಡ ನಿಘಂಟು – ಸಂಪುಟ ೨, ೧೯೭೬ ರಲ್ಲಿ ಕುಣಬಿ – ಒಕ್ಕಲುತನ ಮಾಡುವವರಲ್ಲಿ ಒಂದು ಜಾತಿ, ಪಂಗಡ, ಇವರಲ್ಲಿ ಮರಾಠೀ, ಕುಳವಾಡ, ಕೊಂಕಣಿ ಕುಣಬಿ ಎಂಬ ಎರಡು ಒಳ ಭೇದಗಳಿರುತ್ತವೆ. ಹೀಗೆ ಕುಣಬಿ ಸಮುದಾಯದ ಬಗ್ಗೆ ಪರಿಚಯಿಸಲಾಗಿದೆ. (ಪುಟ ಸಂಖ್ಯೆ ೧೯೧೭).
- 'ಕರ್ನಾಟಕ ಸ್ಟೇಟ್ ಗೆಜೆಟೀಯರ್ ಉತ್ತರ ಕನ್ನಡ ಜಿಲ್ಲೆ' ಎಂಬ ಗ್ರಂಥದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿನ ಸಮುದಾಯಗಳ ಕಿರು ಪರಿಚಯ ನೀಡುವಾಗ ಕುಣಬಿ ಸಮುದಾಯ ಬಗ್ಗೆ ಕೂಡ ಪರಿಚಯಿಸಲಾಗಿದೆ, ೧೯೮೫ (ಪುಟ ಸಂಖ್ಯೆ ೨೪೫–೨೪೬).
- ಡಾ. ಹಿ.ಚಿ. ಬೋರಲಿಂಗಯ್ಯ ೧೯೯೧ 'ಗಿರಿಜನ ನಾಡಿಗೆ ಪಯಣ' ಕೃತಿಯಲ್ಲಿ ಶಿವಮೊಗ್ಗ ಜಿಲ್ಲೆಯ ಮೇಘಾನೆಯ ಕುಣಬಿಯರನ್ನು ಕುರಿತು ಪರಿಚಯಿಸಿದ್ದಾರೆ (ಪುಟ ಸಂಖ್ಯೆ ೧೧–೧೩).
- ಎನ್. ಶ್ಯಾಮ್ ಭಟ್ – 'ಸೌತ ಕ್ಯಾನರಾ' – ೧೯೯೫ – ಸೋಶಿಯಲ್ ಆ್ಯಂಡ್ ಎಕೊನಾಮಿಕ್ ಸ್ಟ್ಯಾಟಸ್ ಆಫ್ ಕುಡುಬೀಸ್ – ವಿಷಯವಾಗಿ ತಮ್ಮ ಅಧ್ಯಯನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕುಣಬಿಯರು ಕೃಷಿ ಕೆಲಸ ಮಾಡುವವರು ಎಂದು ಪರಿಚಯವನ್ನು ಮಾಡಿಕೊಟ್ಟಿದ್ದಾರೆ (ಪು. ೨೧೩).
- ಪ್ರೊ. ಎಚ್.ಜೆ. ಲಕ್ಕಪ್ಪಗೌಡ (೧೯೯೮) 'ಕರ್ನಾಟಕ ಬುಡಕಟ್ಟುಗಳು', ಸಂಪುಟ–೧ ಎಂಬ ಸಂಪುಟದಲ್ಲಿ ಕುಣಬಿಗಳ ಬಗ್ಗೆ ವಿಸ್ತೃತವಾದ ತಿಳುವಳಿಕೆಯನ್ನು ನೀಡಲಾಗಿದೆ. ಅದರಲ್ಲಿ ಡಾ. ಅಭಯ್ ಕುಮಾರ್ ಕೌಡಿ ರವರ 'ಕುಣಬಿಯರು' ಎಂಬ ಲೇಖನದಲ್ಲಿ ಕುಣಬಿಗಳ ಅಧ್ಯಯನದ ಉದ್ದೇಶ, ೧೯೫೨ರ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಆಯೋಗವು ಬುಡಕಟ್ಟುಗಳ ೮ ಲಕ್ಷಣಗಳನ್ನು ನೀಡಿದ್ದು, ಆ ೮ ಲಕ್ಷಣಗಳು ಇಂದಿಗೂ ಕುಣಬಿಗಳನ್ನು

ಹೊಂದಿರುವುದರಿಂದ ಅವರನ್ನು ಬುಡಕಟ್ಟು ಎಂದೇ ಗುರುತಿಸಬಹುದು ಎಂದು ತಿಳಿಸಿದ್ದಾರೆ, ಗೋವಾ ಕುಣಬಿಯರ ಮೂಲ ನೆಲೆ, ಭಾಷೆ, ವೇಷ ಭೂಷಣ, ಆಹಾರ ಪದ್ಧತಿ.

ಕುಣಬಿಯರ ಬೇಟೆ ಪದ್ಧತಿ, ಆಹಾರ ಸಂಗ್ರಹಣೆ, ಜಿವನಾವರ್ತನದ ಆಚರಣೆಗಳು, ವೈದ್ಯ ಪದ್ಧತಿ, ನ್ಯಾಯ ಪದ್ಧತಿ, ಉತ್ತರ ಕನ್ನಡ ಜಿಲ್ಲೆಯ ನೆಲೆಗಳಾವವು. ಆ ಸಮುದಾಯಗಳ ಕಲೆಗಳನ್ನು ಪರಿಚಯಿಸಿದ್ದಾರೆ. ಅದರಲ್ಲಿ ಕುಣಬಿಯರ ಹೋಳಿ ಕುಣಿತ, ಗುಮಟೆ, ಸುಗ್ಗಿ ಕುಣಿತ, ಜಾತ್ರೆಗಳು, ಕುಣಬಿಯರ ಭತ್ತದ ಕಣಜ ಬಗ್ಗೆ ಕೂಡ ಬೆಳಕು ಚೆಲ್ಲಿದ್ದಾರೆ (ಪುಟ ಸಂಖ್ಯೆ ೨೪೦–೨೬೭).

- ೧೯೯೮ ಬೆಳ್ಳಿ ಹಬ್ಬದ ಸ್ಮರಣ ಸಂಚಿಕೆ, ಭಂಡಾರಕರ್ಸ್ ಕಾಲೇಜು, ಕುಂದಾಪುರ. ಗಾಯತ್ರಿ ಪಿ. ನಾವಡ ಇವರು ನಮ್ಮ ಸುತ್ತಿನ ಮದುವೆ–'ತವರಿನ ಕಟ್ಟು ಕಡಿವ ಕುಡುಬಿ' ವಿವಾಹ ಎಂಬ ಲೇಖನದಲ್ಲಿ ಕುಡುಬಿಯ ಮದುವೆ ಕುರಿತು ವಿಶ್ಲೇಷಣೆ ನೀಡಿದ್ದಾರೆ.
- ಕೆ.ಎಸ್. ಸಿಂಗ್ – 'ಪೀಪಲ್ ಆಫ್ ಇಂಡಿಯಾ' – ೧೯೯೮, ನ್ಯಾಷನಲ್ ಸಿರೀಸ್, ವಾಲ್ಯೂಮ್ ೫, 'ಇಂಡಿಯಾಸ್ ಕಮ್ಯುನಿಟೀಸ್' – ಹೆಚ್.ಎಮ್. ೧೯೯೮, ಗ್ರಂಥದಲ್ಲಿ ಕುಣಬಿ ಎಂಬ ಶಬ್ದದ ಮೂಲವನ್ನು ಕುರಿತು ಅನೇಕ ವಿವರಗಳಿವೆ. ಗೋವಾ, ಕರ್ನಾಟಕ, ಗುಜರಾತಗಳಲ್ಲಿ ಕುಣಬಿಗಳ ಮೇಲೆ, ಅವರ ಜೀವನ ವಿಧಾನ, ಬೇಸಾಯ ಪದ್ಧತಿ, ಪಂಗಡಗಳು, ಆಚರಣೆಗಳು, ಭಾಷೆ, ಸಾಮಾಜಿಕ ಸಂಸ್ಕೃತಿಗಳ ಬಗ್ಗೆ ಮಾಹಿತಿ ನೀಡುತ್ತದೆ (ಪು. ೧೮೯೭, ೧೯೦೨, ೧೯೦೪)
- ಡಾ. ಸವಿತಾ ನಾಯಕ 'ಉತ್ತರ ಕನ್ನಡ ಜಿಲ್ಲೆಯ ಕೆಲವು ಬುಡಕಟ್ಟುಗಳಲ್ಲಿ – ಪ್ರಸಾಧನಕಲೆ (೨೦೦೦) ಎಂಬ ಕಿರು ಹೊತ್ತಿಗೆಯ ಅಧ್ಯಾಯ ೩ರಲ್ಲಿ ಜನಾಂಗಿಕ ಹಿನ್ನೆಲೆ, ಉತ್ತರ ಕನ್ನಡ ಜಿಲ್ಲೆಯಲ್ಲಿ ಬುಡಕಟ್ಟು ಮತ್ತು ಜಾತಿಗಳಾವುವು 'ಕುಣಬಿ' ಎಂಬ ಪದವನ್ನು ಪರಿಚಯಿಸುತ್ತದೆ (ಪುಟ ಸಂಖ್ಯೆ ೪೮).
- ಡಾ. ಎ.ಎಸ್. ಪ್ರಭಾಕರ 'ಬುಡಕಟ್ಟು ಬದುಕಿನ ಸ್ಥಿತ್ಯಂತರ' (೨೦೦೦) ಎಂಬ ಗ್ರಂಥದಲ್ಲಿ ಬುಡಕಟ್ಟುಗಳ ಬದುಕಿನಲ್ಲಿ ಇಂದು ಜಾಗತೀಕರಣದ ಪ್ರಭಾವ ಸರಕಾರದ ಯೋಜನೆಗಳಿಂದ ಉಂಟಾಗುತ್ತಿರುವ ವೈಪರಿತ್ಯಗಳನ್ನು ತಿಳಿಸುತ್ತಾ ಕುಣಬಿಗಳು ಸರಕಾರದ ಯೋಜನೆಯ ಫಲವಾಗಿ ತಮ್ಮದು ಎಂದು ಹೊಂದಿದ್ದ ತುಂಡು ಭೂಮಿ, ಮನೆಗಳನ್ನು ಹೇಗೆ ಕಳೆದುಕೊಂಡರು ಎಂಬುದನ್ನು ತಿಳಿಸಿದ್ದಾರೆ (ಪುಟ ಸಂಖ್ಯೆ ೧೪–೧೫).

- ಹೆಚ್.ಡಿ. ಪ್ರಶಾಂತ (೨೦೦೦) 'ಜನ ಸಮುದಾಯ' ಕರ್ನಾಟಕ ರಾಜ್ಯಕೋಶ-೪ ಎಂಬ ಸಂಪುಟದಲ್ಲಿ - ಕುಣಬಿ ಮತ್ತು ಕುಡಬಿಯವರ ಮೂಲ (ಗೋವಾ) ಒಂದೆ ಆಗಿರುತ್ತದೆ, ವಿವಾಹ ಪದ್ಧತಿ, ಕುಡುಬಿ ಮತ್ತು ಕುಣಬಿಯರ ಹೋಳಿ ಆಚರಣೆ, ಅವರ ವಾಸಸ್ಥಳ, ಅವರ ಭಾಷೆ, ಪಂಗಡ, ಕುಟುಂಬ ಪದ್ಧತಿ, ಆಚರಣೆಗಳು, ಅವರ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯ ಬಗ್ಗೆ ತಿಳಿಸುತ್ತಾ ಕುಣಬಿ ಸಮುದಾಯದವರ ಬದುಕು ಹೇಗೆ ಶೋಷಣೆಗೊಳಪಟ್ಟಿದೆ ಎಂಬುದನ್ನು ವಿಶ್ಲೇಷಿಸಿದ್ದಾರೆ (ಪುಟ ಸಂಖ್ಯೆ ೨೦-೨೨).
- ಅದೇ ಲೇಖಕರ - 'ಜನಸಮುದಾಯ' - ಕರ್ನಾಟಕ ರಾಜ್ಯಕೋಶ-೪ ರಲ್ಲಿ ಅವರನ್ನು ಕುಣಬಿ, ಕುಂಬಿ, ಕುನಲಿ ಎಂದು ಸಹ ಕರೆಯುತ್ತಾರೆ. ಕುಣಬಿಗಳು ಘಟ್ಟ ಪ್ರದೇಶ, ಮಲೆನಾಡು ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಆಚರಣೆಯಲ್ಲಿ ಸ್ವಲ್ಪ ಬದಲಾವಣೆ, ಅವರ ಕುಲ, ಜೀವನ ಶೈಲಿ, ಕುರಿತು ಸ್ವಲ್ಪ ಪರಿಚಯಿಸಲಾಗಿದೆ (ಪುಟ ಸಂಖ್ಯೆ ೨೩).
- ಡಾ. ಆರ್. ಇಂದಿರಾ ೨೦೦೧. 'ಅರಣ್ಯಾಭಿವೃದ್ಧಿ ಮತ್ತು ಮಹಿಳಾ ಸಶಕ್ತೀಕರಣ. ಅರಣ್ಯಾಭಿವೃದ್ಧಿ ಯೋಜನೆಗಳಲ್ಲಿ ಮೂಲನಿವಾಸಿ ಮಹಿಳೆಯ ಪಾತ್ರ'ದಲ್ಲಿ ಜೋಯಿಡಾ ತಾಲೂಕಿನಲ್ಲಿ ಕುಣಬಿ ಜನಸಂಖ್ಯೆ ಕೇಂದ್ರೀಕೃತವಾಗಿರುವ ಗ್ರಾಮಗಳ ಬಗ್ಗೆ ಮೂಲ ಮಾಹಿತಿ ವರದಿಯಲ್ಲಿ ಕುಣಬಿಗಳು ವಾಸವಾಗಿರುವ ಗ್ರಾಮಗಳಲ್ಲಿ ಸೌಲಭ್ಯ ಬಗ್ಗೆ ಕುರಿತು ವಿವರಣೆಯನ್ನು ನೀಡಿದ್ದಾರೆ.
- ಕರ್ನಾಟಕ ರಾಜ್ಯ ಪತ್ರ, ಏಪ್ರಿಲ್ ೧೧, ೨೦೦೨ರ ಪ್ರಕಾರ ಕುಣಬಿಗಳನ್ನು ಪ್ರವರ್ಗ-೧ರಲ್ಲಿ ಸೇರಿಸಲಾಗಿದೆ. (ಸರಕಾರಿ ಆದೇಶ ಸಂಖ್ಯೆ - ಸಕಇ/೨೨೫ ಬಿಸಿಎ, ೨೦೦೦, ಬೆಂಗಳೂರು - ೩೦ನೇ ಮಾರ್ಚ್ ೨೦೦೨).
- ಕೆ.ಎಲ್. ಕಾಮತ್ - 'ಕುಣಬಿ ಸಮುದಾಯ' ಆನ್‌ಲೈನ್ - ಅಕ್ಟೋಬರ್ ೨೬, ೨೦೦೩ರಲ್ಲಿ 'ಕುಣಬಿಗಳು ಗೋವೆಯ ಒಂದು ಬುಡಕಟ್ಟು ಜನಾಂಗ - ಕ್ರಿ.ಶ. ೧೫೧೦ರಲ್ಲಿ ಪೋರ್ಚುಗೀಸರಿಂದ ಚಿತ್ರಹಿಂಸೆಗೀಡಾಗಿ ಅವರು ಕರ್ನಾಟಕದ ನಾರ್ಥ ಕೆನರಾ ಮತ್ತು ಸೌತ್ ಕೆನರಾ ಜಿಲ್ಲೆಗಳಿಗೆ ವಲಸೆ ಬಂದರು' ಎಂಬ ಮುಖ್ಯ ಅಂಶದ ಬಗ್ಗೆ ಬೆಳಕನ್ನು ಚೆಲ್ಲಿದ್ದಾರೆ.
- ವಿಲಿಯಂ ಪಾಸಿಸ್, ವಿನ್‌ಸೆಂಟ್ ಮೆನ್‌ಡೋಂನ್ಕ 'ದಿ ಲ್ಯಾಂಡ್ ಕಾಲ್ಡ್ - ಸೌತ್ ಕೆನರಾ', ೨೦೦೩. ಗ್ರಂಥದಲ್ಲಿ ಕುಡುಬಿಗಳು ಒಂದು ಕುತೂಹಲಕಾರಿಯಾದ ಬುಡಕಟ್ಟು ಸಮುದಾಯ ಅವರು ಬೇಟೆಯಾಡುವ ಅತ್ಯಂತ ವಿಶೇಷವಾದ ರೀತಿಯಿಂದಾಗಿ ಅವರಿಗೆ ಆ ಹೆಸರು 'ಕುಡುಬಿ' ಬಂದಿದೆ ಎಂದು ಸ್ಪಷ್ಟಪಡಿಸಿದ್ದಾರೆ. ಮೂಲತ ಗೋವೆಯವರು ಪೋರ್ಚುಗೀಸರ

ಆಕ್ರಮಣ, ಅವರ ದೇವರನ್ನು ಪೂಜಿಸಲು ಬಿಡಲಿಲ್ಲ. ಈ ಕಾರಣದಿಂದಾಗಿ ಅವರು ದಕ್ಷಿಣದ ಕಡೆಗೆ ಓಡಿ ಬಂದರು. ಆಮೇಲೆ ದಕ್ಷಿಣ ಕೆನರಾ ಮತ್ತು ಉತ್ತರ ಕೆನರಾಗಳಲ್ಲಿ ಅರಣ್ಯ ಪ್ರದೇಶಗಳಲ್ಲಿ ನೆಲೆಸಿ, ಬೇಸಾಯದಲ್ಲಿ ತೊಡಗಿಕೊಂಡು, ಕೊಂಕಣಿ ತಮ್ಮ ಮಾತೃಭಾಷೆಯಾಗಿ, ಸಂವಹನದ ಭಾಷೆಯಾಗಿ ಕನ್ನಡ ಹಾಗೂ ತುಳು ಭಾಷೆಗಳನ್ನು ಬಳಸುತ್ತಾರೆ. ಕುಣಬಿಯ ದೇವತೆ ಗೋವೆಯಲ್ಲಿದೆ. ಕುಣಬಿಗಳ ಜೀವನದಲ್ಲಿ ಹೋಳಿ ಹಬ್ಬಕ್ಕೆ ತನ್ನದೆ ಆದ ವಿಶೇಷ ಸ್ಥಾನವಿದೆ ಎಂಬ ಮುಖ್ಯ ಅಂಶದ ಬಗ್ಗೆ ಬೆಳಕನ್ನು ಚೆಲ್ಲಿದ್ದಾರೆ (ಪುಟ ಸಂಖ್ಯೆ ೧೯೭, ೧೯೯.)

- ಡಾ. ಡಿ.ಬಿ. ನಾಯಕ (೨೦೦೩) 'ಗಿರಿಜನ ಸಿರಿ' ಪ್ರೊ. ಪಿ.ಕೆ. ಖಂಡೋಬಾ ಅಭಿನಂದನ ಸಂಪುಟದಲ್ಲಿ ಎ.ಸಿ. ಲಲಿತರವರ 'ಕರ್ನಾಟಕದಲ್ಲಿ ಬುಡಕಟ್ಟುಗಳ ಅಧ್ಯಯನ' ಎಂಬ ಲೇಖನದಲ್ಲಿ ದಿವಂಗತ ಎ.ಎ.ಡಿ. ಲೂಯಿಜ್ ರವರು 'ಟ್ರೈಬ್ಸ್ ಆಫ್ ಮೈಸೂರ್' ಎಂಬ ತಮ್ಮ ಕೃತಿಯಲ್ಲಿ ಮೈಸೂರು ರಾಜ್ಯದಲ್ಲಿರುವ ೨೭ ಬುಡಕಟ್ಟುಗಳ ಬಗ್ಗೆ ನೀಡಿರುವ ವಿವರಗಳ ಪಟ್ಟಿಯಲ್ಲಿ 'ಅ.ನಂ. ೧೩ ಕಾಡು ಕುಡುಬಿ' ಎಂದು ಉಲ್ಲೇಖವಿದೆ.
- ಗವರ್ನಮೆಂಟ್ ಆಫ್ ಗೋವಾ – ಏಪ್ರಿಲ್ ೨೨, ೨೦೦೩ ದಲ್ಲಿ ಗೋವಾ ಸರಕಾರ ಗೋವಾದಲ್ಲಿ ವಾಸಿಸುವ ಕುಣಬಿ ಸಮುದಾಯವನ್ನು ಕುಣಬಿ, ಗಾವಡಾ, ವೇಳಪ ಎಂದು ಉಲ್ಲೇಖಿಸಿ ಅವರನ್ನು ಶೆಡ್ಯೂಲ್ಡ್ ಟ್ರೈಬ್ಸ್ (ಪರಿಶೀಷ್ಟ ಜಾತಿ) ಎಂದು ಘೋಷಿಸಿರುತ್ತದೆ. ಸೋರ್ಸ್: ಡೈರೆಕ್ಟೊರೇಟ್ ಆಫ್ ಸೋಶಿಯಲ್ ವೆಲ್‌ಫೇರ್, ಗವರ್ನಮೆಂಟ್ ಆಫ್ ಗೋವಾ, ಏಪ್ರಿಲ್ ೨೨, ೨೦೦೩.
- ಕೆ.ಎಸ್. ಸಿಂಗ್ – 'ಪೀಪಲ್ ಆಫ್ ಇಂಡಿಯಾ' – ಕರ್ನಾಟಕ – ೨೦೦೩, ವಾಲ್ಯೂಮ್ ೨೬, ಪಾರ್ಟ್–೨, ಗ್ರಂಥದಲ್ಲಿ ಕುಣಬಿ ಮೂಲತಃ ಗೋವೆಯವರು. ೧೬ನೇ ಶತಮಾನದಲ್ಲಿ ಕರ್ನಾಟಕಕ್ಕೆ ವಲಸೆ ಬಂದ ಸಮುದಾಯ, ಇಲ್ಲಿ ಕುಣಬಿ ಹೆಣ್ಣುಮಕ್ಕಳ ಬಟ್ಟೆ ತೊಡುವ ಪದ್ಧತಿ, ವಿವಾಹ ಪದ್ಧತಿ. ಕುಣಬಿ ಹೆಣ್ಣು ಮಕ್ಕಳು ಕೃಷಿ ಹಾಗೂ ಪಶು ಸಂಗೋಪನೆಯಲ್ಲಿ ಅವರ ಪಾತ್ರ, ಒಟ್ಟಾರೆಯಾಗಿ ಇಡಿ ಕುಣಬಿ ಸಮುದಾಯದ ಮೇಲೆ ಬೆಳಕನ್ನು ಚೆಲ್ಲುತ್ತಾರೆ. (ಪುಟ ಸಂಖ್ಯೆ ೮೧೯–೮೨೩).
- ಡಾ. ಎ.ಎಸ್. ಪ್ರಭಾಕರ 'ಆದಿವಾಸಿ ಆಖ್ಯಾನ' (೨೦೦೫) ಎಂಬ ಗ್ರಂಥದಲ್ಲಿ ಕರ್ನಾಟಕದ ಬುಡಕಟ್ಟುಗಳ ಬಗ್ಗೆ ವಿಸ್ತೃತವಾದ ತಿಳುವಳಿಕೆಯನ್ನು ನೀಡಲಾಗಿದೆ. ಅದರಲ್ಲಿ ವಿಜಯಲಕ್ಷ್ಮೀ ಆರ್. ರವರ 'ಕರ್ನಾಟಕ ಬುಡಕಟ್ಟು ನೆಲೆಗಳು' ಎಂಬ ಲೇಖನದಲ್ಲಿ – ಕುಣಬಿಯರ

ಮೂಲ, ಭಾಷೆ, ಒಳಪಂಗಡ, ವೃತ್ತಿ, ವೇಷಭೂಷಣ, ಆಚಾರ–ವಿಚಾರ, ನೆಲೆಗಳು ತಿಳಿಸುತ್ತಾ ಕುಣಬಿ ಸಮುದಾಯ ಇದೊಂದು ಬುಡಕಟ್ಟು ಸಮುದಾಯ ಎಂಬುದನ್ನು ವಿಶ್ಲೇಷಿಸಿದ್ದಾರೆ (ಪುಟ ಸಂಖ್ಯೆ ೧೬೭).

ಇದೆ ಲೇಖಕರ – 'ಆದಿವಾಸಿ ಅಖ್ಯಾನ' ಗ್ರಂಥದಲ್ಲಿ – ಬಿ.ಪಿ. ಮಹೇಂದ್ರಕುಮಾರ್ ರವರ 'ಬುಡಕಟ್ಟು ಜನಾಂಗದಲ್ಲಿ ಸೀಮೆಯ ಪರಿಕಲ್ಪನೆ' ಎಂಬ ಲೇಖನದಲ್ಲಿ – ಕರ್ನಾಟಕದಲ್ಲಿ ನೂರಾರು ಬುಡಕಟ್ಟುಗಳಲ್ಲಿ ಕುಣಬಿ ಜನಾಂಗವೂ ಒಂದು. ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಕಾರವಾರ, ಯಲ್ಲಾಪುರ, ಅಂಕೋಲಾ, ಅಕ್ಕಪಕ್ಕದ ತಾಲೂಕುಗಳ ದಟ್ಟ ಅರಣ್ಯಗಳಲ್ಲಿ ಜೀವಿಸುವ ಜನಾಂಗ, ಕುಣಬಿಯರ ಸಾಮಾಜಿಕ ಬದುಕು, ಕುಣಬಿಗಳು ಕಾಡುಗಳ ಮಧ್ಯದಲ್ಲಿಯೇ ಇದ್ದುಕೊಂಡು ತಮ್ಮ ಜೀವನದ ಕ್ರಮ, ವಿವಾಹ ಪದ್ಧತಿ, ಕುಣಬಿಗಳ ಕುಮರಿ ಬೇಸಾಯ ಪದ್ಧತಿ, ಸಾಂಪ್ರದಾಯಿಕ ಕೃಷಿ ಪದ್ಧತಿ, ಸ್ತ್ರೀಯರಲ್ಲಿ ರವಿಕೆ ಇಲ್ಲದೆ ಸೀರೆ ಉಡುವ ರೀತಿ, ಕುಣಬಿಗಳು ಆಚರಿಸುವ ಮಹಾಲಯ, ಚೌತಿ, ದಸರಾ, ದೀಪಾವಳಿ, ಹೋಳಿಗಳಂತಹ ಹಬ್ಬಗಳನ್ನು ತಮ್ಮದೇ ಆದ ಸಾಂಪ್ರದಾಯಿಕ ರೀತಿಯಲ್ಲಿ ಈ ಜನಾಂಗ ಆಚರಿಸುತ್ತದೆ. ಕರ್ನಾಟಕದ ಸಮುದಾಯ ಅಧ್ಯಯನಗಳು ಹಿಡಿಯಬೇಕಾದ ದಾರಿಯನ್ನು ಹೊಸ ದಿಕ್ಕಿನೆಡೆಗೆ ಚಲಿಸುವಂತೆ ಈ ಲೇಖನ ಮಾಡುತ್ತದೆ (ಪುಟ ಸಂಖ್ಯೆ ೧೭೪–೧೮೧).

- ವಾಯ್. ರವೀಂದ್ರನಾಥ್ ರಾವ್ (೨೦೦೫) 'ಟ್ರೈಬಲ್ ಟ್ರೆಡಿಶನ್ ಆಂಡ್ ಚೇಂಜ್ ಎ ಸ್ಟಡಿ ಆಫ್ ಕುಡುಬೀಸ್ ಆಫ್ ಸೌತ್ ಇಂಡಿಯಾ' ಎಂಬ ಕಿರು ಹೊತ್ತಿಗೆಯಲ್ಲಿ ದಕ್ಷಿಣ ಕನ್ನಡದಲ್ಲಿ ಕುಡುಬಿಯರ ನೆಲೆಗಳು – ಸಂಸ್ಕೃತಿ, ಸಾಮಾಜಿಕ, ರಾಜಕೀಯ, ಕುಡುಬಿಯರ ಸಮಗ್ರ ಬದುಕನ್ನು ಆಯ್ದುಕೊಂಡಿದ್ದಾರೆ. ಉತ್ತರ ಕನ್ನಡ ಜಿಲ್ಲೆಯ ಕುಣಬಿಯ ಅಧ್ಯಯನ ಹಿಡಿಯಬೇಕಾದ ದಾರಿಯನ್ನು ಈ ಗ್ರಂಥ ಸೂಚಿಸುತ್ತದೆ.
- Pratap Sing Velip Kankar (೨೦೦೬) 'The Kurmis-Kunbis of India' ಪುಸ್ತಕದಲ್ಲಿ ಕುರ್ಮಿ ಅಥವಾ ಕುಣಬಿ ಒಂದು ಕೃಷಿ ಜೀವನ ನಡೆಸುವ ಜಾತಿ, ಎಂದು ತಿಳಿಸಿದ್ದಾರೆ (ಪು. ೧).
- ಅದೇ ಲೇಖಕರ – 'The Kurmis-Kunbis of India' –ರಲ್ಲಿ ಕುಣಬಿಯರ ಅನೇಕ ಸಂಘಗಳು ದೇಶದಾದ್ಯಂತ ಬೇರೆ ಹೆಸರುಗಳಿಂದ – (೧) ಅಖಿಲ ಭಾರತೀಯ ಕುರ್ಮಿ ಕ್ಷತ್ರಿಯ ಮಹಾಸಭಾ ದಕ್ಷಿಣ ಭಾರತ, (೨) ಕುಣಬಿ ಸೇನಾ, ಧಾವೆ ಮುಂಬೈ, (೩) ಕುಣಬಿ ಸಮಾಜ ಉನ್ನತ ಸಂಘ, ಮುಂಬೈ, (೪) ಕೊಂಕನ್ ಕುಣಬಿ ಸಮಾಜ ಸಂಘ, ಪುನೆ, (೫) ಕುಣಬಿ ಸಮಾಜ ಉನ್ನತ ಮಹಾ ಸಂಘ, ರಾಯಗಡ, ಕುಣಬಿ ಸಮುದಾಯ ಎಂಬ ಉಲ್ಲೇಖವು ಬರುತ್ತದೆ (ಪು. ೧೪).

- ಅದೇ ಲೇಖಕರ – 'The Kurmis-Kunbis of India' –ರಲ್ಲಿ ಭಾರತದ ವಿವಿಧ ರಾಜ್ಯಗಳ ಕುಣಬಿಗಳ ಅವಲೋಕನ – ಕುರ್ಮಿ ಅಥವಾ ಕುಣಬಿಯರು ಕೃಷಿ ಜಾತಿಗೆ ಸೇರಿದ ಬಹು ದೊಡ್ಡ ಜಾತಿ – ಎಂದು ಉತ್ತರ ಭಾರತದಲ್ಲಿ, ನಾಗಪೂರ ಮತ್ತು ಒರಿಸ್ಸಾಗಳಲ್ಲಿ ಪರಿಗಣಿಸಲಾಗಿದೆ (ಪು. ೮೦).
- ಅದೇ ಲೇಖಕರ – 'The Kurmis-Kunbis of India' –ದಲ್ಲಿ – ಆರ್ಥಿಕ ರಾಜಧಾನಿ ಎಂದು ಕರೆಸಿಕೊಳ್ಳುವ ಮುಂಬೈಯಲ್ಲಿ ಕುಣಬಿಯರು ಹಿಂದಿನಿಂದಲೂ ತಮ್ಮ ನೆಲೆಯನ್ನು ಹೊಂದಿದ್ದರು.

  ದಿವಂಗತ ಅಣ್ಣಾಸಾಹೇಬ್ ಅಲಿಯಾಸ್ ಶ್ಯಾಮರಾವ್ ಸೇಜ್ – ಕುಣಬಿ ಸಮಾಜದ ಮುಖಂಡ ರತ್ನಗಿರಿ ಜಿಲ್ಲೆಯಿಂದ ೪ ಸಲ ಎಂ.ಎಲ್.ಎ., ೧ ಸಲ ಎಂ.ಪಿ. ಆಗಿಯೂ ಆಯ್ಕೆಯಾದವರು ಎಂದು ತಿಳಿಸಿದ್ದಾರೆ (ಪು. ೯೧).

  ಬೇರೆ ಬೇರೆ ರಾಜ್ಯಗಳಲ್ಲಿ, ಬೇರೆ ಬೇರೆ ಹೆಸರುಗಳಿಂದ ಗುರುತಿಸಿಕೊಂಡಿರುವರು ರಾಜ್ಯವಾರು ಕುಣಬಿಯರ ವಿವಿಧ ಹೆಸರುಗಳು ಎಂಬ ಉಲ್ಲೇಖವು ಬರುತ್ತದೆ (ಪು. ೯೫).
- ಅದೇ ಲೇಖಕರ – 'The Kurmis-Kunbis of India' –ರಲ್ಲಿ – ಕರ್ನಾಟಕದ ಕುಣಬಿಯರು – ಕರ್ನಾಟಕದಲ್ಲಿ ಬಹು ಹೆಚ್ಚಿನ ಸಂಖ್ಯೆಯಲ್ಲಿ ಭೂಮಿಯನ್ನು ಉಳುವ ಸಮುದಾಯದವರಿದ್ದಾರೆ (ಪು. ೧೪೦).
- ಡಾ. ಜೆ.ಕೆ. ರಮೇಶ – 'ಮರಾಠಿ ಕುಣಬಿಗಳು' (ಬುಡಕಟ್ಟು ಅಧ್ಯಯನ) ೨೦೦೮ ಎಂಬ ಗ್ರಂಥದಲ್ಲಿ ಕುಣಬಿಗಳ ಬಗ್ಗೆ ಪರಿಚಯಿಸಿದ್ದಾರೆ. ಅದರಲ್ಲಿ ಕುಣಬಿಗಳು ಕರ್ನಾಟಕಕ್ಕೆ ಯಾವಾಗ, ಏಕೆ, ಹೇಗೆ, ಬಂದರೆಂದು ಅನೇಕ ಕುತೂಹಲಕಾರಿ ಐತಿಹ್ಯಗಳು ನೀಡಿದ್ದಾರೆ. ಮಹಾರಾಷ್ಟ್ರದ ಸಾಂಗ್ಲಿ, ಸೊಲ್ಲಾಪೂರ, ಕೊಲ್ಲಾಪೂರ, ಪಂಡರಾಪೂರ, ಸತಾರ, ನಾಗಪೂರ ಹಾಗೂ ಗೋವಾ ಹೀಗೆ ಬೇರೆ ಬೇರೆ ಸ್ಥಳಗಳಿಂದ ವಲಸೆ ಬಂದು ಕರ್ನಾಟಕದ ಕರಾವಳಿ ಮತ್ತು ಘಟ್ಟ ಪ್ರದೇಶದ ಹಳ್ಳಿಗಳಲ್ಲಿ ನೆಲೆಸಿದ್ದಾರೆ.

  ಅವರ ಜೀವನವಾಗಿ ಕಾಡನ್ನು ಅವಲಂಬಿಸಿದ್ದು, ಅವರ ಕುಂಬರಿ ಬೇಸಾಯ ಪದ್ಧತಿ, ಅವರ ಕುಲ, ಆಚರಣೆಗಳು, ಜೀವನ ಚಕ್ರದ ಸಾಂಪ್ರದಾಯಗಳು, ಕುಣಬಿಯರ ತಮ್ಮ ಏಕೈಕ ವಾರ್ಷಿಕ ಹಬ್ಬ ಹೋಳಿಹಬ್ಬದಲ್ಲಿ ಮದ್ದಲೆ ಕುಣಿತ, ಗುಮಟೆ ನೃತ್ಯ, ಕೋಲಾಟ, ಕುಣಬಿಯ ಜನಪದ ಹಾಡುಗಳು, ಪ್ರದರ್ಶನ ಕಲೆಗಳು, ಪರಿವರ್ತನೆಯ ಹಾದಿಯಲ್ಲಿ ಕುಣಬಿಯರ ಹಿನ್ನೆಲೆಯನ್ನು ಕುರಿತು ವಿಸ್ತೃತವಾಗಿ ಡಾ. ಜೆ.ಕೆ. ರಮೇಶ ರವರು ತಿಳಿಸಿದ್ದಾರೆ (ಪುಟ ೧, ೧೫).

- ಸಂಗ್ರಹಕ – ಡಿ.ವಿ. ಪ್ರಕಾಶ – ಕುಡ್ಮಿ ಜಾನಪದ ಸಂಗ್ರಹ – ೨೦೦೮. ಪುಸ್ತಕದಲ್ಲಿ – ಕುಣಬಿಯರ ಕುರಿತು ವಿವರಣೆಯಿದೆ. ಇದು ಕೊಂಕಣಿಯ ಭಾಷೆಯಲ್ಲಿದ್ದು, ಇಲ್ಲಿ ಕುಣಬಿಯರ ಪದಗಳು, ಗಾದೆ, ಕುಣಬಿಯರ ಹೋಳಿ ಪದ, ಕೌಟುಂಬಿಕ ವ್ಯವಸ್ಥೆ, ಜನಸಂಖ್ಯಾ, ಕುಣಬಿ ಘರ್, ವೃತ್ತಿ, ಶಾರೀರಿಕ ಲಕ್ಷಣ ಕುರಿತು ಮಹತ್ವದ ವಿವರವನ್ನು ನೀಡಿದ್ದಾರೆ.
- ಪ್ರೊ. ಎ.ವಿ. ನಾವಡ – 'ಕೊಂಕಣದ ಕುಡುಬಿಯರು' ೨೦೦೮. ಪುಸ್ತಕದಲ್ಲಿ – ಇಲ್ಲಿಯೂ ಸಹಿತ ಕುಡುಬಿಯರು ಮೂಲತಃ ಗೋವಾ ಸರಹದ್ದಿನಿಂದ ಕರಾವಳಿ ಕರ್ನಾಟಕಕ್ಕೆ ವಲಸೆ ಬಂದು ನೆಲೆನಿಂತ ಜನಸಮುದಾಯವೆಂದು ತಿಳಿಸಿದ್ದಾರೆ. ಕುಣಬಿಯ ಬಗ್ಗೆ ನಡೆದ ಅಧ್ಯಯನ, ಹಿನ್ನೆಲೆಯನ್ನು ಕುರಿತು ವಿಸ್ತೃತವಾಗಿ ತಿಳಿಸಿದ್ದಾರೆ (ಪುಟ ಸಂಖ್ಯೆ ೬–೧೨೬).
- ಮೂಲ–ಅನಾದ್ ತೇಲ್‌ತುಂಬ್ಡೆ ಸಂ. ಶಿವಸುಂದರ್ – 'ಖೈರ್ಲಾಂಜಿ' – 'ಸವರ್ಣೀಯ' ಸ್ವಾತಂತ್ರ್ಯ ವಿ/ಎಸ್ ಅಸ್ಪೃಷ್ಯಭಾರತ ದಲಿತ ಭಾರತದ ಕಥನ ೨೦೦೯ ಗ್ರಂಥದಲ್ಲಿ – ಖೈರ್ಲಾಂಜಿಯು ಮಹಾರಾಷ್ಟ್ರದ ನಾಗಪುರದ ಒಂದು ಹಳ್ಳಿ. ಒ.ಬಿ.ಸಿ. ಗೆ ಕುಣಬಿ ಸಮುದಾಯ ಎಂಬ ಉಲ್ಲೇಖವು ಬರುತ್ತದೆ (ಪುಟ ಸಂಖ್ಯೆ ೨೪).

ಮೇಲ್ಕಂಡ ಬಹುತೇಕ ಎಲ್ಲಾ ಗ್ರಂಥಗಳು ತಮ್ಮ ಅಧ್ಯಯನದ ಮಿತಿಯನ್ನೊಳಗೊಂಡು, ಕುಣಬಿ ಸಮುದಾಯವನ್ನು ಅಭ್ಯಸಿಸಿ ವಿಫುಲ ತಿಳುವಳಿಕೆಯನ್ನು ನೀಡಿದೆ. ಹಾಗೆಯೇ ನನ್ನ ಸಂಶೋಧನೆಗೆ ದಾರಿದೀಪಗಳಾಗಿವೆ. ಪ್ರಸ್ತುತ ಎಲ್ಲಾ ಕೃತಿಗಳನ್ನು ಗಮನದಲ್ಲಿಟ್ಟುಕೊಂಡು ಹೇಳಬೇಕೆಂದರೆ ಕುಣಬಿ ಸಮುದಾಯ ಕುರಿತು ಕೇವಲ ಪ್ರಾಸಂಗಿಕವಾಗಿ ಮಾತ್ರ ಇಲ್ಲಿ ಚರ್ಚಿಸಲಾಗಿದೆ, ಹೊರತು ಕುಣಬಿಯರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ನಡೆದಿಲ್ಲ. ಆದಕಾರಣ ನಾನು ಪ್ರಸ್ತುತ ಕುಣಬಿ ಸಮುದಾಯದವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಹೇಗಿದೆ, ಅವರ ವರ್ತಮಾನದ ಸ್ಥಿತಿಗತಿ–ಸ್ಥಾನಮಾನ ಹಾಗೂ ಚಾರಿತ್ರಿಕ ಹಿನ್ನೆಲೆಯನ್ನು ಕೂಡ ಅವಲೋಕಿಸಿ ಅಧ್ಯಯನ ನಡೆಸಲು ಇಲ್ಲಿ ಪ್ರಯತ್ನಿಸಲಾಗಿದೆ.

**ಟಿಪ್ಪಣಿಗಳು**

೧. ಡಾ. ಅಂಬಳಿಕೆ ಹಿರಿಯಣ್ಣ : 'ಮಲೆನಾಡ ವೈಷ್ಣವ ಒಕ್ಕಲಿಗರ ಸಂಸ್ಕೃತಿ' ಪು. ೧, ೧೯೯೯.
೨. ಕೆ. ಅನಂತರಾಮ ರಾವ್ : 'ಸುವರ್ಣ ಕರ್ನಾಟಕ ದರ್ಶನ' (೫೦ ಸಂವತ್ಸರಗಳು), ೨೦೦೬.
3. Veerappa Moily : 'Globalization and Tribal Culture', Paper Presented at DLA Conference, KU Dharwad, 2002.
೪. ಡಾ. ಅಚ್ಯುತ್ ಸಮಂತ 'ಆದಿವಾಸಿ ವಿಶ್ವವಿದ್ಯಾಲಯ', ವಿಜಯ ಕರ್ನಾಟಕ ಕನ್ನಡ ದಿನಪತ್ರಿಕೆ, ೨೩ನೇ ಡಿಸೆಂಬರ, ೨೦೦೭.

೫. ಉತ್ತರ ಕನ್ನಡ ಜಿಲ್ಲಾ ಅಂಕಿ ಅಂಶಗಳ ನೋಟ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಕಾರವಾರ (ಉತ್ತರ ಕನ್ನಡ), ಭಾಗ-೧, ಪು. ೧-೨, ೨೦೦೯-೧೦.
೬. ಅದೇ, ಅಂಕಿ ಅಂಶಗಳ ನೋಟ, ಪು. ೫.
೭. ಕ್ಷೇತ್ರಕಾರ್ಯದ ಮಾಹಿತಿ.
೮. ಕ್ಷೇತ್ರಕಾರ್ಯದ ಮಾಹಿತಿ.
೯. ಕ್ಷೇತ್ರಕಾರ್ಯದ ಮಾಹಿತಿ.
೧೦. ಬಾಂಬೆ ಗೆಜೆಟೀಯರ್ – ಕರ್ನಾಟಕ ಭಾಗದ್ದು, ಪು. ೪೩೮-೪೪೧, ೧೯೮೫.
11. Thurston: 'Castes and Tribes of South India' (Vol. I to VII) P 34, 1909
12. Nanjundaya Anantha Krishna Iyer: 'The Mysore Tribes and Castes' (Vol.II), 1928
13. Luiz A.A.D. : 'Tribes of Mysore', P 92-93, 1958
14. M. A. Sherring : 'Hindu-Tribes and Castes' Vol.II, P-222, 1974
೧೫. ಡಾ. ಹಿ.ಚಿ. ಬೋರಲಿಂಗಯ್ಯ, 'ಕುಣಬಿ'ಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.
೧೬. ಎಲ್.ಜಿ. ಹಾವನೂರ : 'ಕರ್ನಾಟಕದ ಹಿಂದುಳಿದ ವರ್ಗಗಳ ಮುಖ್ಯ ವರದಿ', (Vol. I, Part-I) ಪು. ೨೪೨, ೧೯೭೫.
೧೭. ಎಲ್.ಜಿ. ಹಾವನೂರ : 'ಕರ್ನಾಟಕದ ಹಿಂದುಳಿದ ವರ್ಗಗಳ ಆಯೋಗ ವರದಿ', (Vol. III) ಪು. ೧೯೧, ೧೯೭೫.
೧೮. ಪ್ರೊ. ಜಿ. ವೆಂಕಟಸುಬ್ಬಯ್ಯ : 'ಕನ್ನಡ ನಿಘಂಟು', ಸಂಪುಟ-೨, ಕನ್ನಡ ಸಾಹಿತ್ಯ ಪರಿಷತ್ತು, ಪು. ೧೯೧೭, ೧೯೭೬.
೧೯. ಗೆಜೆಟೀಯರ್ ಆಫ್ ಇಂಡಿಯಾ, ಕರ್ನಾಟಕ ರಾಜ್ಯ, ಪು. ೨೪೫-೨೪೬, ೧೯೮೫.
೨೦. ಡಾ. ಹಿ.ಚಿ. ಬೋರಲಿಂಗಯ್ಯ : 'ಗಿರಿಜನ ನಾಡಿಗೆ ಪಯಣ', ಪು. ೧೩, ೧೯೯೧
21. N. Sham Bhat : 'South Kanara - Social and Economic Status of Kudubis' P 213, 1995.
೨೨. ಪ್ರೊ. ಎಚ್.ಜೆ. ಲಕ್ಕಪ್ಪಗೌಡ : 'ಕರ್ನಾಟಕ ಬುಡಕಟ್ಟುಗಳು', ಸಂಪುಟ-೧, ಪು. ೨೪೦, ೨೬೭, ೧೯೯೮.
೨೩. ಗಾಯತ್ರಿ ಪಿ. ನಾವಡ : 'ತವರಿನ ಕಟ್ಟು ಕಡಿವ ಕುಡುಬಿ', ಪು. ೧೦೯, ೧೧೨, ೧೯೯೮.
24. K. S. Singh: 'People of India' National Series, Vol.s V, P-1897, 1902,1904, 1998.
೨೫. ಡಾ. ಸವಿತಾ ನಾಯಕ : 'ಉತ್ತರ ಕನ್ನಡ ಜಿಲ್ಲೆಯ ಕೆಲವು ಬುಡಕಟ್ಟುಗಳಲ್ಲಿ ಪ್ರಸಾಧನಕಲೆ', ಪಿಎಚ್.ಡಿ. ಪ್ರಕಟಣ ಗ್ರಂಥ, ಪು. ೪೮, ೨೦೦೦.
೨೬. ಡಾ. ಎ.ಎಸ್. ಪ್ರಭಾಕರ : 'ಬುಡಕಟ್ಟು ಬದುಕಿನ ಸ್ಥಿತ್ಯಂತರ', ಪು. ೧೪-೧೫, ೨೦೦೦.
೨೭. ಹೆಚ್.ಡಿ. ಪ್ರಸಾಂತ : 'ಜನಸಮುದಾಯ', ಕರ್ನಾಟಕ ರಾಜ್ಯಕೋಶ-೪, ಪು. ೨೦, ೨೨, ೨೦೦೦.
೨೮. ಅದೇ ಲೇಖಕರ, ಪು. ೨೩.
೨೯. ಡಾ. ಆರ್. ಇಂದಿರಾ : 'ಜೋಯಿಡಾ ತಾಲೂಕಿನಲ್ಲಿ ಕುಣಬಿ ಜನಸಂಖ್ಯೆ ಕೇಂದ್ರೀಕೃತವಾಗಿರುವ ಗ್ರಾಮಗಳ ಬಗ್ಗೆ ಮೂಲ ಮಾಹಿತಿ', ಪು. ೧, ೨೦೦೧.
೩೦. ಕರ್ನಾಟಕ ರಾಜ್ಯ ಪತ್ರ, ಏಪ್ರಿಲ್ ೧೧, ೨೦೦೨.
೩೧. ಕೆ.ಎಲ್. ಕಾಮತ, 'ಕುಣಬಿ ಸಮುದಾಯ' – ಆನ್‌ಲೈನ್ – ಅಕ್ಟೋಬರ್ ೨೬, ೨೦೦೩.
32. William Pais, Vincent Mendonca : ' The Land Called : 'South Kanara', P.197, 2003.

೩೩. ಡಾ. ಡಿ.ಬಿ. ನಾಯಕ : ‘ಗಿರಿಜನ ಸಿರಿ’, ಪು. ೧೯೧, ೨೦೦೩.

34. Government of Goa, April 22, 2003.

35. K. S. Singh : ‘People of India; Karnataka’ Vol-26, Part-2 P 819, 823, 2003.

೩೬. ಡಾ. ಎ.ಎಸ್. ಪ್ರಭಾಕರ : ‘ಆದಿವಾಸಿ ಆಖ್ಯಾನ’, ಪು. ೧೬೭, ೨೦೦೫.

೩೭. ಅದೇ ಲೇಖಕರ, ಪು. ೧೭೪, ೧೮೧.

38. Y. Ravindranath Rao: ‘Tribal Tradition and Change – A study of Kudubis of South India’, 2005.

39. Pratapsing Velip Kankar : ‘The Kurmis-Kudbis of India’, p-1. 2006,

40. Ibid., P-14.

41. Ibid., P-80.

42. Ibid., P-95.

43. Ibid., P-140.

೪೪. ಡಾ. ಜೆ.ಕೆ. ರಮೇಶ, ‘ಮರಾಠಿ ಕುಣಬಿಗಳು’, ಪು. ೧, ೨೦೦೮.

೪೫. ಡಿ.ವ್ಹಿ. ಪ್ರಕಾಶ : ‘ಕುಡ್ಮಿ ಜಾನಪದ ಸಂಗ್ರಹ’, ೨೦೦೮.

೪೬. ಪ್ರೊ. ಎ.ವಿ. ನಾವಡ : ‘ಕೊಂಕಣದ ಕುಡುಬಿಯರು’, ಪು. ೬, ೨೦೦೮.

೪೭. ಶಿವಸುಂದರ್ : ‘ಖೈರ್ಲಾಂಜಿ’, ಪು. ೨೪, ೨೦೦೯.

## ಅಧ್ಯಾಯ ಎರಡು

# ಕುಣಬಿ ಸಮುದಾಯದ ಮೂಲ ಮತ್ತು ಚರಿತ್ರೆ

೨.೧ ಉತ್ತರ ಕನ್ನಡ ಜಿಲ್ಲೆಯ ಸಾಮಾನ್ಯ ಭೌಗೋಳಿಕ ವಿವರಗಳು

೨.೨ ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಸ್ಥೂಲ ಪರಿಚಯ

೨.೩ ಅಧ್ಯಯನಕ್ಕೆ ಆಯ್ದುಕೊಂಡ ತಾಲೂಕುಗಳ ಭೌಗೋಳಿಕ ವಿವರಗಳು

೨.೪ ಕುಣಬಿಯರ ಪೌರಾಣಿಕ ಮತ್ತು ಚಾರಿತ್ರಿಕ ಹಿನ್ನಲೆ

೨.೫ ಭಾರತದ ವಿವಿಧ ರಾಜ್ಯಗಳ ಕುಣಬಿಗಳ ಅವಲೋಕನ

೨.೬ ಕುಣಬಿಯರ ವಲಸೆ

೨.೭ ಕರ್ನಾಟಕದ ಕುಣಬಿಯರು

# ಅಧ್ಯಾಯ ೨

# ಕುಣಬಿ ಸಮುದಾಯದ ಮೂಲ ಮತ್ತು ಚರಿತ್ರೆ

ಪ್ರಸ್ತುತ ಅಧ್ಯಾಯವು ಈ ಮಹಾಪ್ರಬಂಧಕ್ಕೆ ಒಂದು ಪ್ರವೇಶಿಕೆಯನ್ನು ಒದಗಿಸುತ್ತದೆ. ಆರಂಭದಲ್ಲಿ ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕ ಮತ್ತು ಅದರ ಚಾರಿತ್ರಿಕ ಅಂಶಗಳನ್ನು ಸ್ಥೂಲವಾಗಿ ವಿವರಿಸಲಾಗಿದೆ. ಇದರ ನಂತರ ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಸ್ಥೂಲ ಪರಿಚಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಪರಿಶಿಷ್ಟ ಜಾತಿ, ಸಮುದಾಯಗಳ ಅಂಕಿ-ಅಂಶಗಳ ವಿವರಗಳನ್ನು ನೀಡಲಾಗಿದೆ.

ಕುಣಬಿ ಸಮುದಾಯದ ಚಾರಿತ್ರಿಕ ರೂಪಾಂತರಗಳನ್ನು ದಾಖಲಿಸಲು ಯತ್ನಿಸಲಾಗಿದೆ. ಕುಣಬಿಗಳೆಂದರೆ ಯಾರು? ಈ ಬರಹಕ್ಕೆ ಮುಖ್ಯವಾಗಿ ಈಗಾಗಲೇ ಕುಣಬಿಗಳ ಕುರಿತು ಪ್ರಕಟಗೊಂಡ ಪರಿಚಯಾತ್ಮಕ ಬರಹಗಳಿಂದ ಹಿಡಿದು, ಕುಣಬಿಗಳ ಮೌಖಿಕ ಸಾಹಿತ್ಯ, ಆಚರಣೆ ಮತ್ತು ಸಾಮಾಜಿಕ ವಿಧಿ ನಿಷೆಧಗಳನ್ನು ಹಾಗೂ ನಿತ್ಯದ ಬದುಕಿನ ಆಗುಹೋಗುಗಳನ್ನು ಪ್ರಧಾನವಾಗಿ ಅಧ್ಯಯನ ಮಾಡಲಾಗಿದೆ. ಡಾ. ಹಿ.ಚಿ. ಬೋರಲಿಂಗಯ್ಯ, ಡಾ. ಸವಿತಾ ನಾಯಕ, ಡಾ. ಎ.ಎಸ್. ಪ್ರಭಾಕರ, ಹೆಚ್.ಡಿ. ಪ್ರಶಾಂತ, ಪ್ರೊ. ಎಚ್.ಜೆ. ಲಕ್ಕಪ್ಪಗೌಡ, ಡಾ. ಜೆ.ಕೆ. ರಮೇಶ. ಈ ವಿದ್ವಾಂಸರ ಸಂಶೋಧನಾ ಬರಹಗಳ ಅವಲೋಕನದ ಜೊತೆಗೆ ಈ ಅಧ್ಯಯನಕ್ಕಾಗಿ ಕಳೆದ ಮೂರುವರೆ ವರ್ಷಗಳ ಕಾಲ ಉತ್ತರ ಕನ್ನಡ ಜಿಲ್ಲೆಯಲ್ಲಿ ನನ್ನ ಕ್ಷೇತ್ರಕಾರ್ಯದ ಫಲವಾಗಿ ಲಭ್ಯವಾದ ಕುಣಬಿ ಸಮಾಜದ ಅನೇಕ ಅನುಭವಗಳನ್ನು ಈ ಅಧ್ಯಾಯದಲ್ಲಿ ಮುಖ್ಯವಾಗಿ ಬಳಸಿಕೊಳ್ಳಲಾಗಿದೆ. ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನವನ್ನು ಉತ್ತರ ಕನ್ನಡ ಜಿಲ್ಲೆಯ ಮತ್ತು ಕುಣಬಿ ಸಮುದಾಯದ ಸ್ಥೂಲ ಪರಿಚಯ ಮಾಡಿಕೊಡುವುದರ ಜೊತೆಗೆ ಈ ಪ್ರಬಂಧದ ಮುಖ್ಯ ಅಧ್ಯಾಯಗಳನ್ನು ಅರ್ಥಮಾಡಿಕೊಳ್ಳಲು ಪೂರಕ ತಿಳುವಳಿಕೆಯನ್ನು ಕೊಡುವ ಸಲುವಾಗಿ ಬರೆಯಲಾಗಿದೆ.

## ೨.೧ ಉತ್ತರ ಕನ್ನಡ ಜಿಲ್ಲೆಯ ಸಾಮಾನ್ಯ ಭೌಗೋಳಿಕ ವಿವರಗಳು

ಕರ್ನಾಟಕದ ೩೦ ಜಿಲ್ಲೆಗಳ ಪೈಕಿ ಉತ್ತರ ಕನ್ನಡ ಜಿಲ್ಲೆಯು ಒಂದು ಜಿಲ್ಲೆ. ಅರಬೀ ಸಮುದ್ರದ ಗುಂಟ ತನ್ನ ಕರಾವಳಿ ಪ್ರದೇಶವನ್ನು ಹೊಂದಿದ ಹಾಗೂ ಮೂರು ಕರಾವಳಿ ಜಿಲ್ಲೆಗಳಲ್ಲೊಂದಾಗಿದೆ. ಪಶ್ಚಿಮ ಘಟ್ಟ ಪ್ರದೇಶವು ಇದನ್ನು ಎರಡು ಭಾಗಗಳನ್ನಾಗಿ ವಿಭಾಗಿಸಿದೆ. ಉತ್ತರ ಕನ್ನಡ ಜಿಲ್ಲೆಯು ಐದು ಕರಾವಳಿ ಗುಂಟ ತಾಲೂಕುಗಳನ್ನು ಹೊಂದಿದೆ. ಅವಾವುವೆಂದರೆ ೧) ಕಾರವಾರ, ೨) ಹೊನ್ನಾವರ, ೩) ಕುಮಟಾ, ೪) ಅಂಕೋಲಾ ಮತ್ತು ೫) ಭಟ್ಕಳ. ಅಲ್ಲದೆ ಎತ್ತರ ಘಟ್ಟ ಪ್ರದೇಶಗಳಲ್ಲಿ ಆರು ತಾಲೂಕುಗಳಿವೆ - ಅವು ೧) ಸಿದ್ದಾಪುರ, ೨) ಶಿರ್ಸಿ, ೩)

ಸೂಪಾ, ೪) ಮುಂಡಗೋಡ, ೫) ಯಲ್ಲಾಪುರ ಮತ್ತು ೬) ಹಳಿಯಾಳ. ಇವು ದಖಿನ್ ಪ್ರಸ್ತಭೂಮಿಯವರೆಗೆ ವಿಸ್ತರಿಸಿವೆ.

ಉತ್ತರ ಕನ್ನಡ ಜಿಲ್ಲೆಯು ಬಿಳಿ ರಜತ ವರ್ಣದ ಬೀಚ್‌ಗಳು, ಸುಂದರ ಹಸಿರು ವರ್ಣದ ಭತ್ತದ ಬೆಳೆಯ ಕ್ಷೇತ್ರಗಳು, ತಂಪು ತರುವ ಪಾಮ್ ಗಿಡಗಳು, ದಟ್ಟ ಕಾಡು ಹಾಗೂ ನದಿಕೊಳ್ಳಗಳಿಂದ ಕಂಗೊಳಿಸುವ ನಿಸರ್ಗ ರಮಣೀಯ ಸುಂದರ ಪ್ರದೇಶಗಳಲ್ಲೊಂದು. ನಿಸರ್ಗ ನಿರ್ಮಿತ ಜಲಪಾತಗಳು ದೇಶ-ವಿದೇಶಗಳಿಂದ ಪ್ರವಾಸಿಗರನ್ನು ಆಕರ್ಷಿಸುತ್ತವೆ. ಫಾನಾ ಮತ್ತು ಫ್ಲೋರಾಗಳಿಂದ ಸಂಪದ್ಭರಿತವಾಗಿದೆ. ಅಂತರಾಷ್ಟ್ರೀಯ ಖ್ಯಾತಿಯ ಬಂದರುಗಳಿವೆ. ಮೀನುಗಾರಿಕೆ ಮತ್ತು ಅಂತರಾಷ್ಟ್ರೀಯ ವ್ಯಾಪಾರೋದ್ಯಮಕ್ಕೆ ಹೆಸರು ಗಳಿಸಿದೆ.

**ಉತ್ತರ ಕನ್ನಡ ಹೆಸರಿನ ಮೂಲ**

ಕರ್ನಾಟಕದಲ್ಲಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಎಂದು ಎರಡು ಕರಾವಳಿ ಜಿಲ್ಲೆಗಳು ಬಂದರುಗಳಿಗೆ ಪ್ರಸಿದ್ಧಿ ಹೊಂದಿವೆ. ಪೋರ್ಚುಗೀಸರು ಕರ್ನಾಟಕ ಎಂಬುದನ್ನು 'ಕೆನರಾ' ಎಂದು ಸಂಕ್ಷಿಪ್ತಗೊಳಿಸಿದರು. ಪೋರ್ಚುಗೀಸ ಇತಿಹಾಸ ತಜ್ಞ ಫಾರಿಯಾ ವಾಯ್. ಸೌಜಾ 'ಕೆನರಾ' ಎಂಬ ಹೆಸರಿನ ಉಪಯೋಗವನ್ನೇ ಮುಂದುವರೆಸಿದರು. ಡಚ್ ಪ್ರವಾಸಿಗ ವೊನ್ ಲಿನ್ಸ್‌ಕೋಟೆನ್ (೧೫೮೩) ಇಲ್ಲಿಯ ಜನರಿಗೆ ಕೆನರಿಯನ್‌ರು ಎಂದು ಕರೆದಿದ್ದಾನೆ. ಕ್ರಿ.ಶ. ೧೭೯೯ ರಲ್ಲಿ ಬ್ರಿಟಿಷರು ಟಿಪ್ಪು ಸುಲ್ತಾನನಿಂದ ಈ ಪ್ರದೇಶವನ್ನು ವಶಪಡಿಸಿಕೊಂಡ ನಂತರ ಕೆನರಾ ಜಿಲ್ಲೆ ಎಂದೇ ಕರೆದರು. ಇದೇ ಪ್ರದೇಶವನ್ನು ವಿಭಜಿಸಿ ಉತ್ತರ ಭಾಗವನ್ನು (ನಾರ್ಥ್ ಕೆನರಾ) ಉತ್ತರ ಕನ್ನಡ ಎಂದೂ, ದಕ್ಷಿಣ ಭಾಗವನ್ನು (ಸೌತ ಕೆನರಾ) ದಕ್ಷಿಣ ಕನ್ನಡ ಎಂದೂ ಕರೆದರು. ಸ್ವಾತಂತ್ರ್ಯ ನಂತರ ಕರ್ನಾಟಕ ಈ ಹೆಸರುಗಳನ್ನು ಬದಲಾಯಿಸಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೆಂದೂ ೩೧-೧-೧೯೭೭ ರಿಂದ ಕರೆಯಲು ಪ್ರಾರಂಭಿಸಲಾಯಿತು. ಆದರೆ ಉತ್ತರ ಕನ್ನಡಕ್ಕೆ ಬದಲಾಗಿ ಕಾರವಾರ ಜಿಲ್ಲೆ ಎಂದೇ ಹೆಚ್ಚು ಪ್ರಚಲಿತವಿದೆ.

**ಭೌಗೋಳಿಕ ಸ್ಥಾನಮಾನ**

ಉತ್ತರ ಕನ್ನಡ ಜಿಲ್ಲೆ ಕರ್ನಾಟಕದ ವಾಯವ್ಯಕ್ಕಿದೆ, ಕಾರವಾರ ಜಿಲ್ಲಾ ಕೇಂದ್ರವಾಗಿದೆ. ರಾಜ್ಯದ ಪುನರ್‌ವಿಂಗಡನೆಯ ಮೊದಲು ಇದು ಮುಂಬೈ ರಾಜ್ಯದ ಅಂಗವಾಗಿತ್ತು. ಉತ್ತರ ಕನ್ನಡ ಜಿಲ್ಲೆ ಕರ್ನಾಟಕದಲ್ಲಿರುವ ಜಿಲ್ಲೆಗಳಲ್ಲೆಲ್ಲಾ ತುಂಬ ಸಂಪದ್ಭರಿತ ಜಿಲ್ಲೆಯಾಗಿದೆ. ಇದು ಬೆಳಗಾವಿ ವಿಭಾಗಕ್ಕೆ ಸೇರಿದ ಒಂದು ಜಿಲ್ಲೆ. 'ಕಾರವಾರ ಉತ್ತರ ಕನ್ನಡ ಜಿಲ್ಲಾ ಕೇಂದ್ರವಾಗಿದೆ. ಜಿಲ್ಲೆಯ ವಿಸ್ತೀರ್ಣ ೧೦,೨೯೧ ಚ.ಕಿ.ಮೀ. ಇದೆ. ಇದು ರಾಜ್ಯದ ೫ನೇ ದೊಡ್ಡ ಜಿಲ್ಲೆಯಾಗಿದೆ. ೨೦೦೧ರ ಜನಗಣತಿಯಂತೆ ಒಟ್ಟು ಜನಸಂಖ್ಯೆ ೧೩,೫೩,೬೪೪ ಇದೆ. ಒಟ್ಟು ೧೧

ತಾಲೂಕುಗಳನ್ನು ಉತ್ತರ ಕನ್ನಡ ಜಿಲ್ಲೆ ಹೊಂದಿದೆ, ಅವುಗಳೆಂದರೆ ಅಂಕೋಲ, ಭಟ್ಕಳ, ಕಾರವಾರ, ಹಳಿಯಾಳ, ಹೊನ್ನಾವರ, ಜೋಯಿಡಾ, ಕುಮಟಾ, ಮುಂಡಗೋಡ, ಸಿದ್ಧಾಪುರ, ಸಿರಸಿ ಮತ್ತು ಯಲ್ಲಾಪುರ. ೧೪ ನಗರ ಪಟ್ಟಣಗಳಿವೆ, ೩೫ ಹೋಬಳಿಗಳನ್ನು, ೨೦೭ ಗ್ರಾಮ ಪಂಚಾಯತಿಗಳನ್ನು ಹೊಂದಿದೆ. ಜಿಲ್ಲೆಯ ಸಾಕ್ಷರತೆಯ ಪ್ರಮಾಣ ಶೇ. ೭೬.೬ ರಷ್ಟು ಇದೆ. ಜನಸಾಂದ್ರತೆ ೧೩೨ ಚ.ಕಿ.ಮೀ. ಗೆ. ಲಿಂಗಾನುಧಾರಿತ ೯೭೦ ಹೆಣ್ಣು ಮತ್ತು ೧೦೦೦ ಗಂಡು. ನೈಸರ್ಗಿಕ ಸಂಪತ್ತು ೮,೧೬,೭೧೮ ಹೆಕ್ಟೇರ್ ಅರಣ್ಯ'.[1]

ಕಾರವಾರ ಮತ್ತು ಬೇಲಿಕೆರಿಗಳಲ್ಲಿ ಚಿಕ್ಕ ಕೊಲ್ಲಿಗಳಿವೆ. ಉಳಿದಂತೆ ನೇರವಾದ ತೀರ ಪ್ರದೇಶಗಳಿವೆ. ಇಡಿ ಉತ್ತರ ಕನ್ನಡ ಜಿಲ್ಲೆ ಚೆಲುವಿನ ಬೀಡಾಗಿದೆ, ಇದೊಂದು ಪ್ರಕೃತಿಯ ಪವಾಡವೆಂದೆ ಹೇಳಬಹುದು. ನೋಡಿದಷ್ಟು ವಿಸ್ತಾರದ ಕಡಲು, ನದಿಕೊಳ್ಳಗಳ ಝುಳು ಝುಳುನಾದ, ಪಕ್ಷಿಗಳ ಚಿಲಿಪಿಲಿ ಕಲರವ, ಹಸಿರು ವಾಸಿಯಾದ ಸೃಷ್ಟಿ ಸೌಂದರ್ಯದಿಂದ ಕೂಡಿದ ನೈಸರ್ಗಿಕ ಅರಣ್ಯ ಸಂಪತ್ತು, ಬಂದರುಗಳು, ಜಲಪಾತಗಳು, ಪುಣ್ಯ ಕ್ಷೇತ್ರಗಳು, ಆಣೆಕಟ್ಟುಗಳು, ಇತಿಹಾಸ ಪ್ರಸಿದ್ಧಿ ಸ್ಥಳಗಳು ಉತ್ತರ ಕನ್ನಡ ಜಿಲ್ಲೆಯ ಪ್ರಸಿದ್ಧಿಯನ್ನು ಹೆಚ್ಚಿಸಿವೆ.

ಉತ್ತರ ಕನ್ನಡ ಜಿಲ್ಲೆ, ಇದರ ಉತ್ತರಕ್ಕೆ ಗೋವಾ ರಾಜ್ಯ, ದಕ್ಷಿಣಕ್ಕೆ ದಕ್ಷಿಣ ಕನ್ನಡ ಜಿಲ್ಲೆ, ಪೂರ್ವಕ್ಕೆ ಧಾರವಾಡ, ಬೆಳಗಾವಿ, ಶಿವಮೊಗ್ಗ ಜಿಲ್ಲೆಗಳಿವೆ. ಈ ಜಿಲ್ಲೆಯ ಪೂರ್ವ ರೇಖಾಂಶ ೭೪.೯ ರಿಂದ ೭೫.೧೦ ಹಾಗೂ ೧೩.೫೫ ರಿಂದ ೧೫.೩೧. ಉತ್ತರ ಅಕ್ಷಾಂಶಗಳ ನಡುವೆ ೧೦೨೭೬ ಚದುರ ಕಿಲೋಮೀಟರ್ ಪ್ರದೇಶವನ್ನು ವ್ಯಾಪಿಸಿಕೊಂಡಿದೆ. ಸುಮಾರು ೭೦೦ ಮೀಟರ್ ಎತ್ತರವಾಗಿ ದಕ್ಷಿಣೋತ್ತರವಾಗಿ ಹಬ್ಬಿರುವ ಸಹ್ಯಾದ್ರಿ ಶ್ರೇಣಿಯಲ್ಲಿಯ ದೇವಿಮನೆ ಘಟ್ಟ, ಮಲೆಮನೆ ಘಟ್ಟ, ಅರಬೈಲ್ ಘಟ್ಟಗಳು ಈ ಜಿಲ್ಲೆಯನ್ನು ಪ್ರಾಕೃತಿಕವಾಗಿ ಘಟ್ಟದ ಮೇಲಿನ ಹಾಗೂ ಘಟ್ಟದ ಕೆಳಗಿನ ಪ್ರದೇಶಗಳಾಗಿ ಹೊಂದಿದೆ.

ಹೀಗೆ ಉತ್ತರ ಕನ್ನಡ ಜಿಲ್ಲೆ ಕರ್ನಾಟಕದ ಅತ್ಯಂತ ಸಂಪದ್ಭರಿತ ಜಿಲ್ಲೆಯಾಗಿದೆ. ಇಲ್ಲಿನ ಭೌಗೋಳಿಕ, ನೈಸರ್ಗಿಕ ಸಂಪತ್ತು ಬಹುಶಃ ನಮ್ಮ ರಾಜ್ಯದ ಬೇರೆ ಜಿಲ್ಲೆಗೆ ಹೋಲಿಸಿದರೆ ಅತ್ಯಧಿಕವಾಗಿದೆ. 'ಮ್ಯಾಂಗನೀಸ್, ಕಬ್ಬಿಣ, ಸುಣ್ಣದಕಲ್ಲು, ಜೇಡಿಮಣ್ಣು, ಇಲ್ಮನೈಟ್, ಗಾಜು, ಸಾಬೂನು, ಕಲ್ಲು, ಅಭ್ರಕ, ಬಾಕ್ಸೈಡ್ ಈ ಜಿಲ್ಲೆಯ ಖನಿಜಗಳು. ಜಿಲ್ಲೆಯಲ್ಲಿ ಅನೇಕ ಕಡೆ ಮ್ಯಾಂಗನೀಸ್ ದೊರೆಯುತ್ತದೆ. ಜೋಯ್ಡ ತಾಲೂಕಿನ ಕೋಡ್ಲಿಗವಿಗಳು ಮ್ಯಾಂಗನೀಸ್‌ಗೆ ಪ್ರಸಿದ್ಧವಾಗಿದ್ದರೆ, ಹೊನ್ನಾವರ ತಾಲೂಕಿನ ಅಪ್ಸರ ಕೊಂಡದಲ್ಲು, ಕುಮಟಾ ತಾಲೂಕಿನ ಯಾಣದಲ್ಲೂ ಕಬ್ಬಿಣದ ಅದಿರಿನ ನಿಕ್ಷೇಪವಿದೆ. ಸಹ್ಯಾದ್ರಿ ಪಾದಭಾಗಗಳಲ್ಲಿ ಕಬ್ಬಿಣವಲ್ಲದೆ ಇತರ ಲೋಹ ನಿಕ್ಷೇಪಗಳುಂಟು. ಯಾಣ ಮತ್ತಿತರ ಕಡೆಗಳಲ್ಲಿ ಸುಣ್ಣದಕಲ್ಲು ದೊರೆಯುತ್ತದೆ. ಹಲವೆಡೆ

ಸ್ವರ್ಣಮಷಿಕೆ, ಬಿಳಿಬೇಡಿ ಇವೆ. ಭತ್ತ, ತೆಂಗು, ಕಬ್ಬು, ಅಡಕೆ, ಮೆಣಸು, ಏಲಕ್ಕಿ, ಬಾಳೆ ಮುಖ್ಯವಾದ ಬೆಳೆಗಳು. ಇವಲ್ಲದೆ ಜಿಲ್ಲೆಯಲ್ಲಿ ಗೋಡಂಬಿ, ಮಾವು, ಹುಣಸೆ, ನಿಂಬೆ, ಅನಾನಸು, ಹಲಸು, ಪಪ್ಪಾಯಿ, ಬಟಾಟೆ, ಬದನೆ, ಕಲ್ಲಂಗಡಿ, ಹೈಬ್ರಿಡ್ ಜೋಳ, ರಾಗಿ, ಶೇಂಗಾ, ಇತ್ಯಾದಿಗಳನ್ನು ಬೆಳೆಯಲಾಗುತ್ತದೆ. ಭತ್ತ ೮೫೯೨೪ ಹೆಕ್ಟೇರ್, ಏಲಕ್ಕಿ ೩೯೬ ಹೆಕ್ಟೇರ್, ಮೆಣಸು ೧೩೫ ಹೆಕ್ಟೇರ್, ಮಾವು ೧೧೪೦ ಹೆಕ್ಟೇರ್, ಬಾಳೆ ೧೩೨೦ ಹೆಕ್ಟೇರ್, ಅನಾನಸ್ ೩೧೫ ಹೆಕ್ಟೇರ್, ಹಲಸು ೨೦೬ ಹೆಕ್ಟೇರ್, ಪಪ್ಪಾಯಿ ೧೧೪೯ ಹೆಕ್ಟೇರ್, ಹತ್ತಿ ೧೪೮೨೩ ಹೆಕ್ಟೇರ್‌ನಲ್ಲಿ ಬೆಳೆಯುತ್ತಾರೆ. ಅಡಕೆಯ ತೋಟದಲ್ಲಿ ಏಲಕ್ಕಿ, ಕಾಳುಮೆಣಸು, ಬಾಳೆ ಬೆಳೆಯುತ್ತಾರೆ. ಗದ್ದೆಯಲ್ಲಿ ರಾಗಿ, ಕಡಲೆ, ತೊಗರಿ, ಮೊದಲಾದ ಧಾನ್ಯಗಳನ್ನು ಬೆಳೆಯುತ್ತಾರೆ'.[೨]

ಮೀನುಗಾರಿಕೆ ಉತ್ತರ ಕನ್ನಡ ಜಿಲ್ಲೆಯ ಒಂದು ಮುಖ್ಯ ಉದ್ಯೋಗವಾಗಿದೆ. ಒಂದು ಕಾಲದಲ್ಲಿ ಹರಿಕಾಂತ ತಾಂಡೇಲ, ಖಾರ್ವಿ, ಗಾವಿತ, ಅಂಬಿಗ, ಮೊಗೇರ, ಅಗೇರ, ಕ್ರಿಶ್ಚಿಯನ್ ದಾಲಜಿಗಳಷ್ಟೇ ಈ ವೃತ್ತಿಯನ್ನವಲಂಭಿಸಿದ್ದರೆ, ಇತ್ತೀಚೆಗೆ ಸಾಮಾನ್ಯವಾಗಿ ಎಲ್ಲ ಜಾತಿಯವರೂ ಮೀನು ಉದ್ಯಮದಲ್ಲಿ ತೊಡಗಿಕೊಂಡಿದ್ದಾರೆ. ಸುಮಾರು ೫೪.೭೬೩ ಜನ ಈ ವೃತ್ತಿಯಲ್ಲಿದ್ದಾರೆ. ಇವರು ಕರಾವಳಿ ಪ್ರದೇಶದ ೧೧೮ ಹಳ್ಳಿಗಳಲ್ಲಿದ್ದಾರೆ. ಸಮುದ್ರದಿಂದ ಮೀನು ಹಿಡಿಯುವ ಕೇಂದ್ರಗಳೆಂದರೆ ಅಗ್ರಾ, ಭಟ್ಕಳ, ಬಿಣಗಾ, ಚೆಂಡಿಯೆ, ಗಂಗಾವಳಿ, ಕಾರವಾರ, ಹೊನ್ನಾವರ, ಖಾರವಿ, ಕೇಣಿ, ಕೋಡಾರ, ಕುಮಟಾ, ಮಾಜಾಳಿ, ಮಂಕಿ, ಮುರ್ಡೇಶ್ವರ, ಶಿರಾಲಿ, ತದಡಿ. ಸಾಗರ ಮೀನುಗಾರಿಕೆಯಲ್ಲಿ ೩೦೯೪ ಟನ್ ಹಿಡಿದರೆ, ಸಿಹಿನೀರಿನಲ್ಲಿ ೨೪೯ ಟನ್ ಮೀನು ಹಿಡಿಯಲಾಗುತ್ತದೆ.

ಜಿಲ್ಲೆಯಲ್ಲಿ ೫೨ ಮಂಜುಗಡ್ಡೆ ತಯಾರಿಕಾ ಕಾರ್ಖಾನೆಗಳಿವೆ. ದಾಂಡೇಲಿಯಲ್ಲಿ ಕಾಗದದ ಕಾರ್ಖಾನೆ ದೊಡ್ಡ ಉದ್ದಿಮೆ. ಅಲ್ಲದೆ ಪ್ಲೈವುಡ್, ಫೆರೋಮ್ಯಾಂಗನೀಸ್ ಉದ್ದಿಮೆಗಳೂ ಇವೆ. ಕಾರವಾರ, ಬೇಲೆಕೇರಿ, ತದಡಿ, ಕುಮಟಾ, ಹೊನ್ನಾವರ, ಭಟ್ಕಳ, ಇವು ಮುಖ್ಯ ಬಂದರುಗಳು. ಕಾರವಾರದಲ್ಲಿ ಸರ್ವಋತು ಬಂದರನ್ನು ಬೃಹತ್ತಾಗಿ ಕಟ್ಟಿದ್ದಾರೆ. ಬಳ್ಳಾರಿ ಪ್ರದೇಶ ಕಬ್ಬಿಣದ ಅದಿರನ್ನು ಸಾಗಿಸುವುದು ಕಾರವಾರ ಬಂದರಿನಿಂದಲೆ. ಜಿಲ್ಲೆಯಲ್ಲಿ ೩೨೯ ಕಿ.ಮೀ.ಗಳ ರಾಷ್ಟ್ರೀಯ ಹೆದ್ದಾರಿ, ೬೭೨ ಕಿ.ಮೀ.ಗಳ ರಾಜ್ಯ ಹೆದ್ದಾರಿ ಮಾರ್ಗಗಳಿವೆ. ಜಿಲ್ಲಾ ಮುಖ್ಯ ರಸ್ತೆಗಳು ೭೯೫ ಕಿ.ಮೀ., ೨೪ ಭಾರಿ ಸೇತುವೆಗಳಿವೆ. ಪಶ್ಚಿಮ ಕರಾವಳಿಯ ಹೆದ್ದಾರಿ ದಕ್ಷಿಣಕ್ಕೆ ಕನ್ಯಾಕುಮಾರಿಯವರೆಗೆ, ಉತ್ತರಕ್ಕೆ ಕಾಶ್ಮೀರದವರೆಗೆ ಸಂಪರ್ಕ ಕಲ್ಪಿಸುತ್ತದೆ'.[೩]

**ಉದ್ದಿಮೆಗಳು** : ಉತ್ತರ ಕನ್ನಡ ಜಿಲ್ಲೆಯಲ್ಲಿ ಎಂಜಿನೀಯರಿಂಗ್ ಉದ್ಯಮ ೧೪, ರಾಸಾಯನಿಕ ಕಾರ್ಖಾನೆಗಳು ೯, ಬಟ್ಟೆ ಕಾರ್ಖಾನೆ ೨, ಇತರೆ ಸಣ್ಣ ಪ್ರಮಾಣದ ಕಾರ್ಖಾನೆಗಳು ೬೭. ಈ

ಕಾರ್ಖಾನೆಗಳಲ್ಲಿ ಉದ್ಯೋಗಿಗಳು ೧೮೪೬, ಜಿಲ್ಲೆಯಲ್ಲಿ ಕೆಲವು ಬೃಹತ್ ಮತ್ತು ಮಧ್ಯಮ ಗಾತ್ರದ ಉದ್ದಿಮೆಗಳಿವೆ. ವೆಸ್ಟ್‌ಕೋಸ್ಟ್ ಪೇಪರ್ ಮಿಲ್ಸ್, ದಾಂಡೇಲಿಯ ಇಂಡಿಯನ್ ಪ್ಲೈವುಡ್ ಮ್ಯಾನುಫ್ಯಾಕ್ಚರಿಂಗ್ ಕಂಪನಿ, ಜೈಹಿಂದ್ ಸಾಮಿಲ್, ಬಳ್ಳಾಪುರ ಇಂಡಸ್ಟ್ರೀಸ್ ಲಿ., ಬಿಣಗಾದ ಬಿಲ್ಟ್ ಕಾರ್ಖಾನೆ, ದಾಂಡೇಲಿ ಫೆರೋ ಅಲಾಯ್ಸ್ ಪ್ರೈ. ಲಿ., ಇವು ಮುಖ್ಯ ಉದ್ದಿಮೆಗಳು. ಇವಲ್ಲದೆ ಸಣ್ಣ ಕೈಗಾರಿಕಾ ಘಟಕಗಳು ಖಾದಿ ಗ್ರಾಮೋದ್ಯೋಗ ಕರಕುಶಲ ಘಟಕಗಳು ಹಾಗೂ ಮೀನುಗಾರಿಕೆ ಘಟಕಗಳು, ರಾಸಾಯನಿಕ ಘಟಕಗಳು, ಚರ್ಮ ಮತ್ತು ರಬ್ಬರ್ ಘಟಕಗಳು, ನೂಲುವ-ನೇಯುವ ಘಟಕಗಳು, ಮುದ್ರಣ ಘಟಕಗಳು, ಜೇನು ಸಾಕಾಣಿಕೆ, ಬೆತ್ತ ಬಿದಿರುಗಳಿಂದ ವಸ್ತುಗಳನ್ನು ತಯಾರಿಸುವ ಘಟಕಗಳು, ಎಣ್ಣೆ ತಯಾರಿಕಾ ಘಟಕಗಳು, ಕುಂಬಾರಿಕೆ ಮುಂತಾದ ಅನೇಕ ಉದ್ಯಮಗಳಿವೆ.'[೪]

## ಕ್ಷೇತ್ರ ಮತ್ತು ಜನಸಂಖ್ಯೆ

ಉತ್ತರ ಕನ್ನಡ ಜಿಲ್ಲೆಯ ಒಟ್ಟು ಕ್ಷೇತ್ರ ೧೦೨೯೧ ಚ.ಕಿ.ಮೀ. ಒಟ್ಟು ೧೧ ತಾಲೂಕುಗಳ ಪೈಕಿ ಸೂಪಾ ತಾಲೂಕು ಅತ್ಯಂತ ದೊಡ್ಡ ತಾಲೂಕೆನಿಸಿದೆ. ಅದರ ಕ್ಷೇತ್ರ ೧೮೯೦ ಚ.ಕಿ.ಮೀ. ಹಾಗೆಯೇ ಭಟ್ಕಳ ತಾಲೂಕು ಕೇವಲ ೩೪೯ ಚ.ಕಿ.ಮೀ. ಕ್ಷೇತ್ರ ಹೊಂದಿ ಅತೀ ಚಿಕ್ಕ ತಾಲುಕೆನಿಸಿದೆ. ಕೋಷ್ಠಕ ೨.೧, ಕೋಷ್ಠಕ ೨.೨ ಮತ್ತು ಕೋಷ್ಠಕ ೨.೩ ರಲ್ಲಿ ಸಂಪೂರ್ಣ ಮಾಹಿತಿಯನ್ನು ನೀಡಲಾಗಿದೆ.

ಕೋಷ್ಠಕ-೨.೧
ಉತ್ತರ ಕನ್ನಡ ಜಿಲ್ಲೆಯ ಅಂಕಿ-ಅಂಶಗಳು
ಶಿಕ್ಷಣ ೨೦೦೧ ರ ಜನಗಣತಿಯಂತೆ

| | |
|---|---|
| ಜಿಲ್ಲೆಯ ಸಾಕ್ಷರತಾ ಪ್ರಮಾಣ | ೭೬.೬ |
| ಪುರುಷರು | ೮೪.೫ |
| ಮಹಿಳೆಯರು | ೬೮.೫ |

ಪಡಿತರ ಚೀಟಿದಾರರು (೩೧-೩-೨೦೧೦ ರಂತೆ)

| | |
|---|---|
| ನ್ಯಾಯಬೆಲೆ ಅಂಗಡಿ | ೪೨೬ |
| ಅಂತ್ಯೋದಯ | ೧೬,೮೯೫ |
| ಅಕ್ಷಯ | ೨,೪೯,೨೬೦ |
| ಎ.ಪಿ.ಎಲ್. | ೧,೪೧,೧೪೮ |
| ಒಟ್ಟು | ೪,೦೭,೩೦೩ |

| | |
|---|---|
| ೨೦೦೯ರ ಜನಸಂಖ್ಯೆ ಅಂದಾಜು | ೧೪,೬೫,೧೭೪ |
| ಒಟ್ಟು ಕುಟುಂಬಗಳು | ೨,೬೬,೪೮೧ |

## ೨೦೦೯-೧೦ ಭೂಮಿಯ ಬಳಕೆ

| | |
|---|---|
| ಭೌಗೋಳಿಕ ವಿಸ್ತೀರ್ಣ | ೧೦,೨೪,೬೭೯ |
| ಅರಣ್ಯ | ೮,೧೩,೫೯೫ |

## ಸಾಗುವಳಿಗೆ ಲಭ್ಯವಿಲ್ಲದ ಭೂಮಿ

| | |
|---|---|
| ವ್ಯವಸಾಯೇತರ | ೩೪,೪೬೦ |
| ಬಂಜರು | ೧೬,೨೩೪ |
| ಒಟ್ಟು | ೫೦,೬೯೪ |

## ೨೦೦೯-೧೦ ಶೈಕ್ಷಣಿಕ ಮಟ್ಟಗಳು (೩೧-೩-೨೦೧೦ ರಂತೆ)

| ಕ್ರಸಂ. | ಶೈಕ್ಷಣಿಕ ಮಟ್ಟ | ಸಂಖ್ಯೆ | ಹುಡುಗರು | ಹುಡುಗಿಯರು | ಒಟ್ಟು ವಿದ್ಯಾರ್ಥಿಗಳು |
|---|---|---|---|---|---|
| ೧ | ಪ್ರಾಥಮಿಕ ಶಾಲೆಗಳು | ೨೩೨೮ | ೯೦೪೧೦ | ೮೬೩೬೭ | ೧೭೬೭೭೭ |
| ೨ | ಪ್ರೌಢ ಶಾಲೆಗಳು | ೩೧೧ | ೩೩೭೧೩ | ೩೨೫೦೩ | ೬೬೨೧೬ |
| ೩ | ಪದವಿಪೂರ್ವ | ೮೧ | ೧೦೪೫೦ | ೧೨೫೪೦ | ೨೨೯೯೦ |
| ೪ | ಪಾಲಿಟೆಕ್ನಿಕ್ | ೬ | ೨೮೨೬ | ೫೫೫ | ೩೩೮೧ |
| ೫ | ಪದವಿ ಕಾಲೇಜು | ೩೦ | ೪೩೧೨ | ೫೪೯೬ | ೯೮೦೮ |
| ೬ | ಇಂಜಿನೀಯರಿಂಗ್ | ೨ | ೧೫೭೮ | ೨೯೯ | ೧೮೭೭ |
| ೭ | ವೈದ್ಯಕೀಯ | ೧ | ೯೬ | ೮೩ | ೧೭೯ |
| ೮ | ಭಾರತೀಯ ವೈದ್ಯ ಪದ್ಧತಿ | ೧ | - | - | ೧೧೪ |
| ೯ | ದಂತ ಶಿಕ್ಷಣ | - | - | - | - |
| ೧೦ | ಕಾನೂನು | ೧ | - | - | - |
| ೧೧ | ಅಂಗನವಾಡಿ ಕೇಂದ್ರಗಳು | ೧೮೪೪ | - | - | - |

ಆರೋಗ್ಯ ಮತ್ತು ಕುಟುಂಬ ಕಲ್ಯಾಣ (೩೧-೩-೨೦೧೦ ರಂತೆ)

| | | |
|---|---|---|
| ೧ | ಅಲೋಪತಿ ಆಸ್ಪತ್ರೆಗಳು | ೧೩ |
| ೨ | ಭಾರತೀಯ ವೈದ್ಯ ಪದ್ಧತಿ ಆಸ್ಪತ್ರೆಗಳು | ೩ |
| ೩ | ಖಾಸಗಿ ಆಸ್ಪತ್ರೆಗಳು (ನರಸಿಂಗ್ ಹೋಂಗಳು ಸೇರಿ) | ೧೩೧ |
| ೪ | ಪ್ರಾಥಮಿಕ ಆರೋಗ್ಯ ಕೇಂದ್ರಗಳು | ೮೩ |
| ೫ | ಸಮುದಾಯ ಆರೋಗ್ಯ ಕೇಂದ್ರಗಳು | ೭ |

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವಿದ್ಯಾರ್ಥಿ ನಿಲಯಗಳು (೩೧-೩-೨೦೧೦ ರಂತೆ)

| ಕ್ರಸಂ. | | ಪ.ಜಾ. ವಿದ್ಯಾರ್ಥಿ ನಿಲಯಗಳು | ವಿದ್ಯಾರ್ಥಿ |
|---|---|---|---|
| ೧ | ಮೆಟ್ರಿಕ್ ಪೂರ್ವ ಸಂಖ್ಯೆ | ೨೮ | ೧೫೧೩ |
| ೨ | ಮೆಟ್ರಿಕ್ ನಂತರ ಸಂಖ್ಯೆ | ೩ | ೩೦೦ |

| ಕ್ರಸಂ. | | ಪ.ಪಂ. ವಿದ್ಯಾರ್ಥಿ ನಿಲಯಗಳು | ವಿದ್ಯಾರ್ಥಿ |
|---|---|---|---|
| ೧ | ಮೆಟ್ರಿಕ್ ಪೂರ್ವ ಸಂಖ್ಯೆ | ೧ | ೬೫ |
| ೨ | ಮೆಟ್ರಿಕ್ ನಂತರ ಸಂಖ್ಯೆ | ೦ | ೦ |

ಹಿಂದುಳಿದ ವರ್ಗದವರ ವಿದ್ಯಾರ್ಥಿ ನಿಲಯಗಳು (೩೧-೩-೨೦೧೦ ರಂತೆ)

| ಕ್ರಸಂ. | | ವಿದ್ಯಾರ್ಥಿ ನಿಲಯಗಳು | ವಿದ್ಯಾರ್ಥಿ |
|---|---|---|---|
| ೧ | ಮೆಟ್ರಿಕ್ ಪೂರ್ವ ಸಂಖ್ಯೆ | ೬೨ | ೩೦೨೫ |
| ೨ | ಮೆಟ್ರಿಕ್ ನಂತರ ಸಂಖ್ಯೆ | ೧೪ | ೭೦೨ |

ಮೂಲ – ಉತ್ತರ ಕನ್ನಡ ಜಿಲ್ಲೆಯ ಅಂಕಿ-ಅಂಶಗಳ ನೋಟ, ೨೦೦೯-೧೦.

## ಕೋಷ್ಟಕ–೨.೨

### ಉತ್ತರ ಕನ್ನಡ ಜಿಲ್ಲೆ ವಿಸ್ತೀರ್ಣ ಮತ್ತು ಜನಸಂಖ್ಯೆ

| ಕ್ರ.ಸಂ. | ತಾಲೂಕು | ವಿಸ್ತೀರ್ಣ (ಚ.ಕಿ.)ಗಳಲ್ಲಿ | ಜನಸಂಖ್ಯೆ (೨೦೦೧ ರ ಜನಗಣತಿ ಪ್ರಕಾರ) | | | | | | |
|---|---|---|---|---|---|---|---|---|---|
| | | | ಒಟ್ಟು | ಗಂಡಸರು | ಹೆಂಗಸರು | ಗ್ರಾಮೀಣ | ನಗರ | ಜನಸಾಂದ್ರತೆ (ಪ್ರತಿ ಚ.ಕಿ.) | ಪುರುಷರಿಗೆ ಸ್ತ್ರೀಯರ ಪ್ರಮಾಣ |
| ೧ | ಅಂಕೋಲಾ | ೯೦೪.೭೯ | ೧೦೧೫೪೯ | ೫೧೩೯೮ | ೫೦೧೫೧ | ೭೫೪೧೧ | ೨೬೧೩೮ | ೧೧೦ | ೯೭೬ |
| ೨ | ಭಟ್ಕಳ | ೩೫೫.೫೦ | ೧೪೯೩೩೮ | ೭೩೭೪೦ | ೭೫೫೯೮ | ೧೦೭೧೯೬ | ೪೨೧೪೨ | ೪೨೮ | ೧೦೨೫ |
| ೩ | ಹಳಿಯಾಳ | ೮೪೭.೬೩ | ೧೫೯೧೪೧ | ೮೧೧೪೪ | ೭೭೯೯೭ | ೮೦೩೫೦ | ೭೮೭೯೧ | ೧೨೫ | ೯೬೪ |
| ೪ | ಹೊನ್ನಾವರ | ೭೫೬.೧೫ | ೧೬೦೩೩೧ | ೮೦೦೧೮ | ೮೦೩೧೩ | ೧೪೨೫೦೭ | ೧೭೮೨೪ | ೨೧೨ | ೧೦೦೪ |
| ೫ | ಕಾರವಾರ | ೭೨೪.೧೨ | ೧೪೭೮೯೦ | ೭೫೧೬೦ | ೭೨೭೩೦ | ೭೨೮೫೨ | ೭೫೦೩೮ | ೨೦೨ | ೯೬೮ |
| ೬ | ಕುಮಟಾ | ೫೯೦.೪೫ | ೧೪೫೮೨೬ | ೭೩೮೩೪ | ೭೧೯೯೨ | ೧೧೧೩೨೭ | ೩೪೪೯೯ | ೨೫೧ | ೯೭೫ |
| ೭ | ಮುಂಡಗೋಡ | ೬೬೭.೪೪ | ೯೦೭೩೮ | ೪೮೯೭೩ | ೪೧೭೬೫ | ೭೪೫೬೫ | ೧೬೧೭೩ | ೧೩೮ | ೮೫೩ |
| ೮ | ಸಿದ್ದಾಪುರ | ೮೪೭.೨೭ | ೧೦೦೮೭೦ | ೫೧೧೦೭ | ೪೯೭೬೩ | ೮೬೮೨೦ | ೧೪೦೫೦ | ೧೧೭ | ೯೭೪ |
| ೯ | ಶಿರಸಿ | ೧೩೨೨.೩೨ | ೧೭೫೫೫೦ | ೮೯೨೮೬ | ೮೬೨೬೪ | ೧೧೦೨೧೫ | ೬೫೩೩೫ | ೧೩೩ | ೯೬೬ |
| ೧೦ | ಸೂಪಾ | ೧೯೧೦.೪೪ | ೪೮೯೧೪ | ೨೪೫೯೦ | ೨೪೩೨೪ | ೪೮೯೧೪ | ೦ | ೨೬ | ೯೮೯ |
| ೧೧ | ಯಲ್ಲಾಪುರ | ೧೨೯೮.೭೫ | ೭೩೪೯೭ | ೩೭೬೨೬ | ೩೫೮೭೧ | ೫೫೫೭೪ | ೧೭೯೨೩ | ೫೬ | ೯೫೩ |
| | ಒಟ್ಟು | ೧೦೨೯೧.೦೦ | ೧೩೫೩೬೪೪ | ೬೮೬೮೭೬ | ೬೬೬೭೬೮ | ೯೬೫೭೩೧ | ೩೮೭೯೧೩ | ೧೩೨ | ೯೭೧ |

ಆಧಾರ: ಉತ್ತರ ಕನ್ನಡ ಜಿಲ್ಲೆಯ ಅಂಕಿ–ಅಂಶಗಳ ನೋಟ, ೨೦೦೮–೦೯, ಸಿರೀಸ್–೩೦ ಮತ್ತು ಭಾರತ ಜನಗಣತಿ, ೨೦೦೧.

## ಕೋಷ್ಟಕ-೨.೩

### ಉತ್ತರ ಕನ್ನಡ ಜಿಲ್ಲೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆ (೨೦೦೧ ರ ಜನಗಣತಿ)

| ಕ್ರ.ಸಂ. | ತಾಲೂಕು | ಪರಿಶಿಷ್ಟ ಜಾತಿ | | | | | | ಪರಿಶಿಷ್ಟ ಪಂಗಡ | | | | | |
|---|---|---|---|---|---|---|---|---|---|---|---|---|---|
| | | ಗ್ರಾಮೀಣ | | | ಪಟ್ಟಣ | | | ಗ್ರಾಮೀಣ | | | ಪಟ್ಟಣ | | |
| | | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| ೧ | ಅಂಕೋಲಾ | ೪೫೮೫ | ೨೨೮೦ | ೨೩೦೫ | ೩೫೩೪ | ೧೭೩೮ | ೧೭೯೬ | ೧೧೩ | ೭೦ | ೪೩ | ೧೫೨ | ೭೩ | ೭೯ |
| ೨ | ಭಟ್ಕಳ | ೧೨೪೫೨ | ೬೧೫೬ | ೬೨೯೬ | ೬೦೬ | ೨೭೩ | ೩೩೩ | ೭೯೩೬ | ೩೯೬೮ | ೩೯೬೮ | ೫೫೧ | ೨೭೬ | ೨೭೫ |
| ೩ | ಹಳಿಯಾಳ | ೪೯೧೭ | ೨೪೭೭ | ೨೪೪೦ | ೭೮೪೮ | ೩೯೪೮ | ೩೯೦೦ | ೧೩೯೪ | ೭೦೬ | ೬೮೮ | ೧೭೧೦ | ೮೪೦ | ೮೭೦ |
| ೪ | ಹೊನ್ನಾವರ | ೬೭೩೭ | ೩೪೦೫ | ೩೩೩೨ | ೫೧೩ | ೨೯೦ | ೨೭೩ | ೨೩೪ | ೧೧೩ | ೧೨೧ | ೩೪ | ೧೭ | ೧೭ |
| ೫ | ಕಾರವಾರ | ೨೮೮೪ | ೧೪೬೮ | ೧೪೧೬ | ೨೮೮೧ | ೧೫೨೩ | ೧೩೫೮ | ೨೯೦೬ | ೧೩೬೫ | ೧೫೪೧ | ೧೦೫೪ | ೫೪೮ | ೫೦೬ |
| ೬ | ಕುಮಟಾ | ೬೭೪೫ | ೩೩೯೨ | ೩೩೫೩ | ೨೦೨೧ | ೯೮೭ | ೧೦೩೪ | ೪೧ | ೨೨ | ೧೯ | ೩೪ | ೨೨ | ೧೨ |
| ೭ | ಮುಂಡಗೋಡ | ೧೦೬೯೫ | ೫೪೮೯ | ೫೨೦೬ | ೨೯೦೬ | ೧೪೩೬ | ೧೪೭೦ | ೩೨೮೬ | ೧೬೯೫ | ೧೫೯೧ | ೩೧೫ | ೧೭೪ | ೧೪೧ |
| ೮ | ಸಿದ್ದಾಪುರ | ೫೫೭೩ | ೨೮೦೮ | ೨೭೬೫ | ೭೨೭ | ೩೫೨ | ೩೭೫ | ೭೯೧ | ೩೯೭ | ೩೯೪ | ೭೧ | ೩೩ | ೩೮ |
| ೯ | ಶಿರಸಿ | ೧೦೪೬೩ | ೫೩೩೧ | ೫೧೩೨ | ೮೪೮೩ | ೪೩೦೩ | ೪೧೮೦ | ೯೭೭ | ೫೨೧ | ೪೫೬ | ೭೩೦ | ೩೭೭ | ೩೫೩ |
| ೧೦ | ಸೂಪಾ | ೩೧೨೭ | ೧೫೮೪ | ೧೫೪೩ | ೦ | ೦ | ೦ | ೮೧೩ | ೪೧೭ | ೩೯೬ | ೦ | ೦ | ೦ |
| ೧೧ | ಯಲ್ಲಾಪುರ | ೨೫೫೮ | ೧೨೮೬ | ೧೨೭೨ | ೧೬೪೧ | ೮೩೩ | ೮೦೮ | ೪೯೪ | ೨೬೮ | ೨೨೬ | ೧೪೫ | ೭೬ | ೬೯ |
| | ಒಟ್ಟು | ೭೦೭೩೬ | ೩೫೬೭೬ | ೩೫೦೬೦ | ೩೧೧೬೦ | ೧೫೬೩೩ | ೧೫೫೨೭ | ೧೮೯೮೫ | ೯೫೪೨ | ೯೪೪೩ | ೪೭೯೬ | ೨೪೩೬ | ೨೩೬೦ |

ಆಧಾರ: ಉತ್ತರ ಕನ್ನಡ ಜಿಲ್ಲೆಯ ಅಂಕಿ-ಅಂಶಗಳ ನೋಟ, ೨೦೦೮-೦೯, ಸಿರೀಸ್-೩೦ ಮತ್ತು ಭಾರತ ಜನಗಣತಿ, ೨೦೦೧.

**ಭೌಗೋಳಿಕ ಲಕ್ಷಣಗಳು**

ಜಿಲ್ಲೆಯ ಮಣ್ಣುಗಳಲ್ಲಿ ವಿವಿಧ ರೀತಿಯ ಮಣ್ಣುಗಳನ್ನು ಗುರುತಿಸಲಾಗಿದೆ.

ವಿವಿಧ ನೈಸರ್ಗಿಕ ಸಂಪನ್ಮೂಲಗಳಲ್ಲಿ ಮಣ್ಣು ಪ್ರಮುಖವಾದದ್ದು, ಏಕೆಂದರೆ ಜಿಲ್ಲೆಯ ಜನಸಂಖ್ಯೆಯಲ್ಲಿ ಹೆಚ್ಚಿನ ಜನರು ತಮ್ಮ ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಭಿಸಿರುವರು. ಕೃಷಿ ಅಭಿವೃದ್ಧಿಯಲ್ಲಿ ಮಣ್ಣು ರಚನೆ, ಬಣ್ಣ, ಉತ್ಪಾದನಾ ಸಾಮರ್ಥ್ಯ ಇದ್ದರೆ ಮಾತ್ರ ಉತ್ತಮ ಬೆಳೆ ಬೆಳೆಯಲು ಸಾಧ್ಯ. ಕೆಲವು ಬಗೆಯ ಮಣ್ಣುಗಳು ಉತ್ತಮವಾಗಿರುವುದಿಲ್ಲ ಅಂತಹವುಗಳಲ್ಲಿನ ಕೊರತೆಗಳನ್ನು ಗಮನಿಸಿ ರಸಗೊಬ್ಬರ ಅಥವಾ ನೈಸರ್ಗಿಕ ಗೊಬ್ಬರಗಳನ್ನು ಸೇರಿಸಿ ಫಲವತ್ತತೆಯನ್ನು ಹೆಚ್ಚಿಸಬಹುದಾಗಿದೆ.

ಈ ಮಣ್ಣುಗಳನ್ನು ಪ್ರಮುಖವಾಗಿ ನಾಲ್ಕು ಪ್ರಕಾರಗಳಾಗಿ ವಿಂಗಡಿಸಬಹುದಾಗಿದೆ.

೧. ಕೆಂಪು ಮಣ್ಣು ೨. ಕಪ್ಪು ಮಣ್ಣು ೩. ಮೆಕ್ಕಲು ಮಣ್ಣು ೪. ಜಂಬಿಟ್ಟಿಗೆ ಮಣ್ಣು

ಕುಣಬಿಗಳು ಸಹ ಗುಮ್ಮಟೆ, ತಮಟೆ, ವಾದ್ಯಗಳನ್ನು ತಯಾರಿಸಲು 'ಆವೆಮಣ್ಣು' ಕಪ್ಪುಮಣ್ಣು, ಜೇಡಿಮಣ್ಣನ್ನು ಬಳಸುತ್ತಾರೆ.

**ವಾಯುಗುಣ**

ಉತ್ತರ ಕನ್ನಡವು ಉಷ್ಣ ವಲಯದ ಮಾನ್ಸೂನ್ ವಾಯುಗುಣವನ್ನೊಳಗೊಂಡಿದೆ. ಶಾಖ ಮತ್ತು ತೇವಾಂಶವುಳ್ಳ ಬೇಸಿಗೆ ಮತ್ತು ತಂಪಾದ ಚಳಿಗಾಲವು ಈ ವಾಯುಗುಣದ ಮುಖ್ಯ ಲಕ್ಷಣಗಳು. ಆದರೆ ಈ ವಾಯುಗುಣವು ವೈವಿದ್ಯಪೂರ್ಣವಾದದು. ಅದಕ್ಕೆ ಅಕ್ಷಾಂಶ, ಸಮುದ್ರ ಮಟ್ಟದಿಂದ ಎತ್ತರ, ಸಮುದ್ರದಿಂದ ಸಮೀಪ, ಸ್ಥಳೀಯ ಮಾರುತಗಳು, ಸಸ್ಯವರ್ಗ, ಭೂ ಸ್ವರೂಪಗಳು ಮುಂತಾದವು ಕಾರಣವಾಗಿವೆ. ಕರಾವಳಿ ಪ್ರದೇಶ, ಮಲೆನಾಡು ಮತ್ತು ಪಶ್ಚಿಮ ಘಟ್ಟಗಳ ಸರಣಿಗಳಲ್ಲಿ ಅಧಿಕ ಮಳೆಯಾಗುತ್ತದೆ. ತೀರ ಪ್ರದೇಶದಲ್ಲಿ ಸಮುದ್ರ ಪ್ರಭಾವದಿಂದ ಬೇಸಿಗೆ ಮತ್ತು ಚಳಿಗಾಲದ ಉಷ್ಣಾಂಶ ಸಮನಾಗಿರುತ್ತದೆ. ಸಮುದ್ರದ ಮಂದ ಮಾರುತಗಳು ಉಷ್ಣತೆಯನ್ನುಂಟು ಮಾಡುತ್ತವೆ. ಅರಬ್ಬೀ ಸಮುದ್ರಕ್ಕೆ ಹೊಂದಿಕೊಂಡಿರುವ ಕರಾವಳಿಯಲ್ಲಿ ಹೆಚ್ಚು ಮಳೆ ಬೀಳುವದರಿಂದ ಮಳೆಯ ಹಂಚಿಕೆಯಲ್ಲಿ ವ್ಯತ್ಯಾಸವುಂಟಾಗುತ್ತದೆ. ಕುಣಬಿಗಳು ವಾಸಿಸುವಂಥ ಅರಣ್ಯ ಪ್ರದೇಶದಲ್ಲಿ ಚಳಿಯ ವಾತಾವರಣ ಹೆಚ್ಚಾಗಿರುತ್ತದೆ.

ಜಿಲ್ಲೆಯ ಹವಾಮಾನವು ಸಮಶೀತೋಷ್ಣವಾಗಿದೆ. ಸಮುದ್ರ ತೀರದಲ್ಲಿ ಆರ್ದತೆ ಮತ್ತು ಉಷ್ಣತೆ ಇರುತ್ತಿದ್ದು ಬೇಸಿಗೆಯಲ್ಲಿ ಅತಿ ಹೆಚ್ಚು ೩೩ ಸೆಂ. ಮತ್ತು ಚಳಿಗಾಲದಲ್ಲಿ ಅತೀ ಕಡಿಮೆ ೨೦ ಸೆಂ. ಉಷ್ಣತೆ ಇರುತ್ತದೆ.

ಕರ್ನಾಟಕದಲ್ಲಿ ಅನೇಕ ನದಿಗಳು ಪಶ್ಚಿಮಕ್ಕೆ ಹರಿಯುತ್ತವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಶರಾವತಿ, ಕಾಳಿ, ಗಂಗಾವಳಿ (ಬೇಡ್ತಿ), ಅಘನಾಶಿನಿ, ನೇತ್ರಾವತಿ, ಮುಖ್ಯವಾದ ನದಿಗಳು. ಇವು ಪಶ್ಚಿಮ ಘಟ್ಟಗಳಲ್ಲಿ ಉಗಮ ಹೊಂದಿ ಪಶ್ಚಿಮಾಭಿಮುಖವಾಗಿ ಹರಿದು ಅರಬ್ಬೀ ಸಮುದ್ರವನ್ನು ಸೇರುತ್ತವೆ. ವೆಂಕಟಪೂರ ಮತ್ತು ವರದಾ ಇವು ಚಿಕ್ಕ ನದಿಗಳಾಗಿದ್ದು, ಕಡಿದಾದ ಇಳಿಜಾರುಳ್ಳ ಬೆಟ್ಟ ಗುಡ್ಡಗಳ ನಡುವೆ ವೇಗವಾಗಿ ಹರಿಯುತ್ತವೆ. ಮಳೆಗಾಲದಲ್ಲಿ ತುಂಬಾ ಪ್ರವಾಹದಿಂದ ಹರಿಯುವವು. ಇವುಗಳಲ್ಲಿ ಬಹಳಷ್ಟು ವಿದ್ಯುತ್ ಶಕ್ತಿ ತಯಾರಿಕೆಗೆ ನೆರವಾಗುವವು.

**ಅರಣ್ಯ**

ಕರ್ನಾಟಕದ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ (೧೯೦.೫ ಲಕ್ಷ ಹೆ.) ಶೇ. ೧೬ ರಷ್ಟು ಮಾತ್ರ ಅರಣ್ಯಗಳಿಂದಾವೃತವಾಗಿದೆ. ಇದು ಭಾರತದ ಸರಾಸರಿಗಿಂತಲೂ (೨೨.೦೭%) ಕಡಿಮೆ. ರಾಷ್ಟ್ರೀಯ ಅರಣ್ಯ ನೀತಿಯಲ್ಲಿ ಗೊತ್ತುಪಡಿಸಿರುವಂತೆ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಶೇ. ೩೩.೩ ರಷ್ಟು ಅರಣ್ಯಗಳಿಂದ ಆವೃತ್ತವಾಗಿರಬೇಕೆಂದು ತಿಳಿಸಲಾಗಿದೆ.

ಕರ್ನಾಟಕದಲ್ಲಿ ೧೯,೦೪೯,೮೩೬ ಹೆಕ್ಟೇರು ಪ್ರದೇಶವು ಅರಣ್ಯಗಳಿಂದ ಕೂಡಿದೆ. ಜಿಲ್ಲಾವಾರು ಅರಣ್ಯದ ಹಂಚಿಕೆಯನ್ನು ಅವಲೋಕಿಸಿದಾಗ ಅದು ಒಂದೇ ರೀತಿಯಲ್ಲಿ ಇಲ್ಲವಾದ್ದರಿಂದ ಜಿಲ್ಲೆಯಿಂದ ಜಿಲ್ಲೆಗೆ ವ್ಯತ್ಯಾಸ ಕಂಡು ಬರುವದು. ಅಂದರೆ ಆ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣದಲ್ಲಿ ಶೇ. ೮೦ ರಷ್ಟು ಅರಣ್ಯಗಳಿಂದಾವೃತವಾಗಿದೆ. ರಾಜ್ಯದ ಒಟ್ಟು ಅರಣ್ಯ ಕ್ಷೇತ್ರದಲ್ಲಿ ಶೇ. ೨೭ ರಷ್ಟನ್ನು ಹೊಂದಿದ್ದು ಪ್ರಥಮ ಸ್ಥಾನದಲ್ಲಿದೆ. ಜಿಲ್ಲೆಗಳ ಒಟ್ಟು ವಿಸ್ತೀರ್ಣಕ್ಕೆ ಪ್ರತಿಯಾಗಿ ಹೆಚ್ಚು ಅರಣ್ಯ ಕ್ಷೇತ್ರವನ್ನು ಹೊಂದಿರುವ ಜಿಲ್ಲೆ ಉತ್ತರ ಕನ್ನಡ ಅರಣ್ಯ ಕ್ಷೇತ್ರವನ್ನು ಹೆಚ್ಚಿಗೆ ಹೊಂದಿರುವುದರಲ್ಲಿಯೂ ಉತ್ತರ ಕನ್ನಡ ಜಿಲ್ಲೆಯೇ (೦.೮೪ ಹೆ.) ಪ್ರಥಮ ಸ್ಥಾನದಲ್ಲಿದೆ. ಅಧಿಕ ಮಳೆ, ಬೆಟ್ಟ ಗುಡ್ಡಗಳ ಲಕ್ಷಣಗಳಿಂದಾಗಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಅರಣ್ಯ ಪ್ರದೇಶವು ವ್ಯಾಪಕವಾಗಿ ಕಂಡು ಬರುತ್ತದೆ. ಇಂಥ ಅರಣ್ಯ ಪ್ರದೇಶಗಳು ಬುಡಕಟ್ಟುಗಳ ನಿಜವಾದ ತಾಣಗಳಾಗುತ್ತವೆ. ಅಲ್ಲಿನ ನಿಸರ್ಗ ಸಂಪತ್ತು ಮತ್ತು ನಾಗರಿಕ ಪ್ರಪಂಚದಿಂದ ದೂರವಿರಲು ಅವರು ಹೆಚ್ಚಾಗಿ ಇಲ್ಲಿ ನೆಲೆ ನಿಲ್ಲುತ್ತಾರೆ.

ಅರಣ್ಯಗಳನ್ನು ನಾಲ್ಕು ಪ್ರಕಾರದಲ್ಲಿ ವರ್ಗೀಕರಣ ಮಾಡಬಹುದು.

೧. ಕಾಯ್ದಿರಿಸಿದ ಅರಣ್ಯಗಳು (Reserved Forests)

೨. ಸಂರಕ್ಷಿತ ಅರಣ್ಯಗಳು (Protected Forests)

೩. ಗ್ರಾಮೀಣ ಅರಣ್ಯಗಳು (Rural Forests)

೪. ಖಾಸಗಿ ಅರಣ್ಯಗಳು (Private Forests)

ರಾಜ್ಯದ ಒಟ್ಟು ಅರಣ್ಯ ಕ್ಷೇತ್ರದಲ್ಲಿ ಶೇ. ೭೩ ಭಾಗ ಕಾಯ್ದಿರಿಸಿದೆ, ಶೇ. ೧೦.೩ ಭಾಗ ಸಂರಕ್ಷಿತ, ಶೇ. ೧೪.೫ ಭಾಗ ವರ್ಗೀಕರಿಸಿದ ಹಾಗೂ ೦.೮ ಭಾಗ ಖಾಸಗಿ ಅರಣ್ಯಗಳು ಹಂಚಿಕೆಯಾಗಿವೆ. ಅರಣ್ಯ ವಸ್ತುಗಳು ಕರ್ನಾಟಕದ ಅರಣ್ಯ ಸಂಪತ್ತು (Forest Products) ಭಾರತದಲ್ಲಿಯೇ ವೈವಿಧ್ಯಪೂರ್ಣವೂ ಮತ್ತು ಅಮೂಲ್ಯವಾದುದು ಆಗಿರುತ್ತದೆ.

**೨.೨ ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಸ್ಥೂಲ ಪರಿಚಯ**

ಭಾರತದಲ್ಲಿರುವ ೨೫೮ ಬುಡಕಟ್ಟುಗಳಲ್ಲಿ ಕರ್ನಾಟಕದಲ್ಲಿ ೫೦ ಬುಡಕಟ್ಟುಗಳು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿವೆ. ಈ ೫೦ ಬುಡಕಟ್ಟುಗಳು ತಮ್ಮದೇ ಆದ ಆಚಾರ-ವಿಚಾರ ರೂಢಿ, ಸಂಪ್ರದಾಯ, ನಿರ್ದಿಷ್ಟ ವಾಸಸ್ಥಾನ, ಕುಲ, ಕಸುಬು, ನ್ಯಾಯ ಪದ್ಧತಿ, ಭಾಷೆ, ವೇಷ-ಭೂಷಣಗಳನ್ನು ಹೊಂದಿ ಬಾಳುತ್ತವೆ. ಈ ಬುಡಕಟ್ಟು ಸಮುದಾಯಗಳಲ್ಲಿ ಹಲವು ಅಲೆಮಾರಿ ಸಮುದಾಯ, ಅರೆ ಅಲೆಮಾರಿ ಸಮುದಾಯ, ಶಾಶ್ವತನೆಲೆ ಹೊಂದಿದ ಸಮುದಾಯಗಳಿವೆ.

**ಉತ್ತರ ಕನ್ನಡ ಜಿಲ್ಲೆಯ ಆದಿವಾಸಿಗಳಾಗದ ಆದಿವಾಸಿಗಳು**

ಉತ್ತರ ಕನ್ನಡ ಜಿಲ್ಲೆಯ ಇತಿಹಾಸ, ಭೂಗೋಲ, ಸಂಸ್ಕೃತಿ, ಜನಜೀವನ, ಸಂಪ್ರದಾಯ, ಧಾರ್ಮಿಕ ಜೀವನಗಳಲ್ಲಿ ಅಪಾರ ವೈವಿಧ್ಯಗಳಿರುವದರಿಂದ ಒಂದೇ ಅಳತೆಗೆ ಸಿಗುವಂತಹವಲ್ಲ. ಇತಿಹಾಸ ಪೂರ್ವಕಾಲದಿಂದಲೂ ವಿದೇಶಗಳೊಂದಿಗೆ ವ್ಯಾಪಾರದಲ್ಲಿ ತೊಡಗಿದ ಹೊನ್ನಾವರದಂತಹ ಬಂದರುಗಳಿದ್ದಂತೆ, ರಾಮನಗರ, ಅಂಬಿಕಾ ನಗರಗಳಂಥ ಹೊಚ್ಚ ಹೊಸ ಊರುಗಳು ಸಮಾವೇಶವಾಗಿವೆ. ಸದಾಕಾಲ ನೀರಿನ ಪೂರೈಕೆಯಿಂದ ಸಮೃದ್ಧವಾಗಿರುವ ಕರಾವಳಿ ಇದ್ದಂತೆ. ಪ್ರತಿ ವರ್ಷವೂ ನೀರಿನ ಅಭಾವವನ್ನು ಎದುರಿಸಬೇಕಾದ ಘಟ್ಟದ ಮೇಲಿನ ಊರುಗಳಿವೆ. ವರ್ಷವಿಡೀ ಸಮಶೀತೋಷ್ಣ ಹವೆಯುಳ್ಳ ಭಟ್ಕಳ, ಹೊನ್ನಾವರ, ಕುಮಟಾ, ಅಂಕೋಲಾ, ಕಾರವಾರ ತಾಲೂಕುಗಳಿದ್ದರೆ; ಸಿರ್ಸಿ, ಸಿದ್ದಾಪುರ, ದಾಂಡೇಲಿ, ಜೋಯಿಡಾ ತಾಲೂಕುಗಳಲ್ಲಿ ದೊಡ್ಡ ಕಂಬಳಿಗಳೂ ಕಡಿಮೆ ಎನಿಸುವಷ್ಟು ಚಳಿ. ಶ್ವೇತವರ್ಣೀಯರೆಂದೆನಿಸಿಕೊಳ್ಳಬಹುದಾದ ನವಾಯತರು, ಮಂಗೋಲ ವಂಶಜರಾದ ಟಿಬೇಟಿಯನ್ನರು, ನಿಗ್ರೋ ವಂಶಜರಾದ ಸಿದ್ಧಿಗಳು, ಇಲ್ಲಿ ಒಂದಾಗಿ ಬಾಳುತ್ತಿದ್ದಾರೆ. ಬಿದಿರು ಬತ್ತದ ಗಂಜಿಯಷ್ಟೇ ತಮ್ಮ ಗತಿಯೆಂದುಕೊಳ್ಳುವಷ್ಟು ಬಡವರಿದ್ದರೆ ತುಪ್ಪ ಬಸಿಯುವ ಕೇಸರಿಭಾತು ತಿಂದು ತೇಗುವವರೂ ಇದ್ದಾರೆ. ಈರುಳ್ಳಿ, ಬೆಳ್ಳುಳ್ಳಿ, ತಿನ್ನದೆ ಇರುವವರಿಂದ ಹಿಡಿದು ಮತ್ಸ್ಯಾಹಾರಿ ಬ್ರಾಹ್ಮಣರೂ ಇದ್ದಾರೆ.

ಆದರೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಇನ್ನೂ ಸಾಕಷ್ಟು ಸಮುದಾಯಗಳು ಶತಮಾನಗಳಿಂದ ಇಂದಿನವರೆಗೂ ತಮ್ಮ ಚಹರೆಗಳನ್ನು, ಕುಲಕಸುಬನ್ನು, ಆಚಾರ-ವಿಚಾರ, ಭಾಷೆ, ರೂಢಿ

ಸಂಪ್ರದಾಯಗಳನ್ನು, ಪ್ರತ್ಯೇಕತೆಯನ್ನು ಉಳಿಸಿಕೊಂಡು, ಆದಿವಾಸಿಗಳ ಎಲ್ಲಾ ಲಕ್ಷಣಗಳನ್ನು ಹೊಂದಿದ್ದರು. ಸರಕಾರ ಇವರನ್ನು ಇಂದಿನವರೆಗೂ ಪರಿಶಿಷ್ಟ ಪಂಗಡಕ್ಕೆ ಸೇರಿಸದೆ ಪ್ರವರ್ಗ–೧ರಲ್ಲಿ ಇಟ್ಟಿದೆ. ಆದರೆ ಆದಿವಾಸಿಗಳ ಎಲ್ಲಾ ಲಕ್ಷಣಗಳನ್ನು ಹೊಂದಿ ಇಂದಿಗೂ ಕಾಡಿನಲ್ಲಿ ನಾಗರಿಕ ಸಮಾಜದಿಂದ ಪ್ರತ್ಯೇಕ ವಾಸಸ್ಥಾನದೊಂದಿಗೆ ಬಾಳುತ್ತಿದೆ. ಸರಕಾರದ ಯಾವುದೇ ಸೌಲಭ್ಯಗಳು ದೊರೆಯದೆ ಅತಂತ್ರ ಸ್ಥಿತಿಯಲ್ಲಿವೆ. ಅಂತಹ ಆದಿವಾಸಿಗಳಲ್ಲಿ

೧. ಹಾಲಕ್ಕಿ ಒಕ್ಕಲಿಗರು

೨. ಗೊಂಡರು

೩. ಮುಕ್ರಿಗಳು

೪. ಅಗೇರರು

೫. ಕುಣಬಿ ಅಥವಾ ಕುಡುಬಿ ಸಮುದಾಯ

ಮುಂತಾದ ಬುಡಕಟ್ಟು ಪಟ್ಟಿಗೆ ಸೇರದ ಸಮುದಾಯಗಳಾಗಿವೆ.

**ಆದಿವಾಸಿಗಳು**

ಈ ಜಿಲ್ಲೆಯಲ್ಲಿರುವ ಪ್ರಮುಖ ಆದಿವಾಸಿ ಸಮುದಾಯಗಳೆಂದರೆ–ಸಿದ್ದಿಗಳು, ಕುಣಬಿಗಳು, ಹಾಲಕ್ಕಿ ಒಕ್ಕಲಿಗರು, ಗೊಂಡಾ, ಗೌಳಿಗರು, ಕರೆಒಕ್ಕಲು, ಮುಕರಿ ಮತ್ತು ಅಗೇರ.

**ಸಿದ್ದಿಗಳು :** ೪೦೦ ವರ್ಷಗಳ ಹಿಂದೆ ಪೋರ್ಚುಗೀಸರು ಭಾರತಕ್ಕೆ ಬಂದಾಗ ಆಫ್ರಿಕಾದಿಂದ ಕೆಲವು ಗುಲಾಮರನ್ನು ತಂದಿದ್ದರಂತೆ. ಅವರೇ ಈ ಸಿದ್ದಿಗಳು ಎಂದು ಹೇಳಲಾಗುತ್ತದೆ. ಸಿದ್ದಿಗಳ ಜನಸಂಖ್ಯೆ ಈಗ ೧೦,೦೦೦ ರಷ್ಟಿದೆಯಂತೆ. ಇವರು ಹೆಚ್ಚಾಗಿ ಹಳ್ಯಾಳ, ಯಲ್ಲಾಪುರ, ಅಂಕೋಲಾ ತಾಲೂಕುಗಳಲ್ಲಿ ಸಿಗುತ್ತಾರೆ. ಈಗ ಅವರೆಲ್ಲ ಭಾರತೀಯ ಸಂಸ್ಕೃತಿ ಮತ್ತು ಹಿಂದು ಧರ್ಮವನ್ನು ಸೇರಿದ್ದಾರೆ. ಅವರಲ್ಲಿ ಕೆಲವರು ಮಾತ್ರ ಮುಸ್ಲಿಂ ಮತ್ತು ಕ್ರಿಶ್ಚಿಯನ್ನರಿದ್ದಾರೆ. ಅವರು ಬಹುತೇಕ ಬಹಳ ಬಡವರಿದ್ದಾರೆ, ಹಿಂದುಳಿದಿದ್ದಾರೆ. ಹವ್ಯಕ್ ಬ್ರಾಹ್ಮಿಗರ ಹೊಲಗದ್ದೆಗಳಲ್ಲಿ ಕೃಷಿ ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ.

**ಹಾಲಕ್ಕಿ ಒಕ್ಕಲಿಗರು :** ಉತ್ತರ ಕನ್ನಡ ಜಿಲ್ಲೆಯ ಪಶ್ಚಿಮ ಘಟ್ಟಗಳ ಕೆಳ ಸ್ಥಳಗಳಲ್ಲಿ ಹಾಲಕ್ಕಿ ಒಕ್ಕಲಿಗರು ಇದ್ದಾರೆ. ಇವರನ್ನು ಮೂಲ ನಿವಾಸಿಗಳೆಂದು ಕರೆಯಲಾಗಿದೆ. ಅವರು ಹಿಂದುಳಿದಿರುವಿಕೆ ಮತ್ತು ವಿಭಿನ್ನತೆಯಲ್ಲಿ ವಿಶೇಷವಿದೆ. ತಮ್ಮದೇ ಆದ ಆಡಳಿತ ವ್ಯವಸ್ಥೆ ಇದೆ. ಮುಖ್ಯಸ್ಥನನ್ನು ಗೌಡ ಎಂದು ಕರೆಯುತ್ತಾರೆ. ಅವರ ಜೀವನ ರೀತಿ ಬಹಳ ಪ್ರಾಚೀನದ್ದು, ಪುರುಷರು ಮನೆಯಲ್ಲಿ ಬತ್ತಲೆ ಇರುತ್ತಾರೆ, ಸ್ತ್ರೀಯರು ಕೆಲವು ಆಭರಣಗಳಿಂದ ಅಲಂಕೃತಗೊಂಡಿರುತ್ತಾರೆ. ದೊಡ್ಡ ಮೂಗುನತ್ತು ಇವರ ವಿಶೇಷ ಆಭರಣ.

**ಗೌಳಿಗರು :** ಮಹಾರಾಷ್ಟ್ರದಿಂದ ವಲಸೆ ಬಂದ ಅಲೆಮಾರಿಗಳು. ಅವರು ಹೆಚ್ಚಾಗಿ ಹಸು ಮತ್ತು ಆಡುಗಳನ್ನು ಸಾಕುತ್ತಾರೆ. ಅರಣ್ಯದಲ್ಲಿ ದೊರೆಯುವ ವಸ್ತುಗಳನ್ನೇ ತಂದು ಬದುಕುತ್ತಾರೆ. ಇತ್ತೀಚೆಗೆ ಕೆಲವರು ಕೃಷಿ ಪ್ರಾರಂಭಿಸಿದ್ದಾರೆ.

**ಕುಣಬಿಗಳು :** ಪೋರ್ಚುಗೀಸರ ದಬ್ಬಾಳಿಕೆಯಿಂದ ೧೬ನೇ ಶತಮಾನದಲ್ಲಿ ಗೋವಾದಿಂದ ವಲಸೆ ಸಮುದಾಯವೇ ಕುಣಬಿಯರು. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಸಮುದಾಯಗಳಲ್ಲಿ ಕುಣಬಿಗಳು ಅತ್ಯಂತ ಹಿಂದುಳಿದವರು. ಚಿಕ್ಕ ಗುಂಪುಗಳಲ್ಲಿ ವಾಸಿಸುವ ಇವರು ಅಡವಿ ಮಧ್ಯದಲ್ಲಿ ಡಂಬು/ಬಿದಿರುಗಳಿಂದ ಮಾಡಿದ ಮನೆಗಳಲ್ಲಿ ವಾಸಿಸುತ್ತಾರೆ. ವೈದ್ಯಕೀಯ ಸೇವೆ ದುರ್ಲಭ, ಮರಣ ಪ್ರಮಾಣ ಹೆಚ್ಚು. ಕುಣಬಿಗಳ ಜನಸಂಖ್ಯೆ ಈಗ ೧೧,೭೯೪ ದಷ್ಟಿದೆ.

**ಗೊಂಡರು :** ಭಟ್ಕಳ ತಾಲೂಕಿನಲ್ಲಿ ಸಾಮಾನ್ಯವಾಗಿ ಸಿಗುತ್ತಾರೆ. ಆದಿವಾಸಿ ಶ್ರೀಮಂತ ಜಾನಪದ ನೃತ್ಯ ಕಲೆ ಇವರಲ್ಲಿದೆ.

**ಕರೆ ಒಕ್ಕಲು:** ಉತ್ತರ ಕನ್ನಡ ಜಿಲ್ಲೆಯ ಕಾರವಾರ, ಅಂಕೋಲಾ, ಕುಮಟಾ, ಶಿರಶಿ, ಸಿದ್ದಾಪೂರ ಗುಡ್ಡಗಾಡು ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಇವರು ವರ್ಣದಲ್ಲಿ ಕಪ್ಪಾದ್ದರಿಂದ ಇವರನ್ನು ಕರೆಒಕ್ಕಲೆಂದು ಹೇಳುತ್ತಾರೆ. 'ಕರೆ' ಎಂಬ ಶಬ್ದಕ್ಕೆ ಅಂಚ್ಚು ಎಂಬ ಅರ್ಥ ಇದೆ. ಇವರು ಗುಡ್ಡುಗಳ ಅಂಚು (ಕರೆ)ಗಳಲ್ಲಿ ನೆಲೆಸಿರುವ ಕಾರಣದಿಂದ ಇವರಿಗೆ ಕರೆ ಒಕ್ಕಲು ಎಂದು ಹೆಸರು ಬಂದಿದೆ. ಶಿಕ್ಷಣ ಪ್ರಸಾರ ಕಡಿಮೆ ಇರುವ, ವಾಹನ ಸೌಕರ್ಯಗಳಿಲ್ಲದ ದಟ್ಟ ಕಾಡುಗಳಲ್ಲಿ ವಾಸಿಸುತ್ತಾರೆ.

**ಮುಕರಿ:** ಉತ್ತರ ಕನ್ನಡ ಜಿಲ್ಲೆಯ ಕುಮಟಾ, ಹೊನ್ನಾವರ, ಶಿರಸಿ ತಾಲೂಕುಗಳಲ್ಲಿ ವಾಸಿಸುತ್ತಿರುವ ಮುಕರಿಗಳು ಆರ್ಥಿಕವಾಗಿ ತುಂಬಾ ಹಿಂದುಳಿದ ಸಮುದಾಯವಾಗಿದೆ. ಹಾಲಕ್ಕಿ ಗೌಡರ ಸಮುದಾಯದ ಒಂದು ಗುಂಪಿನವರು ಎಂದು ಹೇಳಲಾಗುತ್ತದೆ. ಜಮೀನಿಲ್ಲದಿರುವವರೆ ಹೆಚ್ಚಿನ ಸಂಖ್ಯೆಯಲ್ಲಿರುವದರಿಂದ ಕೂಲಿಯೇ ಇವರ ಪ್ರಮುಖ ವೃತ್ತಿ. ಜೊತೆಗೆ ಸಣ್ಣಪುಟ್ಟ ವ್ಯಾಪಾರ, ಕೃಷಿ ಕೂಲಿ, ಕಟ್ಟಡ ಕಟ್ಟುವ ಕೆಲಸದಲ್ಲಿ ತೊಡಗಿದ್ದಾರೆ. ಸಾಮಾಜಿಕವಾಗಿ ಆರ್ಥಿಕವಾಗಿ, ಶೈಕ್ಷಣಿಕವಾಗಿ ತುಂಬಾ ಹಿಂದುಳಿದ ಸಮುದಾಯ ಇದಾಗಿದೆ.

**ಅಗೇರ:** ಅಗೇರರು ಉತ್ತರ ಕನ್ನಡ ಜಿಲ್ಲೆಯ ಕರಾವಳಿಯಲ್ಲಿ ವಾಸಿಸುತ್ತಿದ್ದಾರೆ. ಕುಮಟಾ, ಅಂಕೋಲ, ಕಾರವಾರ ತಾಲೂಕುಗಳಲ್ಲಿ ಹೆಚ್ಚಾಗಿದ್ದಾರೆ. ಉಪ್ಪು ತಯಾರಿಸುವದು ಇವರ ಪಾರಂಪರಿಕ ಕೆಲಸವಾಗಿದೆ. ಗುಜರಾತ, ಮಹಾರಾಷ್ಟ್ರದಲ್ಲಿ ಅಗೇರರನ್ನು ಹಿಂದುಳಿದ ಸಮುದಾಯವನ್ನಾಗಿ ಪರಿಗಣಿಸಲಾಗಿದೆ. ಇತ್ತೀಚೆಗೆ ಕೃಷಿ ಕೂಲಿ ಗೇಣಿದಾರರಾಗಿ ದುಡಿಯುತ್ತಿದ್ದಾರೆ.

## ೨.೩ ಅಧ್ಯಯನಕ್ಕೆ ಆಯ್ದುಕೊಂಡ ತಾಲೂಕುಗಳ ಭೌಗೋಳಿಕ ವಿವರಗಳು

**ಅಂಕೋಲಾ :** ಉತ್ತರ ಕನ್ನಡ ಜಿಲ್ಲೆಯ ಕರಾವಳಿ ಭಾಗದ ಒಂದು ತಾಲೂಕು ಮತ್ತು ಆಡಳಿತ ಕೇಂದ್ರ. ಪಶ್ಚಿಮದಲ್ಲಿ ಅರಬ್ಬೀ ಸಮುದ್ರ, ಪೂರ್ವದಲ್ಲಿ ಶಿರಸಿ, ದಕ್ಷಿಣದಲ್ಲಿ ಕುಮಟಾ, ಉತ್ತರದಲ್ಲಿ ಕಾರವಾರ ಮತ್ತು ಯಲ್ಲಾಪುರ ತಾಲೂಕುಗಳು ಈ ತಾಲೂಕನ್ನು ಸುತ್ತುವರೆದಿವೆ. ಬೇಲೇಕೇರಿ, ಬಾಳಲೆ ಮತ್ತು ಭಾಸಗೋಡ ಇದರ ಹೋಬಳಿಗಳು. ವಿಸ್ತೀರ್ಣ ೯೭೧ ಚ.ಕಿ.ಮೀ. ಹಾಗೂ ಜನಸಂಖ್ಯೆ ಪ್ರಮಾಣ ೧,೦೧,೫೪೦.

ತಾಲೂಕಿನ ತೀರಪ್ರದೇಶ ಮರಳುಭೂಮಿ, ಉಳಿದ ಭೂ-ಭಾಗ ಕೆಂಪು ಜಂಬುಮಣ್ಣಿನಿಂದ ಕೂಡಿದೆ. ಮಳೆ ಹೆಚ್ಚು, ವಾರ್ಷಿಕ ಸರಾಸರಿ ೩.೪೦೫ ಮಿ.ಮಿ. ಬೇಡ್ತಿ ಅಥವಾ ಗಂಗಾವಳಿ ನದಿ ಈ ತಾಲೂಕಿನ ಮಧ್ಯದಲ್ಲಿ ಈಶಾನ್ಯದಿಂದ ನೈಋತ್ಯಕ್ಕೆ ಹರಿದು ಅಂಕೋಲಾದ ದಕ್ಷಿಣದಲ್ಲಿ ಅರಬ್ಬೀ ಸಮುದ್ರಕ್ಕೆ ಸೇರುವುದು. ಅಂಕೋಲಾದ ಬಳಿ ಅಂಕೋಲಾ ನದಿ ಇದೆ. ಇದರ ಪೂರ್ವ ಭಾಗವನ್ನು ಶಂಕದ ಹೊಳೆ ಎಂದು ಕರೆಯುತ್ತಾರೆ. ಇದರ ಉತ್ತರದಲ್ಲಿ ಬೇಲೇಕೇರಿ ನದಿ ಹರಿಯುವುದು. ಈ ನದಿಗಳು ತಾಲೂಕಿನ ಬಹುತೇಕ ಬೆಟ್ಟಗುಡ್ಡ ಪ್ರದೇಶಗಳಲ್ಲಿ ಹರಿಯುವುದರಿಂದ ನೀರಾವರಿಗೆ ಹೆಚ್ಚು ಉಪಯುಕ್ತವಾಗಿಲ್ಲ. ಮಳೆ ನೀರಿನಿಂದ ಒದಗುವ ಅನೇಕ ತೋಟ, ಗದ್ದೆಗಳಿವೆ. ಇಲ್ಲಿರುವ ಕೆಲವು ಬಾವಿಗಳಿಂದಲೂ ವ್ಯವಸಾಯಕ್ಕೆ ನೀರು ಒದಗುತ್ತದೆ. ಭತ್ತ, ಅಡಕೆ ಇಲ್ಲಿಯ ಮುಖ್ಯ ಬೆಳೆಗಳು. ತಾಲೂಕಿನ ತೀರ ಪ್ರದೇಶ ಬಿಟ್ಟು ಅದರ ಪಕ್ಕದಲ್ಲೇ ಸಾಗುವ ಸುಮಾರು ೫ ರಿಂದ ೮ ಕಿ.ಮೀ. ಅಗಲದ ಒಳನಾಡ ಪ್ರದೇಶ ಭತ್ತದ ಗದ್ದೆಗಳಿಂದ ಮಾವಿನ ತೋಪುಗಳಿಂದ ಗೇರು, ಹಲಸು ಮತ್ತು ಇತರ ಫಲವೃಕ್ಷಗಳಿಂದ ಕೂಡಿದೆ. ಪೂರ್ವಕ್ಕೆ ಎತ್ತರವಾದ ದಟ್ಟ ಕಾಡುಗಳಿಂದ ಕೂಡಿದ ಬೆಟ್ಟ ಪ್ರದೇಶವಿದೆ. ಒಟ್ಟು ೭೫,೩೭೪ ಹೆಕ್ಟೇರ್ ಅರಣ್ಯ ಪ್ರದೇಶವಿದೆ. ಇಲ್ಲಿನ ಕಾಡುಗಳಲ್ಲಿ ಬೆಲೆಬಾಳುವ ಮತ್ತಿ, ಹೊನ್ನೆ, ನಂದಿ ಮುಂತಾದ ಮರಗಳು ಬೆಳೆಯುತ್ತವೆ. ಅಂಕೋಲಾದಿಂದ ಕಾರವಾರಕ್ಕೆ ಆಗ್ನೇಯದಲ್ಲಿ ೩೪ ಕಿ.ಮೀ. ದೂರದಲ್ಲಿ ಸಮುದ್ರ ತೀರದಿಂದ ಸುಮಾರು ೩ ಕಿ.ಮೀ. ಅಂತರದಲ್ಲಿದೆ. ಇಲ್ಲಿಯ ಜನರ ಮುಖ್ಯ ಉದ್ಯೋಗ ವ್ಯವಸಾಯ, ವ್ಯಾಪಾರ ಮತ್ತು ಕೂಲಿಯ ದುಡಿಮೆ. ಅಂಕೋಲಾ ಪಟ್ಟಣ, ಮುಂಬೈ ಮತ್ತು ಹುಬ್ಬಳ್ಳಿಯಿಂದ ಬರುವ ವಸ್ತುಗಳ ಮಾರುಕಟ್ಟೆಯಾಗಿದೆ.

ಅಂಕೋಲಾ ಒಂದು ಐತಿಹಾಸಿಕ ಸ್ಥಳ. 'ಪಟ್ಟಣದ ಪೂರ್ವಕ್ಕೆ ಸ್ವಲ್ಪ ಎತ್ತರದಲ್ಲಿ ವೃತ್ತಾಕಾರವಾದ ಶಿಥಿಲ ಕೋಟೆಯಿದೆ. ಸುಮಾರು ೫೪೮ ಮೀ. ಸುತ್ತಳತೆಯುಳ್ಳ ಈ ಕೋಟೆಯನ್ನು ಸೋದೆಯ ದೊರೆ ಅಂಕೋಲಾದಲ್ಲಿ ವಾಸವಾಗಿದ್ದ ತನ್ನ ಪ್ರೇಯಸಿಗಾಗಿ ಕಟ್ಟಿಸಿದನೆಂದು ಪ್ರತೀತಿ ಇದೆ. ೧೫೪೦ರ ಸುಮಾರಿನಲ್ಲಿ ಈ ಊರು ಪೋರ್ಚುಗೀಸರ

ವಶದಲ್ಲಿತ್ತು. ಆ ಕಾಲದಲ್ಲಿ ಅಂಕೋಲಾದ ಮೂಲಕ ಖನಿಜ ಮತ್ತು ಬಟ್ಟೆಗಳ ವ್ಯಾಪಾರ ನಡೆಯುತ್ತಿತ್ತು. ೧೫೬೭ರಲ್ಲಿ ವೆನಿಸ್ಸಿನ ಪ್ರಸಿದ್ಧ ವ್ಯಾಪಾರಿಯಾದ ಸೀಸರ್ ಫ್ರೆಡರಿಕ್ ಅಂಕೋಲಾಕ್ಕೆ ಭೇಟಿಕೊಟ್ಟಿದ್ದ. ಬಿಜಾಪುರದ ರಾಜಪ್ರತಿನಿಧಿಯಾಗಿದ್ದ ಷರೀಫ್-ಉಚಲ್-ಮುಲ್ಕ್ ೧೬ನೆಯ ಶತಮಾನದ ಕೊನೆಯಲ್ಲಿ ಅಂಕೋಲಾವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡಿದ್ದ. ೧೬೭೬ರಲ್ಲಿ ಶಿವಾಜಿಯ ಸೇನೆ ಅಂಕೋಲಾದ ಅರ್ಧಭಾಗವನ್ನು ನಾಶಗೊಳಿಸಿತು. ೧೭೩೦ರಲ್ಲಿ ಅಂಕೋಲಾ ಸೋದೆ ರಾಜ್ಯದ ಬಂದರಾಗಿತ್ತೆಂದು ಹ್ಯಾಮಿಲ್ಟನ್ನನ ಬರವಣಿಗೆಯಲ್ಲಿ ಉಲ್ಲೇಖವಿದೆ. ಅಂಕೋಲಾ ಮೊದಲು ಕುಮಟಾ ತಾಲೂಕಿನ ಭಾಗವಾಗಿತ್ತು. ೧೮೮೦ರಲ್ಲಿ ಇದನ್ನು ಪ್ರತ್ಯೇಕ ತಾಲೂಕನ್ನಾಗಿ ಮಾಡಲಾಯಿತು'.[೬]

**ಕಾರವಾರ** : ಉತ್ತರ ಕನ್ನಡ ಜಿಲ್ಲೆಯ ಒಂದು ತಾಲೂಕು, ತಾಲೂಕು ಮತ್ತು ಜಿಲ್ಲೆಯ ಕೇಂದ್ರ ಪಟ್ಟಣ. ತಾಲೂಕನ್ನು ಪಶ್ಚಿಮದಲ್ಲಿ ಅರಬ್ಬೀ ಸಮುದ್ರ, ದಕ್ಷಿಣದಲ್ಲಿ ಅಂಕೋಲಾ, ಪೂರ್ವದಲ್ಲಿ ಯಲ್ಲಾಪುರ, ಈಶಾನ್ಯದಲ್ಲಿ ಜೋಯಿಡಾ ತಾಲೂಕುಗಳು, ವಾಯುವ್ಯದಲ್ಲಿ ಗೋವಾ ರಾಜ್ಯ ಇವುಗಳಿಂದ ಸುತ್ತುವರಿದಿವೆ. ಸಾವಂತವಾಡ, ಬಾಡ, ಕಿನ್ನಾರ, ಗಡಸಿ ಇವು ಈ ತಾಲೂಕಿನ ಹೋಬಳಿಗಳು. ಒಟ್ಟು ೬೦ ಗ್ರಾಮಗಳಿವೆ, ಇಲ್ಲಿನ ಜನಸಂಖ್ಯೆ ೧,೪೭,೮೪೨.

ಪಶ್ಚಿಮ ಘಟ್ಟಗಳ ತಡಿಯಲ್ಲಿ ಕರಾವಳಿ ತಾಲೂಕಿನಲ್ಲಿ ಮರಳು ಮಿಶ್ರಿತ ಮಟ್ಟ ಭೂಪ್ರದೇಶ ಹಾಗೂ ಬೆಟ್ಟಗುಡ್ಡಗಳಿವೆ. ಇಲ್ಲಿರುವ ಗುಡ್ಡಗಳಲ್ಲಿ ಪ್ರಸಿದ್ಧವಾದುದು ಕಾರವಾರದಿಂದ ಸುಮಾರು ೭ ಕಿ.ಮೀ. ದೂರದಲ್ಲಿರುವ ಗುಡ್ಡೆಹಳ್ಳಿ ಹಾಗೂ ತುಳಸಿಗುಡ್ಡ. 'ಕಾಳಿ ಇಲ್ಲಿನ ಮುಖ್ಯ ನದಿ, ತಾಲೂಕಿನ ಮಧ್ಯದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಹರಿದು ಅರಬ್ಬೀ ಸಮುದ್ರವನ್ನು ಸೇರುತ್ತದೆ. ವರ್ಷದಲ್ಲಿ ಆರು ತಿಂಗಳು ಮಳೆಗಾಲವಾಗಿದ್ದು, ಹೆಚ್ಚು ಮಳೆ ಈ ತಾಲೂಕಿನಲ್ಲಿ ಬೀಳುತ್ತದೆ. ವಾರ್ಷಿಕ ಸರಾಸರಿ ಸುಮಾರು ೩೦೫೦ ಮಿ.ಮೀ. ಸುತ್ತಲ ಬೆಟ್ಟ ಗುಡ್ಡಗಳು ಅರಣ್ಯಗಳಿಂದ ತುಂಬಿದ್ದು, ತೇಗ, ಮತ್ತಿ, ಹೊನ್ನೆ, ಜಂಬೆ ಮುಂತಾದ ಮರಗಳಿವೆ. ಈ ತಾಲೂಕಿನಲ್ಲಿ ಸಾಗುವಳಿ ಭೂಪ್ರದೇಶ ಇತರ ತಾಲೂಕುಗಳಿಗಿಂತ ಕಡಿಮೆ. ಇಲ್ಲಿನ ಮರಳು ಮಣ್ಣಿನಲ್ಲಿ ಸಸ್ಯ ಪೋಷಕ ದ್ರವ್ಯವೂ ಕಡಿಮೆ. ಪ್ರಮುಖವಾಗಿ ತೆಂಗು, ಭತ್ತ, ಕಬ್ಬು, ಗೆಣಸು, ಗೇರು, ನೆಲಗಡಲೆ, ಮುಂತಾದ ಬೆಳೆಯನ್ನು ಬೆಳೆಯುತ್ತಾರೆ. ಮೀನುಗಾರಿಕೆ ಈ ತಾಲೂಕಿನ ಒಂದು ಮುಖ್ಯ ಉದ್ಯಮ. ಬೆಸ್ತರು ಮೀನು ಹಿಡಿಯುವುದರಲ್ಲಿ ಪರಿಣಿತರಾಗಿದ್ದಾರೆ. ಇತ್ತೀಚಿಗೆ ಇಂಡೋ ನಾರ್ವೇಜಿಯನ್ ಯೋಜನೆಯ ಪರಿಣಾಮವಾಗಿ ದೂರ ಸಾಗರದಲ್ಲಿ ಮೀನು ಹಿಡಿಯುವ ಉದ್ಯಮ ಬೆಳೆಯುತ್ತಿದೆ'.[೭]

ಕರ್ನಾಟಕದ ಕಡಲ ತೀರದ ಕಣ್ಮಣಿ ಕಾರವಾರ. ಭಾರತದಲ್ಲಿ ಅಷ್ಟೇ ಅಲ್ಲ, ಜಗತ್ತಿನಲ್ಲಿಯೇ ಉತ್ತಮ ನೈಸರ್ಗಿಕ ಬಂದರಗಳಲ್ಲಿ ಮೊದಲನೆಯದೆಂದು ಪರಿಗಣಿಸಲ್ಪಟ್ಟಿದೆ. ಅಂತರದಲ್ಲಿ ಬಹಳಷ್ಟು ನಡುಗಡ್ಡೆಗಳ ಸರಮಾಲೆ ಹೊಂದಿದ್ದು ಪ್ರಕೃತಿ ದತ್ತ ಸುರಕ್ಷಿತ ಚೆಲುವಿನ ಬಂದರು ಭಾರತದ ಕಡಲ ದಂಡೆಯಲ್ಲಿ ಇನ್ನೆಲ್ಲೂ ದೊರೆಯಲಾರದು.

ಕಾರವಾರದ ಹೆಸರು ೧೮೬೪ರ ವರೆಗೂ ಕಡವಾಡವೆಂದೇ ಇದ್ದು ಮುಂದೆ ಬೆಳೆದು ತಾಲೂಕಾಗಿ ಇಂದು ಜಿಲ್ಲಾ ಕೇಂದ್ರವಾಗಿದೆ. ಸರಕಾರದ ಆದೇಶ ಸಂಖ್ಯೆ ೩೮೯೩ ದಿನಾಂಕ: ೨೭ ಅಕ್ಟೋಬರ, ೧೮೬೨ರ ಪ್ರಕಾರ ಅದುವರೆಗೂ ಜಿಲ್ಲಾ ಕೇಂದ್ರವಾಗಿದ್ದ ಹೊನ್ನಾವರದಿಂದ ಜಿಲ್ಲಾ ಕೇಂದ್ರವನ್ನು ಕಾರವಾರಕ್ಕೆ ಸ್ಥಳಾಂತರಿಸಲಾಯಿತು. ನವೆಂಬರ ೧೮೬೨ ರಿಂದ ಕಾರವಾರವು ಜಿಲ್ಲಾ ಕೇಂದ್ರವಾಗಿ ಮುಂದುವರೆದಿದೆ'.[೮] ಕಾರವಾರ ಫಿನಿಶಿಯನರ ಕಾಲದಿಂದಲೂ ಇದು ಹೊರ ದೇಶಗಳೊಂದಿಗೆ ಸಂಪರ್ಕ ಪಡೆದಿತ್ತೆಂದು ಇಂಗ್ಲೀಷರು ಇಲ್ಲಿ ೧೬೩೮ರಲ್ಲಿ ಸ್ಥಾಪಿಸಿದ ಕಾರ್ಖಾನೆಯಲ್ಲಿ ೫೦೦೦ ಮಂದಿ ನೇಕಾರರು ಮಸ್ಲಿನ್ ವಸ್ತ್ರನೇಯ್ಗೆಯಲ್ಲಿ ನಿರತರಾಗಿದ್ದರೆಂದು ಹೇಳಲಾಗಿದೆ. ಇಲ್ಲಿಯ ವಸ್ತ್ರಗಳು ಹುಬ್ಬಳ್ಳಿ ಮುಂತಾದ ಕಡೆಗಳಲ್ಲಿ ಮಾರಾಟವಾಗುತ್ತಿತ್ತೆಂದು ಪ್ರತೀತಿ. ಕಡವಾಡ ಶಿವಾಜಿಯ ಆಳ್ವಿಕೆಗೆ ಒಳಪಟ್ಟಿದ್ದರಿಂದ ಒಮ್ಮೆ ಇಂಗ್ಲೀಷರು ಸಹ ಕರವನ್ನು ಕೊಟ್ಟಿದ್ದರು. ಅನಂತರ ಇದು ಬಿಜಾಪುರದ ಸುಲ್ತಾನರ ಆಳ್ವಿಕೆಗೆ ಸೇರಿತೆಂದು ಬಿಜಾಪುರದ ರಾಜ್ಯಪಾಲ ಇಲ್ಲಿ ವಾಸಿಸುತ್ತಿದ್ದನೆಂದು ೧೬೭೫ರಲ್ಲಿ ಶಿವಾಜಿಯ ಸೇನೆ ಈ ಸ್ಥಳವನ್ನು ಸುಟ್ಟಿತೆಂದು ಪ್ರತೀತಿ. ೧೭೨೦ರಲ್ಲಿ ಸೋದೆಯ ರಾಜ ಇಂಗ್ಲೀಷರನ್ನು ಇಲ್ಲಿಂದ ಹೊರಗೆ ಹಾಕಿದ. ಕಲ್ಯಾಣದಿಂದ ವಲಸೆ ಬಂದ ಕೊಂಕಣರು ಮೊದಲು ಇಲ್ಲಿ ನೆಲೆಸಿದ್ದು, ಅನಂತರ ಸದಾಶಿವಗಡಕ್ಕೆ ಹೋದರೆಂದು ತಿಳಿದು ಬರುತ್ತದೆ'.[೯]

**ಯಲ್ಲಾಪುರ :** ಉತ್ತರ ಕನ್ನಡ ಜಿಲ್ಲೆಯಲ್ಲಿ ಬರುವ ಒಂದು ತಾಲೂಕು ಕೇಂದ್ರ ಯಲ್ಲಾಪುರ, ಇದು ಚಿಕ್ಕ ಪಟ್ಟಣ ಪಶ್ಚಿಮ ಸಹ್ಯಾದ್ರಿ ಬೆಟ್ಟಗಳ ಅರಣ್ಯ ಪ್ರದೇಶದಲ್ಲಿದೆ. ಫ್ಲೋರಾ ಮತ್ತು ಫಾನಾ ಎಂಬ ಗಿಡಮರಗಳಿಂದ ಕೂಡಿದ ದಟ್ಟ ಅರಣ್ಯವಿದೆ. ತೇಗದ ಮರಗಳು ಹೇರಳವಾಗಿ ಸಿಗುತ್ತವೆ. ಯಲ್ಲಾಪುರವು ಅಂಕೋಲಾ-ಹುಬ್ಬಳ್ಳಿ ಮಾರ್ಗ ಮಧ್ಯದಲ್ಲಿ ಬರುತ್ತದೆ. ಘಾಟ ಪ್ರದೇಶದ ಏರು-ಇಳುವು-ದಟ್ಟ ಅರಣ್ಯಗಳಲ್ಲಿ-ವಾಹನಗಳನ್ನು ಚಲಾಯಿಸುವ ಚಾಲಕರು ಪ್ರಯಾಣದ ಬಳಲಿಕೆ-ಆಯಾಸ-ಬೇಸರವನ್ನು ಕಳೆದುಕೊಳ್ಳಲು ವಿಶ್ರಾಂತಿಗಾಗಿ ಯಲ್ಲಾಪುರದಲ್ಲಿ ತಂಗುವರು. ಇಂತಹ ಪಟ್ಟಣಗಳನ್ನು ಮೇನ್ ರೋಡ್ ಟೌನ್ಸ್ ಎಂದರೆ ಹೆದ್ದಾರಿಗೆ ಹೊಂದಿಕೊಂಡ ಪಟ್ಟಣಗಳೆಂದು ಕರೆಯಲಾಗುತ್ತದೆ. ಇವು ಸಾಮಾನ್ಯವಾಗಿ ಒಂದು ದೊಡ್ಡ ರಸ್ತೆಯ ಪಕ್ಕದಲ್ಲಿರುತ್ತವೆ, ಅವು ಹಳ್ಳಿಗಳಂತಿದ್ದರೂ ಆಧುನಿಕ ಸೇವೆ ಸೌಲಭ್ಯಗಳಾದ ದೂರವಾಣಿ ಭೂತ್‌ಗಳು, ಉಪಹಾರ-ಚಹಾ

ಅಂಗಡಿಗಳು, ಗಾಡಿಗಳ ಟಯರ್ ಪಂಕ್ಚರ್ ರಿಪೇರಿ ಅಂಗಡಿಗಳು ಮುಂತಾದವುಗಳನ್ನು ಒಳಗೊಂಡು ಇತರ ಹಳ್ಳಿಗಳಿಗಿಂತ ಭಿನ್ನವಾಗಿರುತ್ತವೆ. ಯಲ್ಲಾಪುರದಲ್ಲಿ ೯೦% ರಷ್ಟು ಜನ ಕೃಷಿಕರು. ಅವರು ಅಡಿಕೆ ಬೇಸಾಯ ಅವಲಂಬಿಸಿರುತ್ತಾರೆ. ಅಲ್ಲದೆ ಭತ್ತವನ್ನು ಆಹಾರಕ್ಕಾಗಿ ಬೆಳೆಯಲಾಗುತ್ತದೆ.

**ಭೌಗೋಳಿಕ ಪರಿಚಯ**

ಯಲ್ಲಾಪುರ ೧೪°-೫೮° ಉತ್ತರ ಅಕ್ಷಾಂಶ, ೭೪°-೪೩° ಪೂರ್ವ ರೇಖಾಂಶಗಳ ೧೪°-೯೭° ಉತ್ತರ ಅಕ್ಷಾಂಶ, ೭೪°-೭೨° ಪೂರ್ವ ರೇಖಾಂಶಗಳ ನಡುವೆ ವಿಸ್ತರಿಸಿದೆ.

**ಜನಸಂಖ್ಯೆ** : ೨೦೦೧ ರ ಭಾರತದ ಜನಗಣತಿಯ ಪ್ರಕಾರ ಯಲ್ಲಾಪುರದ ಜನಸಂಖ್ಯೆ ೭೭,೯೩೮, ಪುರುಷರು ೫೧% ಮತ್ತು ಸ್ತ್ರೀಯರು ೪೯%. ಯಲ್ಲಾಪುರದಲ್ಲಿ ಸಾಕ್ಷರತೆಯ ಪ್ರಮಾಣ ಸರಾಸರಿ ೭೩%, ರಾಷ್ಟ್ರೀಯ ಸಾಕ್ಷರತಾ ಸರಾಸರಿ ಪ್ರಮಾಣದ ೫೯.೫% ಕ್ಕಿಂತ ಹೆಚ್ಚಿದೆ. ಪುರುಷರ ಸಾಕ್ಷರತೆಯ ಪ್ರಮಾಣ ೭೯% ಮತ್ತು ಸ್ತ್ರೀಯರ ಸಾಕ್ಷರತೆಯ ಪ್ರಮಾಣ ೬೮% ಇದೆ. ಯಲ್ಲಾಪುರದಲ್ಲಿ ಒಟ್ಟು ಜನಸಂಖ್ಯೆಯ ೧೨% ರಷ್ಟು ಆರು ವರ್ಷದೊಳಗಿನವರಿದ್ದಾರೆ. ಈ ಪ್ರದೇಶದಲ್ಲಿ ಕನ್ನಡ ಭಾಷೆಯನ್ನು ಬಹುಪಾಲು ಜನ ಬಳಸುತ್ತಾರೆ.

**ಜೋಯಿಡಾ** : ಕರ್ನಾಟಕದ ಪಶ್ಚಿಮ ಘಟ್ಟ ಪ್ರದೇಶದಲ್ಲಿಯ ಒಂದು ತಾಲೂಕು ಕೇಂದ್ರ ಚಿಕ್ಕ ಪಟ್ಟಣ ಜೋಯಿಡಾ. ಉತ್ತರ ಕನ್ನಡ ಜಿಲ್ಲೆಯ ಎಪೋನಿಮಸ್ ತಾಲೂಕಿನ ಹೆಡ್ ಕ್ವಾರ್ಟರ್ ಇದಾಗಿದೆ. ಅಂಬಿಕಾ ನಗರದ ಸಮೀಪವಿರುವ ಜೋಯಿಡಾವನ್ನು ಸ್ಥಳೀಯರು ಸೂಪಾ ಎಂದು ಕರೆಯುವರು. ಕಾಳಿ ನದಿಗೆ ಸೂಪಾ ಡ್ಯಾಮ್ ಕಟ್ಟಿ, ಕರ್ನಾಟಕ ವಿದ್ಯುಚ್ಛಕ್ತಿ ನಿಗಮದವರು ನಿರ್ವಹಿಸುತ್ತಿದ್ದಾರೆ.

ದಾಂಡೇಲಿಯಿಂದ ೨೨ ಕಿ.ಮೀ. ಅಂತರದಲ್ಲಿ ಜೋಯಿಡಾ ಇದೆ. ಇದು ತಾಲೂಕು ಕೇಂದ್ರವಾಗಿದ್ದರೂ ಅರಣ್ಯ ಪ್ರದೇಶದಲ್ಲಿರುವುದರಿಂದ ಇನ್ನೂ ಅಭಿವೃದ್ಧಿ ಆಗಬೇಕಿದೆ. ಇಲ್ಲಿಯ ಜನರ ಆಡು ಭಾಷೆ ಕನ್ನಡ. ಶಾಲೆಗಳ, ಕಾಲೇಜುಗಳ, ಆಸ್ಪತ್ರೆಗಳ ಸೌಲಭ್ಯ ಇಲ್ಲಿದೆ. ಸರಕಾರಿ ಪ್ರಥಮ ದರ್ಜೆ ಕಲಾ ಮಹಾವಿದ್ಯಾಲಯ ಇದೆ (ಬಿ.ಎ. ಕೋರ್ಸು ಇದೆ). ಸರಕಾರಿ ಪಾಲಿಟೆಕ್ನಿಕ್ ಕಾಲೇಜಿದ್ದು ಮೆಕ್ಯಾನಿಕಲ್, ಸಿವಿಲ್, ಇ&ಸಿ ಮತ್ತು ಕಂಪ್ಯೂಟರ್ ಸೈನ್ಸ್, ಎಂಜಿನೀಯರಿಂಗ್ ವಿಭಾಗದಲ್ಲಿ ಅಧ್ಯಯನ ವ್ಯವಸ್ಥೆ ಇದೆ.

**ಕಲೆ ಮತ್ತು ಸಂಸ್ಕೃತಿ**

ಜಾನಪದ ಕಲೆಗಳಾದ ಸುಗ್ಗಿ ಕುಣಿತ, ಡೋಲ್ ಕುಣಿತ (ನೃತ್ಯ), ಹುಲಿವೇಷ, ಸಿದ್ಧಿ ನೃತ್ಯ, ಇವು ತಾಲೂಕಿನ ಪ್ರಸಿದ್ಧ ಸಾಂಪ್ರದಾಯಿಕ ಕಲೆಗಳಾಗಿವೆ. ಜನಸಂಖ್ಯೆಯ ಬಹುಭಾಗ

ಹಳ್ಳಿಗಳಲ್ಲಿ ವಾಸಿಸುತ್ತಿದ್ದು, ಅವರ ಮುಖ್ಯ ಕಸುಬು ಒಕ್ಕಲುತನ (ಕೃಷಿ) ಮತ್ತು ಇತರೇ ಸಾಂಪ್ರದಾಯಿಕ ಉದ್ಯೋಗಗಳಾಗಿವೆ.

**ಭೌಗೋಳಿಕ ಪರಿಚಯ**

**ಜೋಯಿಡಾ** – ೧೩°-೫೫° ಉತ್ತರ ಅಕ್ಷಾಂಶ

೧೫°-೩೧° ಉತ್ತರ ಅಕ್ಷಾಂಶ

೭೪°-೯° ಪೂರ್ವ ಅಕ್ಷಾಂಶ

೭೫°-೧೦° ಪೂರ್ವ ಅಕ್ಷಾಂಶ ನಡುವೆ ವಿಸ್ತರಿಸಿದೆ.

**ಜನಸಂಖ್ಯೆ** : ೨೦೦೧ ರ ಭಾರತದ ಜನಗಣತಿಯ ಪ್ರಕಾರ ಜೋಯಿಡಾ ಜನಸಂಖ್ಯೆ ೪೪,೯೧೪. ಪುರುಷರು ೨೪,೫೯೦ ಮತ್ತು ಸ್ತ್ರೀಯರು ೨೪,೩೨೪. ಸೂಪಾ ತಾಲೂಕು ಅತ್ಯಂತ ದೊಡ್ಡ ತಾಲೂಕೆನಿಸಿದೆ, ಅದರ ಕ್ಷೇತ್ರ ೧೦,೮೯೦ ಚ.ಕಿ.ಮೀ.

**ಉತ್ತರ ಕನ್ನಡ ಜಿಲ್ಲೆಯಲ್ಲಿ ಕುಣಬಿಯರ ವಾಸ ಸ್ಥಳಗಳು**

ಕುಣಬಿಯರು ಬೆಟ್ಟ, ಗುಡ್ಡ, ಕರಾವಳಿಯ ದಟ್ಟವಾದ ಕಾಡುಗಳಲ್ಲಿ ವಾಸ ಮಾಡುತ್ತಾ ತಮ್ಮದೇ ಆದ ಭಾಷೆ, ಸಂಸ್ಕೃತಿ, ಆಚರಣೆಗಳನ್ನು ಅಳವಡಿಸಿಕೊಂಡು ಕಾಡಿನ ಮಧ್ಯದಲ್ಲಿ ಇದ್ದುಕೊಂಡು ಗುಂಪು ಗುಂಪಾಗಿ ವಾಸ ಮಾಡುವವರಾಗಿದ್ದಾರೆ. ಇವರ ಮೂಲ ಉದ್ಯೋಗ ಕೃಷಿ. ತಾವು ನೆಲೆ ನಿಂತಲ್ಲೇ ಭೂಮಿಯನ್ನು ಕೃಷಿಮಾಡಿ ಮಳೆ ಬಂದಾಗ ಬೆಳೆ ತೆಗೆದು ಅದನ್ನು ಊಟಕ್ಕಾಗಿ ಉಪಯೋಗಿಸುವರು.

ಕುಣಬಿಯರ ವಲಸೆಗೆ ಕಾರಣವನ್ನು ಹಿರಿಯರು ಈ ರೀತಿಯಾಗಿ ಹೇಳುತ್ತಾರೆ.

'ತಮ್ಮ ಮೂಲ ನೆಲೆಯಾದ ಗೋವಾದಲ್ಲಿ ಪೋರ್ಚುಗೀಸರ ದಬ್ಬಾಳಿಕೆಯಿಂದ ಹೆದರಿದ ಕುಣಬಿಯರು ಒಂದು ದೊಡ್ಡ ಬಾಳೆ ಎಲೆಯಲ್ಲಿ ಕುಳಿತು ಕಡಲಿನ ಮೂಲಕ ಹೋಗು ಹೋಗುತ್ತಾ ಸಮುದ್ರದ ತಡೆಗೆ ಬಂದು ನೆಲೆ ನಿಂತವರೆ ಕುಣಬಿಯರು. ವಲಸೆ ಬಂದ ಒಂದು ಗುಂಪು ಕಾಡು ಪ್ರದೇಶದಲ್ಲಿ ನೆಲೆನಿಂತು ಪರಂಪರೆಗೆ ಬದ್ಧರಾದವರೇ ಗೋವಾ ಕುಣಬಿಯರು.'[೧೦]

ಇವರೇ ಕರ್ನಾಟಕದ ಬೇರೆ ಬೇರೆ ಕಡೆ ಪಸರಿಸಿ ಸ್ಥಳೀಯ ಪ್ರಭಾವಗಳಿಗೆ ಒಳಗಾಗಿ ತಮ್ಮಲ್ಲೇ ಒಳಪಂಗಡಗಳನ್ನು ಹುಟ್ಟು ಹಾಕಿಕೊಂಡರೆಂದು ತಿಳಿಯಲಾಗಿದೆ. ಕೊಂಕಣಿ ಕುಣಬಿಯರ ಮಾತೃಭಾಷೆಯಾಗಿದ್ದರೂ ಮರಾಠಿಯ ಪ್ರಭಾವ ಇವರ ಮೇಲಾಗಿದೆ. ಕಾಡಿನಲ್ಲಿ ಇರುವ ಕುಣಬಿಗಳ ಮೇಲೆ ಉಳಿದ ಭಾಷೆಗಳ ಪ್ರಭಾವ ಕಡಿಮೆ ಇದ್ದರೂ, ಇನ್ನಿತರ ಕಡೆಗೆ ನೆಲೆ ನಿಂತ ಕುಣಬಿಯರ ಭಾಷೆಯ ಮೇಲೆ ಆಯಾ ಸ್ಥಳೀಯ ಭಾಷೆ ಪ್ರಭಾವ ಅಲ್ಪಸ್ವಲ್ಪ ಬೀರಿದೆ

ಹಾಗೂ ಇವರು ತಮ್ಮ ಮಾತೃಭಾಷೆಯಲ್ಲದೆ ಉತ್ತರ ಕನ್ನಡ ಜಿಲ್ಲೆಯ ಹವ್ಯಕ ಕನ್ನಡ ಭಾಷೆ ಮತ್ತು ಇತರ ಭಾಷೆಗಳ ವ್ಯವಹಾರಿಕ ಜ್ಞಾನವನ್ನು ಗಳಿಸಿಕೊಂಡಿದ್ದಾರೆ.

**ಕುಣಬಿ ಸಮುದಾಯ : ಸಾಮಾಜಿಕ**

ಕುಣಬಿ ಸಮುದಾಯದವರಿಗೆ ಅವರದೇ ಆದ ಆಡಳಿತ ಪದ್ಧತಿ ಇದೆ. 'ತಮ್ಮನ್ನು ತಾವೇ ಆಳಿಕೊಳ್ಳುತ್ತಿದ್ದ ಪ್ರಾಚೀನ ಸಮಾಜದ ಎಲ್ಲ ಕುರುಹುಗಳೂ ಕುಣಬಿಯರ ಸಾಮಾಜಿಕ ವ್ಯವಸ್ಥೆಯಲ್ಲಿ ಇನ್ನೂ ಜೀವಂತವಾಗಿವೆ. ಈಗಿನ ಜಿಲ್ಲೆ, ತಾಲೂಕು ಅಥವಾ ಪಂಚಾಯತಿಗಳೂ, ನ್ಯಾಯಾಲಯ, ಆರಕ್ಷಕ ಠಾಣೆಗಳು, ವ್ಯಾವಹಾರಿಕವಾಗಿ ಅವರಿಗೂ ಸಂಬಂಧಿಸಿವೆಯಾದರೂ ಅವರ ಸಮಾಜದ ಸುಪ್ತ ವ್ಯವಸ್ಥೆಯೇ ಬೇರೆ'.[೧೧]

ಕುಣಬಿ ಜನ ದಟ್ಟವಾಗಿರುವ ಪ್ರದೇಶಗಳನ್ನು ಗುರುತಿಸಿ, ಅವಕ್ಕೆ ಇಂತಿಂಥ ಸೀಮೆ ಎಂದು ಹೆಸರು ಕೊಟ್ಟು ಪ್ರತಿಯೊಂದು ಕುಟುಂಬವೂ ಒಂದಲ್ಲ ಒಂದು ಸೀಮೆಗೆ ಸೇರುವಂತೆ ನೋಡಿಕೊಂಡಿದ್ದಾರೆ. ಇವತ್ತಿಗೂ ಅವರ ಸಾಂಸ್ಕೃತಿಕವಾದ ಎಲ್ಲ ವಹಿವಾಟುಗಳು ಈ ಸೀಮೆಗಳ ವ್ಯಾಪ್ತಿಗೆ ಒಳಪಟ್ಟಿರುತ್ತವೆ. ಹೀಗೆ ಕುಣಬಿಗಳು ಅವರದೇ ಆದ ಆಡಳಿತ ವ್ಯವಸ್ಥೆ ಹಾಗೂ ನ್ಯಾಯ ಪಂಚಾಯ್ತಿಯನ್ನು ಸಹ ಹೊಂದಿದ್ದಾರೆ. ಇವರ ಆಡಳಿತ ಪದ್ಧತಿ ಮತ್ತು ಧಾರ್ಮಿಕ ಜೀವನ ಹಾಸುಹೊಕ್ಕಾಗಿ ಬೆರೆತುಕೊಂಡು ಬಂದಿದೆ.

ಕುಣಬಿಗಳು ವಾಸಿಸುವ ಗ್ರಾಮಗಳನ್ನು, ಗ್ರಾಮಗಳ ಹೆಸರುಗಳನ್ನು ಡಾ॥ ಹಿ.ಚಿ. ಬೋರಲಿಂಗಯ್ಯ ತಮ್ಮ 'ಕುಣಬಿ'ಯರು ಎಂಬ ಕೃತಿಯಲ್ಲಿ ಹಾಗೂ ಆರ್. ಇಂದಿರಾ ರವರು ತಮ್ಮ 'ಜೋಯಿಡಾ ತಾಲೂಕಿನಲ್ಲಿ ಕುಣಬಿಗಳ ಸಂಖ್ಯೆ ಕೇಂದ್ರಿಕೃತವಾಗಿರುವ ಗ್ರಾಮಗಳ ಬಗ್ಗೆ ಮಾಹಿತಿ' ಈ ಕೆಳಕಂಡಂತೆ ಗುರುತಿಸಿದ್ದಾರೆ.

**೧. ಜೋಯಿಡಾ ತಾಲೂಕು**

೧. ಅಣಶಿವಾಡಾ
೨. ಆಲ್‌ಕುಂಬಿ
೩. ಅಸುಳ್ಳಿ
೪. ಅಂಬರ್ಡೆ
೫. ಅಂಬೋಳಿ
೬. ಅಂಬಟ್‌ಗಾಳಿ
೭. ಅಂಬಾಳಿ
೮. ಕಡಕರ್ಣಿ
೯. ಕಣ್ಣೆ
೧೦. ಕರಕಣೆ
೧೧. ಕರಂಬಾಳಿ
೧೨. ಕಳಣೆ
೧೩. ಕಾಜುವಾಡಾ
೧೪. ಕಾಟೇಲ್
೧೫. ಕಾರಟೋಳಿ
೧೬. ಕಾರ್‌ಸಿಂಗಳ್

೧೭. ಕಾಳಸಾಯಿ
೧೮. ಕಿರವತ್ತಿ
೧೯. ಕಿಂದಳೆ
೨೦. ಕುರಾವಲಿ
೨೧. ಕುಮ್‌ಗಾಳ್
೨೨. ಕುಂಡಲ್
೨೩. ಕುಣ್ಣಂಗ್
೨೪. ಕೇಲೋಲಿ
೨೫. ಕೊಂದೊರ್
೨೬. ಖಾನ್‌ಗಾಂವ್
೨೭. ಗಾವಡೇವಾಡಾ
೨೮. ಗಾಳ್
೨೯. ಗಾಂಗೋಡಾ
೩೦. ಗುಂದ್
೩೧. ಗುಂದರೆ
೩೨. ಗುಂದಾಳಿ
೩೩. ಗೋಕರ್ಣ
೩೪. ಘಟ್ಟಾವ್
೩೫. ಚಾಪಾಳಿ
೩೬. ಚಾಪೇಲ್
೩೭. ಚಾಪೋಲಿ (ಕಳಸಾಯಿ)
೩೮. ಚಾಪೋಲಿ
೩೯. ಚೌಕನ್‌ಗಾಳಿ
೪೦. ಚಂದ್ರಾಳಿ
೪೧. ಝೂಮ್‌ಗಾಳಿ
೪೨. ಟಿಟಗಾಳಿ
೪೩. ಡಿಗ್ಗಿ
೪೪. ಡೇರಿಯಾ
೪೫. ತಾಡಕೇತ್
೪೬. ತಿನೀಖಂಡ್
೪೭. ತೇಲೋಲಿ
೪೮. ದಾಡಸೇತ್
೪೯. ದಾತೋಡಿ
೫೦. ದಿಗಲಂಬ್
೫೧. ದುಧಮಳಾ
೫೨. ದುಧಮಳಾ ವೈಲವಾಡ
೫೩. ಧುಪೇವಾಡಿ
೫೪. ನಗರಭಾವಿ
೫೫. ನಗರಿ
೫೬. ನವರ್
೫೭. ನುಜ್ಜಿಪಾಟ್ನೇ
೫೮. ಪಟ್ಟೇಗಾಳಿ
೫೯. ಪತ್ರಿವಾಡಾ
೬೦. ಪಾತಾಗುಡಿ
೬೧. ಪಿಸೋಸಾ
೬೨. ಪ್ರಶೇಲಿ
೬೩. ಪೋಟೋಳಿ
೬೪. ಪೋಸೋಲಿ
೬೫. ಬಾಕಿ
೬೬. ಬಾಂದೆಗಾಳಿ
೬೭. ಬಿಡೋಲಿ ಪಾಟ್ನೆ
೬೮. ಬಿರೊಡಾ
೬೯. ಬೊಂಡೇಲಿ
೭೦. ಭಾಮಣಿ

೭೧. ಭಾರಾಡಿ

೭೨. ಮಡಭಾವಿ

೭೩. ಮಲಕರ್ಣಿ

೭೪. ಮಾತಕಣಿ

೭೫. ಮಾಟಗಾಂವ್

೭೬. ಮಾಯರೆ

೭೭. ಮಿರಾಸಕುಂಟೇಲ

೭೮. ಮುಡಿಯೇ

೭೯. ಮೈನೋಳ

೮೦. ರಾಮನಗರ

೮೧. ರಿಂಬುಡ್‌ಶೇತ್

೮೨. ರುಂಡಾಳಿ

೮೩. ವಡಾಕಡೇ

೮೪. ವಾರಂಡ

೮೫. ವಾಗಬಂದ್

೮೬. ವಾಗೇಲಿ

೮೭. ವಾಸ್‌ಪೋಡ್

೮೮. ವಿರಲ್

೮೯. ಶಿರೋಳಾ

೯೦. ಸಾಚ್ಚೇವಾಡಾ

೯೧. ಸಾಮ್‌ಜೋಯಿಡಾ

೯೨. ಸಿಟ್ಟೇಗಾಳಿ

೯೩. ಸಿತಾವಾಡಿ

೯೪. ಸಿಸಯಿ

೯೫. ಸುಕ್‌ತರಿ

೯೬. ಸುಳಾವಳಿ

೯೭. ಸೊಲಿಯಾ

೯೮. ಹೆಣಕೋಳ

೯೯. ಹನುಲ್ಲೇ

೧೦೦. ಹುಡಸಾ

**೨. ಯಲ್ಲಾಪುರ ತಾಲೂಕು**

೧. ಅಳ್ನೆಮನೆ

೨. ತಾರೆಮನೆ

೩. ನೀರಕ್ಲು ತಿಮಾನಿ

೪. ಬಂತೊಳ್ಳಿ

೫. ಹೆಗ್ಗಾರಮನೆ

**೩. ಕಾರವಾರ ತಾಲೂಕು**

೧. ಕಡಚಿಮನೆ

೨. ಕಬ್ಯಾ

೩. ಹರೂರು

**೪. ಅಂಕೋಲಾ ತಾಲೂಕು**

೧. ಲಕ್ಕೆಮನೆ

೨. ಶೇಡಿಗುಳಿ

## ಪ್ರಸ್ತುತ ಅಧ್ಯಯನದಲ್ಲಿ ಕಂಡುಬಂದ ಸಂಗತಿಗಳು

ಇದನ್ನು ಹೊರತಾಗಿಸಿ ಕರ್ನಾಟಕ ಸಹ್ಯಾದ್ರಿಯ ಮಡಿಲಲ್ಲಿ ನಾನು ಕ್ಷೇತ್ರಕಾರ್ಯ ಮಾಡುವ ಸಮಯದಲ್ಲಿ ಅಲ್ಲಲ್ಲಿ ನೆಲೆನಿಂತಿರುವ ಕುಣಬಿಗಳು ನೆಲೆಸಿರುವ ಕೆಲ ಗ್ರಾಮಗಳು ಇರುವುದು ತಿಳಿದು ಬಂದಿತು ನಾನು ಕಂಡ ಹಳ್ಳಿಗಳನ್ನು ಇಲ್ಲಿ ಗುರುತಿಸಬಯಸುತ್ತೇನೆ.

**ಕೋಷ್ಟಕ-೨.೪**

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕಂಡುಬಂದ ಕುಣಬಿಗಳ ಹಳ್ಳಿಗಳು

**೧. ಜೋಯಿಡಾ ತಾಲೂಕು**

೧. ಅಪಕರ್ಣೆ
೨. ಅವುರ್ಲಿ
೩. ಅಂಬರಡಾ
೪. ಅವಾಳಿ/ವಾಕರಿ
೫. ಅಮ್ಮ್ಯತಪಾಲಿ
೬. ಆಡಾಳಿ
೭. ಕರಂಜಿ
೮. ಕಳಾವಳಿ
೯. ಕಾಮಾರೆ
೧೦. ಕಿಂದಳವಾಡಾ
೧೧. ಕುಂಭಾರವಾಡ
೧೨. ಕೈಲಿವಾಡಾ
೧೩. ಕೆಳಗಿನಮಾಟಗಾಂವ
೧೪. ಕಟೆ
೧೫. ಕಾಡಪೂಡ
೧೬. ಕೆಳಮನೆ
೧೭. ಕುಕುದಾಳ
೧೮. ಕುಂಬಾರ ಸೇತ್
೧೯. ಕೊಡುಗಾಳಿ
೨೦. ಗೊಡಸೇತ್
೨೧. ಘೊಟಕೆ
೨೨. ಚರಗಾಳಿ
೨೩. ಚಿಟೆವಾಡಿ
೨೪. ತಡಕೆ
೨೫. ತಗಿಓಪಳೆ
೨೬. ದಿಗಾಳಿ
೨೭. ದೇವಸ
೨೮. ದಾಯಣಕುಣಂಗ
೨೯. ನಾರಗಾಳಿ
೩೦. ನಂದಿಗದ್ದೆ
೩೧. ಪಾಟ್ನೆ
೩೨. ಫಾತ್ರೆ
೩೩. ಪಿರೇಗಾಳಿ
೩೪. ಬಾರಲ್‌ಕೋಡ್
೩೫. ಚಾಪೇಲಿ
೩೬. ಬೋರಿ
೩೭. ಭೀಮಗಾಳಿ
೩೮. ಬುಳಬುಳೆ
೩೯. ಬಾಂದೆಗಾಳಿ
೪೦. ಮಾಸೆತ್

೪೧. ಮಾಲ್ಲಿಕಾರಡೊಂಗರೆ
೪೨. ಮಾರ್ಲಿ
೪೩. ಮಳೆ
೪೪. ಮದ್ಲೆವಾಡ
೪೫. ಮರಮುಖ
೪೬. ರಿಟ್ಟೈ
೪೭. ವಾಗನಗಾಳಿ
೪೮. ವಡಕಲ
೪೯. ವಾಕಶೇಪಡಿ
೫೦. ಶಿಂದ್ದೊಳ್ಳಿ
೫೧. ಶ್ರೀಪತಿ
೫೨. ಸಿರವೊಳಿ
೫೩. ಹಲಕುಂಬಿ
೫೪. ಹುಡಸಾ
೫೫. ಹೊಗರ್ಲಿ

**೨. ಯಲ್ಲಾಪುರ ತಾಲೂಕು**

೧. ಅಜ್ಜುನ ಪಾಲ
೨. ಕಟ್ಟಿಗೆ, ಹೊಸಗದ್ದೆ
೩. ಕುಂಬ್ರಿ
೪. ಕುಂಬಾರ ಕುಳಿ
೫. ಕೆಳಾಸಿ
೬. ಕೈಲಕೊಡ್ಲ
೭. ಜಮಟಗಾರ
೮. ದೇವಸ ಗದ್ದೆ
೯. ಬಸವನಗುಂಡಿ
೧೦. ಬಂಕ್ಲಿಕೊಡ್ಲ
೧೧. ಬಸಗೋಡ, ಜೋಡಹಳ್ಳಿ
೧೨. ಬಿಳ್ಳಿ
೧೩. ಬಾಳೆಹಳ್ಳಿ
೧೪. ಭಾಮಣಕೊಪ್ಪ
೧೫. ಮಂಡಗಿ ಜಿಡ್ಡಿ
೧೬. ಮಳಿಮನೆ/ಹಾಸಣಗಿ
೧೭. ಮಾಗೋಡಾ
೧೮. ಮೊಸರಕುಳ್ಳಿ
೧೯. ಸೂರ್ಯಮನೆ
೨೦. ಸೋಮನಳ್ಳಿ
೨೧. ಉತ್ಕಂಡ, ಉಪಳೇಶ್ವರ

**೩. ಕಾರವಾರ ತಾಲೂಕು**

೧. ಕಾಳ್ನಿ
೨. ಕಾಮರಗಾಂವ
೩. ಕೊಟೆ
೪. ಗೋಪಸಿಟ್ಟಾ
೫. ಗೋಯರ
೬. ಬರ್ಗಿ
೭. ಬಾರಗದ್ದಾ
೮. ಬಿಚೋಲಿ
೯. ಭೀಮಖೊಲ
೧೦. ಘಾಟೆ
೧೧. ಮರಕಣಿ
೧೨. ಮಿರಾಶಿವಾಡಾ

೧೩. ಮೈಗಿನಿ

೧೪. ಲಾಂಡೆ

೧೫. ಹಪಕರರ್ಣಿ

೧೬. ಪಾತ್ರೆ

೧೭. ಹೊಪ್

**೪. ಅಂಕೋಲಾ ತಾಲೂಕು**

೧. ಕೈಗಡಿ

೨. ಕೋಟೆಪಾಲ್

೩. ಕಾರಗದ್ದೆ

೪. ಅಡಿಕೆಪಾಲು, ಸಿದ್ನಾಡ

**೨.೪ ಕುಣಬಿಯರ ಪೌರಾಣಿಕ ಮತ್ತು ಐತಿಹಾಸಿಕ ಹಿನ್ನಲೆ**

**ಕುಣಬಿಯರ ಮೂಲ**

ಕುರ್ಮಿ ಅಥವಾ ಕುಣಬಿ ಒಂದು ಕೃಷಿ ಜೀವನ ನಡೆಸುವ ಜಾತಿ. ಈ ಜಾತಿಯ ಜನ ಭಾರತದ ಎಲ್ಲಾ ಕಡೆಗಳಲ್ಲಿ ನೆಲೆಸಿರುವರು.

ಕುಣಬಿ ಸಮುದಾಯದವರ ಮೂಲ ಜಾತಿಯ ಹೆಸರು ಕುರ್ಮಿ ಎಂದಿದ್ದು, ವೇದ ಕಾಲದಿಂದಲೂ ಇದು ಅಸ್ತಿತ್ವದಲ್ಲಿದೆ. 'ಋಗ್ವೇದದಲ್ಲಿ 'ಕುರ್ಮಿ' ಹೆಸರನ್ನು ಕೃಷಿಕ ಜಾತಿ ಎಂದು ಹೇಳಲಾಗಿದೆ'.[೧೨]

ಧೈರ್ಯವಂತರು ಮತ್ತು ವಿಶಿಷ್ಟ ವ್ಯಕ್ತಿತ್ವವುಳ್ಳ ಕುರ್ಮಿಯರು ಉಳಿದೆಲ್ಲ ಜನರಿಗೆ ಬೇಕಾದ ಆಹಾರ ಧಾನ್ಯಗಳನ್ನು ಉತ್ಪಾದಿಸುತ್ತಿದ್ದರು ಎಂದು ಹೇಳಲಾಗಿದೆ. ಕುರ್ಮಿಯರನ್ನು ವಿಧೇಯರು, ನಂಬಿಕೆಗೆ ಅರ್ಹರು, ಶಿಸ್ತುಳ್ಳವರು ಮತ್ತು ಹೊಗಳಿಕೆಗೆ ಅರ್ಹರು ಎಂದು ವರ್ಣಿಸಲಾಗಿದೆ.

ಮೇಲಿನ ಸಾಲುಗಳಿಂದ ಕುರ್ಮಿ ಜಾತಿಯವರು ವೇದ ಕಾಲದಿಂದ ಉಪಸ್ಥಿತರಿರುವರು ಎಂದು ತಿಳಿಯುತ್ತದೆ. ವರಾಹ ಮಿಹಿರ (Varah Mihir) ನು ತನ್ನ ಪುಸ್ತಕ 'ಬೃಹತ್ ಜಾತಕ' (Brahjjatak) ನಲ್ಲಿ, ಭಾರತದಲ್ಲಿ ನೆಲೆಸಿರುವ ಎಲ್ಲ ಜಾತಿ ಜನರ ಪಟ್ಟಿಯನ್ನು ನೀಡಿರುವನು. ಆತನ ಪ್ರಕಾರ ಕುರ್ಮಿ ಅಥವಾ ಕುಣಬಿಯರು ಮಧ್ಯ ಭಾರತದಲ್ಲಿ ಮತ್ತು ಉತ್ತರ ಭಾರತದಲ್ಲಿ ಪೂರ್ವದಿಂದಲೂ ನೆಲೆಸಿರುವರು ಮತ್ತು ಪುರಾತನ ಚರಿತ್ರೆಯಲ್ಲಿ 'ಕುರು' ಎಂದು ಕರೆಯಲ್ಪಟ್ಟಿರುವರು.

ಕುಣಬಿಯರ ಮೂಲ ಸಂಸ್ಕೃತದ ಹೆಸರು ಕುರ್ಮಿ–ಕುರು ಎಂದಿದ್ದು, ಆಯಾ ಪ್ರದೇಶಗಳ, ರಾಜ್ಯಗಳ ಭಾಷೆಗಳ ಪ್ರಭಾವದಿಂದ ಈ ಕೆಳಗಿನಂತೆ ಬದಲಾಗಿದೆ: ಕುರ್ಮಿ–ಕುಣಬಿ ಎಂದು ಹಿಂದಿ ಮತ್ತು ಬೆಂಗಾಲಿಯಲ್ಲಿ, ಕುಣಬಿ ಎಂದು ಮರಾಠಿಯಲ್ಲಿ, ಕಣಬಿ–ಕುಲಬಿ ಎಂದು ಗುಜರಾತಿನಲ್ಲಿ, ಕುರ್ಮಿ–ಕುಲ್ಮಿ ಎಂದು ಒರಿಸ್ಸಾದಲ್ಲಿ, ಕುಣಬಿ ಎಂದು ಕೊಂಕಣಿಯಲ್ಲಿ, ಕುರುಬಾನ್–ಕುರುಬಮ್–ಕುರುಬ್ ಎಂದು ತಮಿಳಿನಲ್ಲಿ, ಕುಡುಂಬಿ ಎಂದು ಮಲಯಾಳದಲ್ಲಿ,

ಕುರುಬಿ–ಕುರುಬ್–ಕುರುಬಾನ ಎಂದು ಕನ್ನಡದಲ್ಲಿ, ಕುರ್ಮಿ–ಕುಬಿ ಎಂದು ತೆಲುಗಿನಲ್ಲಿ, ಕುಮಾದಾರ ಎಂದು ಆಸ್ಸಾಮಿಯಲ್ಲಿ ಮತ್ತು ಕಾನ್ ಬುದಿ ಎಂದು ಮಣಿಪುರಿಯಲ್ಲಿ ಬದಲಾಗಿದೆ.

**ಕುಣಬಿಯರ ಪೌರಾಣಿಕ ಮತ್ತು ಐತಿಹಾಸಿಕ ಹಿನ್ನಲೆ**

ಕುರ್ಮಿ ಅಥವಾ ಕುಣಬಿಯರು ಸಾವಿರ ವರ್ಷಗಳ ಹಿಂದೆ ಆಳಿದ ಬಲಿರಾಜ ಎನ್ನುವ ಚಕ್ರವರ್ತಿಯ ವಂಶಜರೆಂದು ನಂಬಲಾಗಿದೆ'.[೧೩]

**ದೈತ್ಯವಂಶ** : ಪುರಾತನ ಭಾರತದಲ್ಲಿ ಮೊದಲ ಚಕ್ರವರ್ತಿ ಬಲಿ ಮಹಾರಾಜನು. ಈತನ ಹುಟ್ಟಿದ ದಿನವನ್ನು ಎಲ್ಲ ಕುರ್ಮಿಯರು ಸಂಭ್ರಮದಿಂದ ಆಚರಿಸುವರು, ಈ ಶುಭ ದಿನವನ್ನೇ ದೀಪಾವಳಿ ಎಂದು ಕರೆಯುವರು. ದನಗಳನ್ನು ಮತ್ತು ನೇಗಿಲನ್ನು ಬಳಸಿ ಕೃಷಿಯನ್ನು ಪ್ರಾರಂಭಿಸಿದ ಮೊಟ್ಟಮೊದಲ ವ್ಯಕ್ತಿಯೇ ಬಲಿರಾಜನೆಂದು ಹೇಳಲಾಗಿದೆ. ಕಾರಣ ದೀಪಾವಳಿಯ ಮರುದಿನವನ್ನು ಕುಣಬಿಯರು ಬಲಿಪ್ರತಿಪಡಾ–ಪಡವಾ (Balipratipada Padwa) ಅಥವಾ ದನಗಳ ಪೂಜೆಯ ದಿನ ಎಂದು ಆಚರಿಸುವರು.

ಬಲಿರಾಜನು ವೇದ ಕಾಲದಲ್ಲಿ ಹೆಸರುವಾಸಿಯಾದ ದೈತ್ಯ ವಂಶದಲ್ಲಿ ಜನಸಿದನು. ದೈತ್ಯ ವಂಶದ ಪ್ರಾರಂಭಕ್ಕೆ ಕಾರಣಕರ್ತರು 'ಋಷಿ ಕಶ್ಯಪ್' (Rushi Kashyap)ರು. ಕಾರಣ ಕುಣಬಿಯರು ತಾವು ದೈತ್ಯ ವಂಶಜರೆಂದು ಹೇಳಿಕೊಳ್ಳುವರು'.[೧೪]

**ರಘುವಂಶ** : 'ಗುಜರಾತಿನ ಕುಣಬಿಯರು ರಾಮನ ಮಕ್ಕಳಾದ ಲವ–ಕುಶರ ವಂಶಜರೆಂದು, ಬಾಂಬೆ ಗೆಜೆಟೀಯರ್‌ನಲ್ಲಿ Vol. 9, Part-1, ೧೮೮೯, ನಮೂದಿಸಲಾಗಿದೆ. ಈಗ ಅವರ ವಂಶಜರನ್ನು ಲಾವಸ್ (Lawas) ಕುಣಬಿಯರು ಮತ್ತು ಕಾಡವಾಸ (Kadavas) ಕುಣಬಿಯರೆಂದು ಗುಜರಾತಿನಲ್ಲಿ ಕರೆಯುವರು'.[೧೫]

**ರಾಷ್ಟ್ರಕೂಟರು** : ಡಾ. ಎಸ್.ವಿ. ಕೇತಕರ ರವರು, 'ಇಂದಿನ ಕುಣಬಿಯರು ರಾಷ್ಟ್ರಕೂಟರ ವಂಶಜರು ಎಂದು ಈ ರೀತಿಯಾಗಿ ವಿವರಿಸುವರು. ಹಸ್ತಿನಾಪುರದ ರಾಜ್ಯಪಾಲರು, ಪಂಜಾಬಿನ ಅರಸರು, ಸೌರಾಷ್ಟ್ರದ ಸುರಾತರು ಮತ್ತು ಬರೋಕ್‌ದ ಭರೂರಕರು, ಇವೆಲ್ಲಾ ಅಲ್ಲಿಯ ಪ್ರದೇಶಗಳಿಗನುಗುಣಸಾರವಾಗಿ ರಾಷ್ಟ್ರಕೂಟರ ಅಥವಾ ರಟ್ಟರ ವಂಶಜರು'[೧೬] ಎಂದು ಹೇಳಿರುವರು.

**ಗೌಡ ಅಥವಾ ಗಾವಡಾ**

'ಗೋವಾ ಹಾಗೂ ಕರ್ನಾಟಕಗಳು ಸೇರಿದಂತೆ ಮಧ್ಯ ಭಾರತದಲ್ಲಿ ಕುರ್ಮಿ ಅಥವಾ ಕುಣಬಿಯರನ್ನು ವಿವಿಧ ಹೆಸರುಗಳಾದ ಗಾಡ್–ಗೌಡ–ಗಾವಡಾ ಎಂದು ಕರೆಯುವರು. ಕುಣಬಿಯರು ಬಹುಕಾಲ ನೆಲೆಸಿದ್ದ ಮತ್ತು ಸಾಗಿಬಂದ ವಿವಿಧ ಸ್ಥಳಗಳಾದ ಕೃಷಿ ನದಿ ದಡದ

ಸಮತಟ್ಟಾದ ಪ್ರದೇಶ, ಉತ್ತರ ಮತ್ತು ದಕ್ಷಿಣ ಭಾರತದ ಪ್ರದೇಶಗಳು, ಗಂಗಾ ನದಿಯ ಸಮತಟ್ಟು ಪ್ರದೇಶ ಮತ್ತು ಪೂರ್ವ ಭಾರತದಿಂದ, ಗೌಡ ಮತ್ತು ಗಾವಡಾ ಎನ್ನುವ ಶಬ್ದಗಳು ಬಂದಿರಬಹುದು ಎಂದು ಹೇಳಲಾಗಿದೆ'.[೧೭]

ಮಧ್ಯ ಭಾರತದಲ್ಲಿ ಗೌಡರು ೧೫ನೇ ಶತಮಾನದಿಂದ ೧೭ನೇ ಶತಮಾನದ ವರೆಗೆ ರಾಜ್ಯಭಾರ ಮಾಡಿದರು. ರಾಮಗಡದ ರಾಜ-ರಾಜಗೌಡನ ರಾಣಿ ದುರ್ಗಾವತಿ ಹೆಸರುವಾಸಿಯಾದ ಶೂರ ರಾಣಿಯಾಗಿದ್ದಳು. ಬ್ರಿಟಿಷರ ವಿರುದ್ಧದ ಮೊದಲ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈ ರಾಣಿಯು ಯುದ್ಧದಲ್ಲಿ ವೀರಗತಿ ಹೊಂದಿದಳು (೧೮೫೭). ತಮ್ಮ ಆರ್ಥಿಕ ದುರ್ಗತಿಗಳಿಂದಾಗಿ ಗಾವಡಾದ ವಂಶಜರು ಇಂದು ಹಿಂದುಳಿದ ಸಮುದಾಯದವರೆಂದು ಕರೆಸಿಕೊಳ್ಳುತ್ತಿರುವರು.

**ಕುಣಬಿಯರ ಐತಿಹಾಸಿಕ ಹಿನ್ನೆಲೆ**

ಒಂದು ಕಾಲದಲ್ಲಿ ಬುಡಕಟ್ಟು ಎಂದು ಗುರುತಿಸಲ್ಪಟ್ಟಿದ್ದರೂ, ಅದರಿಂದ ಇಂದು ವಂಚಿತರಾದ ಸಮುದಾಯವೇ ಕುಣಬಿಯರು. ಆಧುನಿಕತೆಗೆ ಮುಕ್ತವಾಗಿ ತೆರೆದುಕೊಳ್ಳದೆ, ತಮ್ಮ ಮೂಲ ಸಂಸ್ಕೃತಿಯನ್ನು ಇನ್ನೂ ಉಳಿಸಿಕೊಂಡಿರುವ ಕುಣಬಿಯರನ್ನು ಭಾರತದ ಸ್ವಾತಂತ್ರ್ಯ ನಂತರದ ಕೆಲ ಕಾಲದವರೆಗೂ ಬುಡಕಟ್ಟಿನ ಪಟ್ಟಿಯಲ್ಲಿ ಸೇರಿಸಲಾಗಿತ್ತು. ಆದರೆ ಈ ಸಮುದಾಯ ಏಕವ್ಯಕ್ತಿಯ ಪ್ರತಿಷ್ಠೆಯ ಕಾರಣಕ್ಕೆ ಬುಡಕಟ್ಟಿನ ಸವಲತ್ತುಗಳಿಂದ ವಂಚಿತವಾಗಿದೆ.

ಪ್ರಾಚೀನ ಮಾನವ ತನ್ನ ನೆಲೆಯನ್ನು ಬಿಟ್ಟು ಬೇರೆ ಬೇರೆ ಕಡೆಗೆ ವಲಸೆ ಹೋಗುವುದು ಸಹಜವಾಗಿತ್ತು. ಗೋವಾದಿಂದ ವಲಸೆ ಬಂದು ಉತ್ತರ ಕನ್ನಡದ ಕಾಡು ಪ್ರದೇಶಗಳಲ್ಲಿ ನೆಲೆ ನಿಂತಿರುವವರೇ ಗೋವಾ ಕುಣಬಿಯರು. ಆದರೆ ಕುಣಬಿಯರು ಗೋವಾದಿಂದ ವಲಸೆ ಬಂದಿರುವುದಕ್ಕೆ ಕಾರಣ ಅವರ ಸಂಸ್ಕೃತಿಯ ಮೇಲೆ ವಿದೇಶೀ ಸಂಸ್ಕೃತಿಯೊಂದು ದಾಳಿ ಮಾಡಿದ್ದು. ಈ ಐತಿಹಾಸಿಕ ಘಟನೆಯನ್ನು ಕುಣಬಿಯರು ತಮ್ಮದೇ ಪುರಾಣದ ಮೂಲಕ ಹೇಳುವರು. ಈ ಪುರಾಣಕ್ಕೂ ಹಿಂದೂಗಳ ಪುರಾಣದ ನಂಬಿಕೆಗೂ ಸಾಮ್ಯತೆ ಇರುವುದು ಸ್ಪಷ್ಟವಾಗಿದೆ.

'ಕುಣಬಿಯರನ್ನು ಹಲವು ವಿದ್ವಾಂಸರು ಬೇಟೆ ಮತ್ತು ಆಹಾರ ಸಂಗ್ರಹಣೆಯ ಅಲೆಮಾರಿ ಬುಡಕಟ್ಟು ಎಂದು ಗುರುತಿಸಿದ್ದಾರೆ. ಕುಣಬಿಯರ ವಲಸೆಯ ಚಾರಿತ್ರಿಕ ಸಂದರ್ಭವನ್ನು ಗಮನಿಸಿದರೆ ಈ ಅಭಿಪ್ರಾಯವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಯಾಕೆಂದರೆ ತುಳುನಾಡಿನ ಕುಣಬಿಯರಲ್ಲಿ ಗೋವಾ ಕುಣಬಿ, ಕೋಡಿಯಾಲ ಕುಣಬಿ ಮತ್ತು ಜೋಗಿ ಕುಣಬಿಯರೆಂದು ಮೂರು ಪ್ರಧಾನ ಒಳಪಂಗಡಗಳನ್ನು ಗುರುತಿಸಿದರು. ಅವುಗಳ ಕೌಟುಂಬಿಕ ಒಳರಚನೆ,

ಆರಾಧನೆ, ಆಚರಣೆ, ಭಾಷೆಗಳಲ್ಲಿ ಮಹತ್ತರವಾದ ಯಾವುದೇ ಬದಲಾವಣೆ ಕಂಡು ಬಂದಿರುವುದಿಲ್ಲ'.[೧೮]

ವಲಸೆ ಬಂದು ಬೇರೆ ಬೇರೆ ಕಡೆಗಳಲ್ಲಿ ನೆಲೆ ನಿಂತ ಕಾರಣಕ್ಕೆ ಮತ್ತು ಸ್ಥಳೀಯ ಧಾರ್ಮಿಕ ಪಂಥಗಳ ಪ್ರೇರಣೆಗೆ ಒಳಗಾದ ಕಾರಣಕ್ಕೆ ಈ ಒಳಪಂಗಡಗಳು ಹುಟ್ಟಿಕೊಂಡಿದ್ದು, ಪ್ರಾಚೀನ ಕಾಲದಲ್ಲಿ ಸಾರಿಗೆ ಸಂಪರ್ಕದ ಕೊರತೆ, ಪ್ರಾದೇಶಿಕ ರಾಜರ ಆಳ್ವಿಕೆ ಮತ್ತು ಭೌಗೋಳಿಕ ಲಕ್ಷಣಗಳು ಬೇರೆ ಬೇರೆ ಕಡೆ ನೆಲೆ ನಿಂತ ಕುಣಬಿಯರನ್ನು ಒಂದಾಗಿಸುವಲ್ಲಿ ತೊಡಕಾಗಿದ್ದವು. ಈ ಕಾರಣದಿಂದ ಅವರಲ್ಲಿ ಒಳಪಂಗಡಗಳು ಬೆಳೆದುಕೊಂಡು ಬಂದವು. ಇಂಥ ತೊಡಕುಗಳು ಉತ್ತರ ಕನ್ನಡದ ಅನೇಕ ಪಂಗಡಗಳಲ್ಲಿ ಆಗಿರುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ.

ಇಂಡೊ-ಆರ್ಯನ್ ಭಾಷಾ ಸಮುದಾಯಕ್ಕೆ ಸೇರುವ ಕೊಂಕಣಿ, ಕುಣಬಿಯರ ಮಾತೃಭಾಷೆ. ಕಾಡಿನಲ್ಲಿ ನೆಲೆನಿಂತ ಕುಣಬಿಯರ ಭಾಷೆಯ ಮೇಲೆ ಯಾವುದೇ ಬದಲಾವಣೆ ಆಗಿರುವುದಿಲ್ಲ ಎಂದು ಹೇಳಲಾಗಿದೆ. ಇನ್ನಿತರ ಕಡೆಗಳಲ್ಲಿ ನೆಲೆನಿಂತ ಕುಣಬಿಯರ ಭಾಷೆಯ ಮೇಲೆ ಮರಾಠಿ ಭಾಷೆಯ ಪ್ರಭಾವ ಬೀರಿದೆ. ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಕನ್ನಡ ಭಾಷೆಯ ಪ್ರಭಾವವನ್ನು ಅಲ್ಲಲ್ಲಿ ಗುರುತಿಸಲಾಗಿದೆ. ತಮ್ಮ ಮೂಲ ವೃತ್ತಿಯನ್ನೇ ಆಧರಿಸಿ ಇಂದಿಗೂ ಬದುಕು ಸಾಗಿಸುವರು. ಆಧುನಿಕ ಜಗತ್ತಿಗೆ ತಮ್ಮನ್ನು ಇನ್ನೂ ಮುಕ್ತವಾಗಿ ತೆರೆದುಕೊಂಡಿಲ್ಲವೆಂದೇ ಹೇಳಬೇಕು.

'ಕುಣಬಿಯರು ಹದಿನಾರನೇಯ ಶತಮಾನದಲ್ಲಿ ಗೋವಾದಿಂದ ವಲಸೆ ಬಂದು ನಾಲ್ಕು ಶತಮಾನಗಳಿಂದ ಬದುಕುತ್ತಾ ಬಂದವರು. ಐತಿಹಾಸಿಕವಾಗಿ ಕುಣಬಿಯರು ಗೋವಾದಿಂದ ಸುಮಾರು ೧೫೧೦ಳ ರಿಂದ ೧೫೪೯ ರ ಕಾಲದಲ್ಲಿ, ಪೋರ್ಚುಗೀಸರು ಗೋವಾವನ್ನು ಆಕ್ರಮಿಸಿಕೊಂಡ ಕಾಲದಲ್ಲಿ ಪೋರ್ಚುಗೀಸರ ದಬ್ಬಾಳಿಕೆಗೆ ಹೆದರಿ ಬೇರೆ ಬೇರೆ ಕಡೆಗೆ ವಲಸೆ ಬಂದವರು ಎಂದು ಹೇಳಲಾಗಿದೆ. ಹಾಗೂ ಪೋರ್ಚುಗೀಸರ ಬಲಾತ್ಕಾರದ ಮತಾಂತರವೂ ವಲಸೆ ಬರಲು ಮುಖ್ಯ ಕಾರಣವಾಯಿತು ಎನ್ನಲಾಗುತ್ತದೆ. ಮತಾಂತರಕ್ಕೆ ಒಪ್ಪದಿದ್ದಾಗ ಪೋರ್ಚುಗೀಸರು ಕುಣಬಿ ದೇವಸ್ಥಾನವನ್ನು ಧ್ವಂಸ ಮಾಡಿ, ಮೂರ್ತಿಯನ್ನು ಸಮುದ್ರಕ್ಕೆ ಎಸೆದರೆಂದು ಕುಣಬಿಗಳು ತಮ್ಮ ವಲಸೆಯ ಹಿನ್ನೆಲೆಯನ್ನು ತೆರೆದಿಡುತ್ತಾರೆ'.[೧೯]

ಕಾಡು ಮಾರ್ಗವಾಗಿ ಬಂದ ಕುಣಬಿಗಳು ಮೊದಲು ಬದುಕಿಗಾಗಿ ಕಾಡನ್ನೇ ಅವಲಂಬಿಸಿದ್ದರು. ಕಾಡು ಕೋಳಿ, ಕಾಡು ಕುರಿ, ಕಾಡು ಹಂದಿಯನ್ನು ಸೆರೆ ಹಿಡಿಯುತ್ತಾರೆ. ನದಿ, ಕೆರೆಗಳಲ್ಲಿ ಮೀನು ಹಿಡಿಯುತ್ತಾರೆ. ಅಕ್ಕಿ ಅವರ ಮುಖ್ಯವಾದ ಆಹಾರ. ಅದರ ಜೊತೆಗೆ ಮೀನು, ಮಾಂಸ, ತರಕಾರಿಗಳನ್ನು ಸೇವಿಸುತ್ತಾರೆ. ಅವರು ದನಕರುಗಳನ್ನು ಸಾಕುತ್ತಾರೆ. ಆದರೆ ಅವುಗಳ

ಉತ್ಪನ್ನಗಳನ್ನು (ಹಾಲು) ಆಹಾರದಲ್ಲಿ ಉಪಯೋಗಿಸುವುದಿಲ್ಲ. ನೂಲೆ ಗೆಣಸು, ಕವಲೆ ಗೆಣಸು, ಕೆಸುವಿನ ಗಡ್ಡೆ, ಹೆಜ್ಜೇನು, ತುಡುವೆ ಜೇನು, ನಸರಿ ಜೇನುಗಳ ತುಪ್ಪ ಸಂಗ್ರಹಿಸುವುದು, ಹುಡುಕಾಟಗಳ ಮೂಲಕ ಆಹಾರ ದೊರಕಿಸಿಕೊಳ್ಳುತ್ತಿದ್ದರು. ಒಂದು ಬಗೆಯಲ್ಲಿ ಅಲೆಮಾರಿ ಸಮುದಾಯದ ಬದುಕೇ ಅವರದಾಗಿತ್ತು.

ಸಾಮಾನ್ಯವಾಗಿ ನೀರಿನ ಆಶ್ರಯ ಇರುವ ಕಡೆಗಳಲ್ಲಿ ಕುಣಬಿಯರ ಮನೆಗಳು ಕಟ್ಟಿರುವುದು ಕಂಡುಬರುತ್ತದೆ. ಕಾಡಿನ ಪಕ್ಕಕ್ಕೆ ಸ್ವಲ್ಪ ಏರು ಪ್ರದೇಶಗಳಲ್ಲಿ ಇವರ ಮನೆಗಳಿರುತ್ತವೆ. ಇವರ ಮನೆಗಳು ಬಿಡಿ ಬಿಡಿಯಾಗಿರದೆ ಗುಂಪು ಗುಂಪಾಗಿರುತ್ತವೆ. ಸಾಮಾನ್ಯವಾಗಿ ಇವರ ಮನೆಗಳಿಗೆ ಮಣ್ಣಿನ ಗೋಡೆ, ಮುಳ್ಳು ಹುಲ್ಲಿನ ಚಾವಣಿ, ಇಂದು ಕೆಲವರು ಮನೆಗಳಿಗೆ ಮಂಗಳೂರು ಹಂಚು ಹಾಕುತ್ತಿದ್ದಾರೆ. ಕುಣಬಿಯರ ಮನೆಗಳು ನಾಲ್ಕು ಅಂಕಣದವು. ನಡುವೆ ಅಂಗಳ, ಅಂಗಳದ ನಡುವೆ ತುಳಸಿಕಟ್ಟೆ, ಒಳ ಮನೆಯಲ್ಲಿ ಅಡುಗೆ ಮನೆ ಮತ್ತು ಊಟದ ಮನೆಯೆಂದು ಎರಡು ವಿಭಾಗಗಳಿರುತ್ತವೆ.

ಅವರೇ ಹೇಳುವ ಹಾಗೆ;

'ಕುಣಬಿ' ಪದದ ಅರ್ಥ ಹೀಗಿದೆ:

ಕುಳಬಿ – ಪೂರ್ವ ಜನರು

ಬೀ – ಬೀಜದ ಹುಟ್ಟಿಗೆ ಕಾರಣರಾದವರು'.[೨೦]

ಕುಣಬಿ ಸಮುದಾಯದವರು ಮೊದ ಮೊದಲು ಬೆಟ್ಟ, ಗುಡ್ಡಗಳ, ಮರ–ಗಿಡ ಪೊದೆಗಳನ್ನು ಸವರಿ ಸುಟ್ಟು ಗದ್ದೆ ಮಾಡಿ ಬೀಜ ಹಾಕುತ್ತಿದ್ದರು. ಮಳೆ ಬಿದ್ದಾಗ ಬೆಳೆ ಬರುತ್ತಿತ್ತು. ಮುಂದೆ ಅಲ್ಲಿ ಬೆಳೆ ಬಾರದೆ ಹೋದಾಗ ಇನ್ನೊಂದು ನೆಲೆಯನ್ನು ಹುಡುಕಿಕೊಂಡು ಹೋಗುವುದು ಈ ಸಮುದಾಯದ ಹಳೆಯ ಪದ್ಧತಿ ಆಗಿದ್ದಿತು.

ಈ ಪದ್ಧತಿಯಿಂದ ಮೊದಲಿಗೆ 'ಕುಣಗಿ' ಇದ್ದ ಹೆಸರು ಕ್ರಮೇಣ 'ಕುಣಬಿ' ಆಯಿತು ಎನ್ನಲಾಗಿದೆ.

ಇನ್ನೊಂದು ದಂತಕಥೆಯ ಪ್ರಕಾರ ಪೋರ್ಚುಗೀಸರ ಬಲಾತ್ಕಾರದ ಮತಾಂತರಕ್ಕೆ ಹೆದರಿ ಇವರೇ ತಮ್ಮ ದೇವರನ್ನು ಸಮುದ್ರಕ್ಕೆ ಎಸೆದು ಓಡಿ ಬಂದರೆಂದು ಹೇಳಲಾಗಿದೆ.

ವಲಸೆಗೆ ಕುಣಬಿಯರ ಹಿರಿಯರನ್ನು ಈ ಕುರಿತು ಕೇಳಿದಾಗ ಅವರು ಹೇಳುವುದಿಷ್ಟು;

'ತಮ್ಮ ಮೂಲ ನೆಲೆಯಾದ ಗೋವಾದಲ್ಲಿ ಆಂಗ್ಲರು ಬಲಾತ್ಕಾರದಿಂದ ದನದ ಮಾಂಸವನ್ನು ತಿನ್ನಿಸುತ್ತಿದ್ದರು, ಇದರಿಂದ ಹೆದರಿದ ಕುಣಬಿಯರು ತಮ್ಮ ಕುಲದೈವದ ಸಹಾಯದಿಂದ ಸಮುದ್ರ ಮಾರ್ಗವಾಗಿ ಹೊರಟು ಬೇರೆ ಬೇರೆ ಕಡೆ ನೆಲೆ ನಿಂತವರೆ ಕುಣಬಿಯರು.'[೨೧]

'The name has various forms in Bombay Gazetteer being Kunabi or Kulambi in the Deccan, Kulwadi in the South Konkan, Kanbi in Gujarat and Kulbi in Belgaum. In Sanskrit inscriptions it is given as kutumbika (householder) and hence it has been derived from Kutumba, a family.'[೨೨]

ಹೀಗೆ ಕುಣಬಿಯರ ಕುರಿತು ಥರ್‌ಸ್ಟನ್ ರವರು ತಮ್ಮ 'ದಿ ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯ' ಗ್ರಂಥದಲ್ಲಿ ಈ ಮೇಲಿನಂತೆ ಹೇಳಿದ್ದಾರೆ. ಕುಣಬಿಯರು ವೈವಿಧ್ಯಮಯವಾಗಿ ಕರೆಯಲ್ಪಡುವುದನ್ನು ಬಾಂಬೆ ಗೆಝೆಟಿಯರ್ ವರದಿ ಮಾಡಿರುವುದನ್ನು ಕಾಣಬಹುದು. Stophen Fuchs ರವರು ಕುಣಬಿಯರನ್ನು 'ಬೇಟೆ, ಆಹಾರ ಸಂಗ್ರಹಣೆಯ ಅಲೆಮಾರಿ ಬುಡಕಟ್ಟು' ಎಂದು ಗುರುತಿಸಿದ್ದಾರೆ.

'ಕುಣಬಿಯರ ವಲಸೆಗೆ ಪೋರ್ಚುಗೀಸರೇ ಕಾರಣ ಎನ್ನುತ್ತಾರೆ. ಈ ಕುಣಬಿಯರಲ್ಲಿ (ತುಳುನಾಡು), ಗೋವಾ ಕುಣಬಿ, ಕೊಡಿಯಾಲ ಕುಣಬಿ, ಜೋಗಿ ಕುಣಬಿಯರೆಂದು ಮೂರು ಪ್ರಧಾನ ಒಳಪಂಗಡಗಳನ್ನು ಗುರುತಿಸಿದ್ದಾರೆ. ಅವುಗಳ ಕೌಟುಂಬಿಕ ಒಳರಚನೆ, ಸ್ಥಳೀಯ, ಧಾರ್ಮಿಕ ಪಂಥಗಳ ಪ್ರೇರಣೆಗೆ ಒಳಗಾದ ಕಾರಣಕ್ಕೆ ಒಳಪಂಗಡಗಳು ಹುಟ್ಟಿಕೊಂಡಿವೆ'.[೨೧]

ಇಂಡೋ-ಆರ್ಯನ್ ಭಾಷಾ ಸಮುದಾಯಕ್ಕೆ ಸೇರುವ ಕುಣಬಿಯರ ಮಾತೃಭಾಷೆ ಕೊಂಕಣಿ. ಕಾಡಿನಲ್ಲಿ ನೆಲೆನಿಂತ ಕುಣಬಿಯರ ಭಾಷೆಯಲ್ಲಿ ಯಾವುದೇ ಬದಲಾವಣೆ ಆಗಿರುವುದಿಲ್ಲ. ಇನ್ನಿತರ ಕಡೆಗಳಲ್ಲಿ ನೆಲೆನಿಂತ ಕುಣಬಿಯರ ಭಾಷೆಯ ಮೇಲೆ ಇತರ ಭಾಷೆಗಳ ಪ್ರಭಾವ ಬೀರಿದ್ದು, ಕುಣಬಿಯರು ತಮ್ಮ ಮಾತೃಭಾಷೆಯಲ್ಲದೇ, ಕುಂದಾಪುರ ಮುಂತಾದ ಪ್ರದೇಶಗಳಲ್ಲಿ ಕನ್ನಡ-ತುಳು, ಕನ್ನಡ-ಮರಾಠಿ ಭಾಷೆಗಳನ್ನು ಬಲ್ಲವರಾಗಿದ್ದಾರೆ. ತಮ್ಮ ಸಮುದಾಯದ ವ್ಯವಹಾರಗಳಲ್ಲಿ ತಮ್ಮ ಮಾತೃಭಾಷೆಯನ್ನೂ, ಹೊರ ವ್ಯವಹಾರಗಳಲ್ಲಿ ಹವ್ಯಕರ ಕನ್ನಡ ಬಳಸುವ ಉದಾಹರಣೆಗಳೂ ಉಂಟು. ಕರ್ನಾಟಕದಲ್ಲಿ ಕುಣಬಿಯರು ಉಡುಪಿ ತಾಲೂಕು, ಕುಂದಾಪುರ ತಾಲೂಕು, ಅಂಕೋಲಾ ತಾಲೂಕು, ಯಲ್ಲಾಪುರ ತಾಲೂಕು, ಜೋಯಿಡಾ (ಸುಪಾ) ತಾಲೂಕು, ಕಾರವಾರ ತಾಲೂಕು, ರಾಮನಗರ ತಾಲೂಕು, ಬೆಳಗಾವಿ ಜಿಲ್ಲಾ ಖಾನಾಪುರ ತಾಲೂಕುಗಳಲ್ಲಿ ಮಾತ್ರ ಕಂಡು ಬರುತ್ತಾರೆ.

## ೨.೫ ಭಾರತದ ವಿವಿಧ ರಾಜ್ಯಗಳ ಕುಣಬಿಯರ ಅವಲೋಕನ

**ಪುಣೆ :** ಪುಣೆಯ ಸುತ್ತಮುತ್ತ ಸುಮಾರು ೭೦ ಸಾವಿರ ಕುಣಬಿ ಕುಟುಂಬಗಳು, ಸುಮಾರು ೨ ಲಕ್ಷ ಮತದಾರರು ವಾಸಿಸುತ್ತಿರುವರು. ಸುಮಾರು ೩ ಲಕ್ಷ ಕುಣಬಿಯರು ಬೇರೆ ಸ್ಥಳಗಳಿಂದ ಪುಣೆಗೆ ವಲಸೆ ಬಂದವರಾಗಿದ್ದು, ಅವರಲ್ಲಿ ೯೫% ಜನರು ಪುಣೆಯ ಕೊಳಚೆ

ಪ್ರದೇಶಗಳಲ್ಲಿ ವಾಸವಾಗಿರುವರು. ಈ ಕುಣಬಿಯರು ಜೀವನದ ಅವಶ್ಯಕತೆಗಳಾದ ಆಹಾರ, ವಸತಿ, ಶಿಕ್ಷಣ, ಆರೋಗ್ಯ ಮುಂತಾದವುಗಳಿಂದ ವಂಚಿತರಾಗಿರುವರು. ೯೫% ಜನರು ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವರು.

**ಮುಖ್ಯ ಕಸುಬುಗಳೆಂದರೆ :** ಪೇಂಟ್ ಮಾಡುವುದು, ತೋಟಗಾರಿಕೆ, ಮನೆಗಳ ಮತ್ತು ಕಟ್ಟಡಗಳ ಸೆಂಟ್ರಿಂಗ್ ಮಾಡುವುದು, ಸ್ವಚ್ಛತಾಕಾರ್ಯಗಳನ್ನು ಮಾಡುವುದು, ವಾಹನಗಳ ಚಾಲಕರಾಗಿ ದುಡಿಯುವುದು, ಮುಂತಾದವು. ಲಕ್ಷಾಂತರ ಕುಣಬಿಯರು ಶಿಕ್ಷಣದಿಂದ ವಂಚಿತರಾಗಿರುವರು. ಅಜ್ಞಾನದಿಂದಾಗಿ ಇಂದು ಕುಣಬಿಯರು ತಮ್ಮ ದಿನನಿತ್ಯದ ಜೀವನದಲ್ಲಿ ಎಷ್ಟೋ ಕಷ್ಟಗಳನ್ನು ಅನುಭವಿಸುತ್ತಿರುವರು. ಉನ್ನತ ಮಟ್ಟದಲ್ಲಿರುವರು, ಅಧಿಕಾರದಲ್ಲಿರುವವರು, ಕುಣಬಿಯರನ್ನು ಕಾಲ್ಕೆಳಗಿನ ಕಲ್ಲಿನಂತೆ ಬಳಸಿಕೊಳ್ಳುತ್ತಿರುವರು. ಶಿಕ್ಷಣದ ಅಭಾವದಿಂದಾಗಿ ಮತ್ತು ಒಗ್ಗಟ್ಟಿನ ಅಭಾವದಿಂದಾಗಿ, ತಮಗೆ ಸರಿಯಾದ ರೀತಿಯಲ್ಲಿ ಅಧಿಕಾರ ಮತ್ತು ಆಡಳಿತದಲ್ಲಿ ಪಾಲುಗಾರಿಕೆ ದೊರೆತಿಲ್ಲವೆಂಬ ಅಂಶವನ್ನು ಮನಗಂಡಿರುವರು. ಎಲ್ಲರೂ ಒಗ್ಗಟ್ಟಾಗಿ, ತಮ್ಮ ಕುಣಬಿ ಸಮುದಾಯದ ಹಕ್ಕುಗಳಿಗಾಗಿ ಹೋರಾಡುತ್ತಿರುವರು. ಇವರು ತಮ್ಮದೇ ಆದ ಕುಣಬಿ ಕೋ-ಆಪರೇಟಿವ್ ಬ್ಯಾಂಕನ್ನು ೮೦ ವರ್ಷಗಳ ಹಿಂದೆಯೇ ಪ್ರಾರಂಭಿಸಿರುವರು. ಇಂದು ಇದರ ವಿವಿಧ ಬ್ರ್ಯಾಂಚ್‌ಗಳು ಮುಂಬೈ ಮತ್ತು ಪುಣೆಯಲ್ಲಿ ತಮ್ಮ ಕೆಲಸ ನಿರ್ವಹಿಸುತ್ತಿವೆ.

**ಗೋವಾ :** 'ಭಾರತದ ಕುಣಬಿಯರು ತಮ್ಮದೇ ಆದಂತಹ ಗುರುತಿಸಲ್ಪಡುವಂತಹ, ವಿಶಿಷ್ಟವಾದ ಇತಿಹಾಸವನ್ನು, ಗುರುತರವಾದ ಸಂಸ್ಕೃತಿಯನ್ನು ಮತ್ತು ವಿಶಿಷ್ಟ ಪರಂಪರೆಯನ್ನು ಹೊಂದಿರುವರು. ಗೋವಾ ಕುಣಬಿಯರು, ತಾವು ದೈತ್ಯ ರಾಜ ಬಲಿರಾಜನ ವಂಶಜರೆಂದು ನಂಬಿರುವರು'.[೨೩] ದೈತ್ಯ ಬಲಿ ರಾಜನು ಅವರ ಕುಲಪುರುಷ. ಪ್ರತಿವರ್ಷ ಬಲಿರಾಜನ ಹುಟ್ಟು ಹಬ್ಬವನ್ನಾಗಿ ದೀಪಾವಳಿಯನ್ನು ಪುರಾತನ ಕಾಲದಿಂದಲೂ ಆಚರಿಸುತ್ತಾ ಬಂದಿರುವರು. ಇಂದಿಗೂ ಗೋವಾ ಕುಣಬಿಯರು ದೀಪಾವಳಿಯನ್ನು ಹೊಸ ವರ್ಷದ ದಿನವನ್ನಾಗಿ ಆಚರಿಸುವರು. ದೀಪಾವಳಿಯಂದು ಅತಿ ಸಂಭ್ರಮದಿಂದ, ಗುಂಪು ನೃತ್ಯಗಳನ್ನು ಮಾಡುತ್ತಾ ಕುಣಬಿ ಹೆಂಗಳೆಯರು ರಾತ್ರಿಯೆಲ್ಲಾ ಹಾಡಿ ಕುಣಿದು ಆಚರಿಸುವರು. ಈ ನೃತ್ಯವನ್ನು ಧಿಲ್ಲೋ ಎಂದು ಕರೆಯುವರು. ಬಲಿರಾಜನ ಹೆಸರಿನಲ್ಲಿ ಆಚರಿಸುವ 'ಗುಡುಲೊ' ಎನ್ನುವ ಈ ಹಬ್ಬವನ್ನು ಕುಣಬಿಯರು ಮಾತ್ರ ಆಚರಿಸುವರು. ಅದೇನೇ ಇರಲಿ, ಗೋವಾದಲ್ಲಿ ಕುಣಬಿಯರ ಇಂದಿನ ಅಂತಸ್ತನ್ನು ಬರೀ ಚರಿತ್ರೆಯ ಅವಲೋಕನದಿಂದ, ಸಂಸ್ಕೃತಿ ಅವಲೋಕನದಿಂದ ಪರಿಗಣಿಸಲಾಗದು. ಸಮಾಜದ ಸಮಗ್ರ ಬೆಳವಣಿಗೆಯನ್ನು ಉದಾಹರಣೆಗೆ: ಶಿಕ್ಷಣ, ಉದ್ಯೋಗ,

ರಾಜಕೀಯ ಮತ್ತು ಆರ್ಥಿಕ ಬೆಳವಣಿಗೆಗಳನ್ನು ಗಣನೆಗೆ ತೆಗೆದುಕೊಂಡು ಒಂದು ಜಾತಿಯ ಅಂತಸ್ತನ್ನು ನಿಖರ ಪಡಿಸಲಾಗುತ್ತದೆ.

ಗೋವಾ ಕುಣಬಿಯರು, ಬೇರೆ ಪಂಗಡಗಳಿಗೆ ಹೋಲಿಸಿದಾಗ ಎಲ್ಲಾ ಸಾಮಾಜಿಕ ರಂಗಗಳಲ್ಲಿ ಸಾಧಿಸಿಲ್ಲವೆಂದು ಹೇಳಬಹುದು. ಇದಕ್ಕೆ ಮುಖ್ಯ ಕಾರಣ ಅವರು ಶೈಕ್ಷಣಿಕವಾಗಿ ಹಿಂದುಳಿದಿರುವುದು ಮತ್ತು ಆರ್ಥಿಕವಾಗಿ ಹಿಂದುಳಿದಿರುವುದು ಮತ್ತು ನಿರುದ್ಯೋಗಿಗಳಾಗಿರುವುದು.

**ಒರಿಸ್ಸಾ :** 'ಕುಣಬಿಯರಲ್ಲಿ ಸುಮಾರು ೧೫೦೦ ವಿವಿಧ ಉಪಜಾತಿಗಳಿವೆ. ದಕ್ಷಿಣ ಒರಿಸ್ಸಾದಲ್ಲಿ ಇವರನ್ನು ಕುರ್ಮಾ ಮತ್ತು ಭಾಸಾ ಎಂದು ಕರೆಯುವರು. ಕುಲುಮಿ ಮತ್ತು ಕುಡುಮಿ ಎಂದು ಚೋಟಾ ನಾಗಪೂರ್ ಪ್ರದೇಶದಲ್ಲಿ, ಎಂದರೆ ಜಾರ್ಖಂಡ್ ಮತ್ತು ಉತ್ತರ ಒರಿಸ್ಸಾದಲ್ಲಿ ಕರೆಯುವರು. ಕುರ್ಮಿ ಅಥವಾ ಕುಣಬಿಯರು ಕೃಷಿ ಜಾತಿಗೆ ಸೇರಿದ ಬಹು ದೊಡ್ಡ ಜಾತಿ ಎಂದು ಉತ್ತರ ಭಾರತದಲ್ಲಿ, ಚೋಟಾ ನಾಗಪೂರ್ ಮತ್ತು ಒರಿಸ್ಸಾಗಳಲ್ಲಿ ಪರಿಗಣಿಸಲಾಗಿದೆ'.[೨೪]

ಡಾಲ್ಟನ್ನನು ಕುಣಬಿಯರ ಬಗ್ಗೆ ಈ ಕೆಳಗಿನಂತೆ ಅಭಿಪ್ರಾಯಪಟ್ಟಿರುವನು.

ಕುಣಬಿಯರು ಮುಖ್ಯವಾಗಿ ಎರಡು ಬೇರೆ ಬೇರೆ ಪಂಗಡಗಳಲ್ಲಿ ಹುಟ್ಟಿರುವರು, ಮೊದಲನೆಯದು ಆರ್ಯನ್ನರು ಮತ್ತು ಎರಡನೆಯದಾಗಿ ದ್ರಾವಿಡಿಯನ್ನರು.

ಪೂರ್ತಿಯಾಗಿ ಆರ್ಯನ್ನರಿದ್ದು, ಎಲ್ಲೋ ದ್ರಾವಿಡಿಯನ್ನರ ಜೊತೆ ಲೈಂಗಿಕ ಸಂಬಂಧಗಳಿಂದ ಹುಟ್ಟಿದವರಿರಬೇಕು. ಪೂರ್ತಿಯಾಗಿ ದ್ರಾವಿಡಿಯನ್ನರಿದ್ದು, ಎಲ್ಲೋ ಆರ್ಯನ್ನರ ಜೊತೆ ಲೈಂಗಿಕ ಸಂಬಂಧಗಳಿಂದ ಹುಟ್ಟಿದವರಿರಬೇಕು.

ಧನಂಜಯ ಮೊಹಾಂತೋ ಎನ್ನುವ, ಕುರ್ಮಿ ಜಾತಿಗೆ ಸೇರಿದ ಲೇಖಕರೊಬ್ಬರು 'ಭಾರತೀಯ ಜಾತಿ ತತ್ವ ಓ ಕುಡುಮಿ ಜಾತಿ' ಎನ್ನುವ ತಮ್ಮ ಪುಸ್ತಕದಲ್ಲಿ (ಓರಿಯಾ) ಕುಣಬಿಯರ ಜಾತಿಯ ಬಗ್ಗೆ, ಅಸ್ಪೃಶ್ಯತೆಯ ಬಗ್ಗೆ ಮತ್ತು ಬುಡಕಟ್ಟಿನ ಬಗ್ಗೆ ವಿವರವಾಗಿ ವಿವರಿಸಿರುವರು.

**ಮುಂಬೈ :** 'ಆರ್ಥಿಕ ರಾಜಧಾನಿ ಎಂದು ಕರೆಸಿಕೊಳ್ಳುವ ಮುಂಬೈಯಲ್ಲಿ ಕುಣಬಿಯರು ಹಿಂದಿನಿಂದಲೂ ತಮ್ಮ ನೆಲೆಯನ್ನು ಕಂಡುಕೊಂಡಿರುವರು. ಕುಣಬಿಯರು ತಮ್ಮದೇ ಆದ ಭತ್ತ ಬೆಳೆಯುವ ಕೃಷಿ ಪ್ರದೇಶಗಳನ್ನು ಮತ್ತು 'ಅಗರ್' ಎಂದು ಕರೆಯಲ್ಪಡುವ ಉಪ್ಪಿನ ಕೊಳಗಳನ್ನು ಹೊಂದಿರುವರು. ಮುಂಬೈಯಲ್ಲಿ ಕುಣಬಿಯರನ್ನು ಅವರು ನೆಲೆಸಿರುವ ನಡುಗಡ್ಡೆಗಳ ಹೆಸರಿನ ಮೇಲೆ ಗುರುತಿಸುವರು. ಉದಾಹರಣೆಗೆ: ಟಿಲೋರ್ ಕುಣಬಿಯರು, ಕಿಲಾಮ್ ಕುಣಬಿಯರು, ಸೂರತ್ ಕುಣಬಿಯರು, ಅಗಾರಿ ಕುಣಬಿಯರು ಮುಂತಾದವರು'.[೨೫]

ಮುಂಬೈನಲ್ಲಿಯ ಕುಣಬಿಯರ ಪೂರ್ವಜರು ಕೊಂಕಣ ಪ್ರಾಂತ್ಯದಿಂದ ಬಂದವರು, ಅವರ ಮೂಲ ಉದ್ಯೋಗವೇ ಕೃಷಿ. ಕೃಷಿ ಉತ್ಪನ್ನಗಳ ಮೇಲೆಯೇ ಅವರು ತಮ್ಮ ನಿತ್ಯ

ಜೀವನವನ್ನು ಅವಲಂಬಿಸಿದ್ದರು. ನಂತರ ಉನ್ನತ ಜಾತಿ ಜನರಿಂದ ಮೋಸಕ್ಕೊಳಗಾದ ಕುಣಬಿಯರು, ತಮ್ಮ ಸ್ವಂತ ಭೂಮಿಗಳನ್ನು ಕಳೆದುಕೊಂಡು, ತಮ್ಮ ಕೃಷಿ ಭೂಮಿಯಲ್ಲಿಯೇ ಆಳಾಗಿ ದುಡಿಯುವ ಪರಿಸ್ಥಿತಿ ಬಂದಿತು.

ಮುಂಬೈ ಮತ್ತು ಕೊಂಕಣ ಕುಣಬಿಯರಲ್ಲಿ ಜಾಗೃತಿಯನ್ನು ಮೂಡಿಸಲು, ದಿವಂಗತ ಗುಣಜಿ ಮಾಲಿ ಮತ್ತು ಸ್ನೇಹಿತರು, 'ಕುಣಬಿ ಉದಯ' ಎನ್ನುವ ಮಾಸಿಕ ಪತ್ರಿಕೆಯನ್ನು ೧೯೩೩ರಲ್ಲಿ ಪ್ರಾರಂಭಿಸಿದರು.

ದಿವಂಗತ ಅಣ್ಣಾಸಾಹೇಬ್ ಅಲಿಯಾಸ್ ಶ್ಯಾಮ ರಾವ್ ಪೇಜೆ ಯವರು ಕುಣಬಿ ಸಮಾಜದ ಹೆಸರಾಂತ ಹಾಗೂ ಪ್ರಮುಖ ಮುಖಂಡರು. ಕುಣಬಿ ಸಮಾಜವನ್ನು ೪೦ ವರ್ಷಗಳ ದೀರ್ಘ ಕಾಲದವರೆಗೆ, ರಾಜಕೀಯ ರಂಗದಲ್ಲಿಯೂ ಮತ್ತು ಸಾಮಾಜಿಕ ರಂಗದಲ್ಲಿಯೂ ಮುನ್ನಡೆಸಿದರು. ರತ್ನಗಿರಿ ಜಿಲ್ಲೆಯಿಂದ ನಾಲ್ಕು ಸಲ ಎಮ್.ಎಲ್.ಎ. ಯಾಗಿಯೂ ಮತ್ತು ಒಂದು ಸಲ ಎಮ್.ಪಿ. ಯಾಗಿಯೂ ಆಯ್ಕೆಯಾಗಿದ್ದರು. ಕುಣಬಿ ಸಮಾಜದವರ ಉನ್ನತಿಗಾಗಿ, ತಮ್ಮ ಸಹೋದ್ಯೋಗಿಗಳೊಡಗೂಡಿ ಅಣ್ಣಾಸಾಹೇಬರು 'ಶ್ಯಾಮರಾವ್ ಪೇಜೆ ಮೆಮೋರಿಯಲ್ ಟ್ರಸ್ಟ್' ಎನ್ನುವ ಟ್ರಸ್ಟನ್ನು ೧೯೬೩ರಲ್ಲಿ ಸ್ಥಾಪಿಸಿದರು.

ದಿವಂಗತ ಲಕ್ಷ್ಮೀಬಾಯಿ ಬಾಬಜಿ ಭುವದ್ ಎನ್ನುವ ಮಹಿಳಾ ಎಮ್.ಎಲ್.ಎ. ಸಂಘಮೇಶ್ವರ ತಾಲೂಕಿನಿಂದ, ೧೯೮೭ ಮತ್ತು ೧೯೯೨ ರಲ್ಲಿ ಎರಡು ಸಲ ಲೆಜಿಸ್ಲೇಟಿವ್ ಅಸೆಂಬ್ಲಿಯ ಸದಸ್ಯರಾಗಿ ಆಯ್ಕೆಯಾಗಿದ್ದರು. ಅವರು ಉತ್ತಮ ಮುತ್ಸದ್ಧಿಯಾಗಿದ್ದು, ಕುಣಬಿ ಪಂಗಡದವರ ಉನ್ನತಿಗಾಗಿ, ಪ್ರತ್ಯೇಕವಾಗಿ ಶೈಕ್ಷಣಿಕ ರಂಗದಲ್ಲಿ ಬಹಳ ಶ್ರಮಿಸಿದರು.

ಈ ರೀತಿಯಾಗಿ ಅನೇಕ ರಾಜಕೀಯ ಮುಖಂಡರು, ಪಂಚಾಯತ್ ಸದಸ್ಯರು ಮತ್ತು ಜಿಲ್ಲಾ ಪಂಚಾಯತ್ ಸದಸ್ಯರು, ಇಂದು ಕುಣಬಿ ಸಮಾಜಕ್ಕೆ ಸೇರಿದವರಾಗಿದ್ದು, ತಮ್ಮ ಸಮಾಜದ ಎಲ್ಲಾ ರಂಗಗಳ ಅಭಿವೃದ್ಧಿಗೆ ಶ್ರಮಿಸುತ್ತಿರುವರು.

**ನಾಗಪುರ :** ನಾಗಪುರದಲ್ಲಿ ಇಂದು ಕುಣಬಿ ಜಾತಿಯವರನ್ನು ಬಹುಜನ ಸಮಾಜ ಎಂದು ಗುರುತಿಸುತ್ತಿರುವರು. ಹಿಂದಿನ ಕಾಲದಲ್ಲಿ ಕುಣಬಿ ಒಂದು ಜಾತಿಯಾಗಿರದೆ, ಒಂದು ಅಲೆದಾಡುವ ಜನರ ಗುಂಪಾಗಿತ್ತು. ಈ ಜನರು ಬರೀ ಕೃಷಿ ಕೆಲಸಗಳಲ್ಲಿಯೇ ತಮ್ಮನ್ನು ತೊಡಗಿಸಿಕೊಂಡಿರುವುದರಿಂದ, ಅವರನ್ನು ಕುಣಬಿಯರು ಎಂದು ಕರೆದರು.

**ಕೇರಳ :** ತಮ್ಮ ಪೂರ್ವಜರು ಗೋವಾದಿಂದ ವಲಸೆ ಬಂದು ಕೇರಳದಲ್ಲಿ ನೆಲೆಸಿರುವರೆಂದು, ಕೇರಳದ ಕುಣಬಿಯರು ನಂಬಿರುವರು. ೧೬ನೇ ಶತಮಾನದ ಅಂತ್ಯ ಭಾಗದಲ್ಲಿ ಪೋರ್ಚುಗೀಸರ ಕೈಯಿಂದ ತಪ್ಪಿಸಿಕೊಳ್ಳಲು ಕುಡುಮಿಯರು ಕೇರಳಕ್ಕೆ ಬಂದರು. ಅವರ ಜೊತೆ

ಸಹಪ್ರಯಾಣಿಕರಾಗಿ ಸಮುದ್ರದ ಪ್ರಯಾಣದಲ್ಲಿ ಗೌಡಸಾರಸ್ವತ ಬ್ರಾಹ್ಮಣರು ಸಹ ಬಂದರು. ಕಾರಣ ಕೇರಳದಲ್ಲಿ ಈ ಇಬ್ಬರೂ ಸಮುದಾಯದವರು ಒಂದೇ ಕಡೆಯಲ್ಲಿ ನೆಲೆಸಿರುವರು.

ಕೇರಳದ ಕುಣಬಿಯರು ಶತಮಾನಗಳಿಂದಲೂ ಕೊಂಕಣಿ ಭಾಷೆಯನ್ನು ತಮ್ಮ ಮಾತೃ ಭಾಷೆಯನ್ನಾಗಿಸಿಕೊಂಡಿರುವರು. ಸಮುದ್ರ ದಡದ ಗುಂಟ ಇರುವ ಮೂರು ಜಿಲ್ಲೆಗಳಾದ ಎರ್ನಾಕುಲಮ್, ಅಲಾಪುಜಾ ಮತ್ತು ತ್ರಿಶೂರ್‌ಗಳಲ್ಲಿ ೮೦% ನಷ್ಟು ಕುಣಬಿಯರು (೨.೫ ಲಕ್ಷ) ನೆಲೆಸಿರುವರು. ಉಳಿದವರು ಚದುರಿಹೋಗಿ ಕೊಲ್ಲಮ್, ತಿರುವನಂತಪುರಮ್ ಮತ್ತು ಕೋಜಿಕೋಡೆ ಜಿಲ್ಲೆಗಳಲ್ಲಿ ನೆಲೆಸಿರುವರು. ಮೀನುಗಾರಿಕೆ ಮತ್ತು ಭತ್ತ ಬೆಳೆಯುವುದು ಇವರ ಮುಖ್ಯ ಕಸುಬುಗಳಾಗಿವೆ.

ಕೇರಳ ಕುಡುಮಿಯರ ಸಾಮಾನ್ಯ ಆರ್ಥಿಕ ಪರಿಸ್ಥಿತಿಯು ಬಹಳ ಬಡವಾಗಿದೆ. ಮೊದಲ ದರ್ಜೆಯ ಮತ್ತು ಎರಡನೇ ದರ್ಜೆಯ ಸರಕಾರಿ ನೌಕರರು, ಎಂಜಿನೀಯರರು ಸಿಗುವುದು ಬಹಳ ವಿರಳ. ಕೇರಳದಲ್ಲಿ ಸರಾಸರಿ ವಿದ್ಯಾರ್ಹತೆಯನ್ನು ಪಡೆದಿರುವವರ ಸಂಖ್ಯೆ ೯೦%, ಆದರೆ ಕುಡುಮಿಯರ ಸರಾಸರಿ ಶೈಕ್ಷಣಿಕ ಮಟ್ಟ ಕೇವಲ ೩೦% ಆಗಿದೆ. ಅವರ ವಾರ್ಷಿಕ ಆದಾಯವೂ ಸಹ ಬಹಳ ಕಡಿಮೆ ಇದೆ. ಸರಕಾರದಿಂದ ಸಿಗುತ್ತಿರುವ ಅಭಿವೃದ್ಧಿ ಸಹಾಯಗಳನ್ನು ಮತ್ತು ಅವಕಾಶಗಳನ್ನು ಅವರು ತಿಳುವಳಿಕೆಯಿಲ್ಲದೆಯೋ ಅಥವಾ ನಿರ್ಲಕ್ಷದಿಂದಲೋ ಕಳೆದುಕೊಳ್ಳುತ್ತಿರುವರು.

ಇಂದು ಕುಣಬಿಯರು ದೇಶದ ಎಲ್ಲಾ ಕಡೆಯಲ್ಲೂ ಹರಡಿರುವರು. ಅಲ್ಲಿಯ ಭಾಷೆ ಮತ್ತು ಪ್ರದೇಶಗಳಿಗೆ ಅನುಗುಣವಾಗಿ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಿಕೊಂಡಿರುವರು. Pratapsing Velip Kankar ರವರು ತಮ್ಮ 'The Kurmis-Kunbis of India' ಎಂಬ ಗ್ರಂಥದಲ್ಲಿ ರಾಜ್ಯವಾರು ಕುಣಬಿಯ ವಿವಿಧ ಹೆಸರುಗಳು ಕೆಳಗಿನಂತಿವೆ:

**ಕೋಷ್ಟಕ–೨.೫**

ರಾಜ್ಯವಾರು ಕುಣಬಿಯರ ವಿವಿಧ ಹೆಸರುಗಳು

| | |
|---|---|
| ಆಂಧ್ರ ಪ್ರದೇಶ | – ಕುಡುಂಬನ್ ಮತ್ತು ರೆಡ್ಡಿ |
| ಅಸ್ಸಾಮ್ | – ಆಹಿರ್, ಘೋಷ್, ಕುರ್ಮಿ ಮತ್ತು ಕಮಾಧರ್ |
| ಬೀಹಾರ್ | – ಕುರ್ಮಿ, ಯಾದವ್ ಮತ್ತು ಆಹಿರ್ |
| ಗುಜರಾತ್ | – ಆಹಿರ್, ಯಾದವ್, ಪಟೇಲ್, ಠಾಕೂರ್, ಲೇವಾ ಮತ್ತು ಪಟಿದಾರ |
| ಹರಿಯಾಣ | – ಆಹಿರ್, ಯಾದವ್ ಮತ್ತು ಗುಜ್ಜರ್ |
| ಹಿಮಾಚಲ ಪ್ರದೇಶ | – ಗೋವಲ, ಆಹಿರ್, ಯಾದವ್, ಗುಜ್ಜರ್ ಮತ್ತು ಕುರ್ಮಿ |
| ಕರ್ನಾಟಕ | – ಯಾದವ್, ಗೌಡ, ಕುಲ್ವಾಡಿ, ಕುಣಬಿ, ಕುಡಬಿ ಮತ್ತು ಒಕ್ಕಲಿಗ |

| | |
|---|---|
| ಕೇರಳ | – ಗಂಜಾಮ್, ರೆಡ್ಡಿ, ಕುಡುಂಬಿ ಮತ್ತು ಒಕ್ಕಲಿಗ |
| ಮಧ್ಯಪ್ರದೇಶ | – ಕುಂಬಿ, ಕುರ್ಮಿ, ಕುಣಬಿ, ಆಹಿರ್ ಮತ್ತು ವಾಡ್‌ಜುಜ್ಜರ್ |
| ಮಹಾರಾಷ್ಟ್ರ | – ಕುಣಬಿ, ಮರಾಠಾ ಮತ್ತು ಆಹಿರ್ |
| ಮಣಿಪುರ | – ಆಹಿರ್, ಯಾದವ್ ಮತ್ತು ಕಣ್‌ಬುಡಿ |
| ಮೆಘಾಲಯ | – ಘೋಷ ಮತ್ತು ಯಾದವ್ |
| ಒರಿಸ್ಸಾ | – ಕುಂಡುಬಿ, ಕುನ್‌ಬುಮ್‌ಬಾಯಿ, ಕುಡುಮಿ, ಕುಲ್ಮಿ ಮತ್ತು ಕುರ್ಮಿ |
| ಪಂಜಾಬ್ | – ಯಾದವಂಶಿ, ಆಹಿರ್, ಗ್ವಾಲ್ ಮತ್ತು ಗುಜ್ಜರ್ |
| ರಾಜಸ್ಥಾನ | – ಅದಮ್, ಆಹಿರ್ ಮತ್ತು ಗುಜ್ಜರ್ |
| ತಮಿಳುನಾಡು | – ಒಡಿಯರ್, ಕುಡುಂಬೋ, ಕುರಾಂಬಾ ಮತ್ತು ಗೌಡ |
| ತ್ರಿಪುರಾ | – ಭೂಮಿಜಿ, ಯಾದವ್, ಕೋಮರ್ ಮತ್ತು ಕುರ್ಮಿ |
| ಉತ್ತರ ಪ್ರದೇಶ | – ಆಹಿರ್, ಘೋಷ, ಯಾದವ್, ಕುರ್ಮಿ ಮತ್ತು ಗುಜ್ಜರ್ |
| ವೆಸ್ಟ್ ಬೆಂಗಾಲ್ | – ಆಹಿರ್, ಗ್ವಾಲ್, ಯಾದವ್, ಕುರ್ಮಿ ಮತ್ತು ಥಕಾರ್ |
| ಗೋವಾ | – ಕುಣಬಿ |

ಇವಷ್ಟೇ ಅಲ್ಲದೆ ಕುಣಬಿಯರನ್ನು ತಮ್ಮ ಒಳಪಂಗಡ ಹೆಸರುಗಳಿಂದಲೂ ಸಂಬೋಧಿಸುವರು'.[೨೬]

### ೨.೬ ಕುಣಬಿಯರ ವಲಸೆ

ಕುಣಬಿಗಳನ್ನು ಕುರಿತು ಲಭ್ಯವಿರುವ ಮಾಹಿತಿ ಪ್ರಕಾರ ಸುಮಾರು ೪೦೦ ವರ್ಷಗಳ ಹಿಂದೆ ಕುಣಬಿಗಳು ಗೋವೆಯಿಂದ ವಲಸೆ ಬಂದಿದ್ದಾರೆ. (ಸುಮಾರು ಕ್ರಿ.ಶ. ೧೬ನೇ ಶತಮಾನ). ಕುಡುಬಿಗಳಂತೆಯೇ, ಇನ್ನೂ ಕೆಲವು ಸಮುದಾಯಗಳು ವಿವಿಧ ಕಾರಣಗಳಿಂದಾಗಿ ಗೋವಾ ಹಾಗೂ ಆಸುಪಾಸಿನ ಪ್ರದೇಶಗಳಿಂದ ೧೫ ಹಾಗೂ ೧೬ನೇ ಶತಮಾನದ ನಡುವೆ ವಲಸೆ ಬಂದರು. ಜೆರೋಮ್ ಸಾಲ್ಡಾನಾರವರ ಅಭಿಪ್ರಾಯದಲ್ಲಿ ೧೫೧೦ರಲ್ಲಿ ಬ್ರಾಹ್ಮಣರು ಮತ್ತು ಇತರ ಹಿಂದೂ ಸಮುದಾಯಗಳು ಬಹುಸಂಖ್ಯೆಯಲ್ಲಿ ಗೋವೆಯನ್ನು ತ್ಯಜಿಸಿ ಕೆನರಾದಲ್ಲಿ ನೆಲೆ ನಿಂತರು (೧೯೩೮:೩೪).

ಆ್ಯಟೋನಿಯೋ ಮಸ್ಕರಾನ್ಹೆಸ್‌ರು ಹೇಳುವಂತೆ ಕುಣಬಿಗಳು ಮುಂಡಾ ಎಸ್ಟ್ರಾಡ ಕುಲಕ್ಕೆ ಸೇರಿದವರಾಗಿದ್ದಾರೆ (೧೯೭೦:೨೦). ಗೋವಾ ಗೆಜೆಟೀಯರ್‌ನಲ್ಲಿ ತಿಳಿಸಿದಂತೆ ಅವರು ಗೋವೆಯ ಮೂಲನಿವಾಸಿಗಳು. (ಆ್ಯಂಟೋನಿಯೋ ಮಸ್ಕರನ್ಹೆಸ್‌ರಿಂದ ಉಲ್ಲೇಖಿತ). ಸ್ಟೀಫನ್ ಫಕ್ಸ‌ರ ಪ್ರಕಾರ ಕುಣಬಿಗಳು ಆಹಾರ ಕಲೆಹಾಕುವ ಮತ್ತು ಬೇಟೆಯಾಡುವ ದಕ್ಷಿಣ ಭಾರತದ

ಒಂದು ಬುಡಕಟ್ಟು ಸಮುದಾಯ (೧೯೭೩:೨೪೬). ಕುಣಬಿಗಳನ್ನು ಕುರಿತಾದ ನಿಖರವಾದ ಮಾನವಶಾಸ್ತ್ರೀಯ ದಾಖಲೆಗಳು, ಸಾಕ್ಷ್ಯಾಧಾರಗಳು ದೊರಕುವದು ಕಠಿಣವಾದದ್ದರಿಂದ, ಕುಡುಬಿಗಳ ಕುಲ-ಲಕ್ಷಣಗಳನ್ನು ಕಂಡುಹಿಡಿಯುವದು ಕಠಿಣವಾಗಿದೆ.

'೧೬ನೇ ಶತಮಾನದಲ್ಲಿ ಪೋರ್ಚುಗೀಸರು ಎಸಗಿದ ದಬ್ಬಾಳಿಕೆ ಮತ್ತು ಮತಾಂತರವೇ ಕುಣಬಿಗಳು ಉತ್ತರ ಕನ್ನಡ ಜಿಲ್ಲೆಗೆ ವಲಸೆ ಬರಲು ಒತ್ತಾಯಿಸಿದ ಅಂಶಗಳಲ್ಲಿ ಬಹು ಮುಖ್ಯವಾದ ಅಂಶವಾಗಿದೆ. ಪೋರ್ಚುಗೀಸರು ಗೋವೆಯನ್ನು ವಶಪಡಿಸಿಕೊಂಡಾಗ ಕುಣಬಿಗಳಲ್ಲಿ ಅಧಿಕಾಂಶ ಜನರು ಕಾಯಮ್ಮಾಗಿ ಗೋವೆಯನ್ನು ತೊರೆದರು. ಥರ್ಸ್ಟನ್‌ರು (೧೯೦೯-೧೯೯೯) ಈ ಮಾತನ್ನು ಒಪ್ಪುತ್ತಾರೆ. ಮತಾಂತರವನ್ನು ತಪ್ಪಿಸಿಕೊಳ್ಳಲಾರದವರು ಬಲತ್ಕಾರಕ್ಕೊಳಗಾಗಿ ಪೋರ್ಚುಗೀಸರಿಂದ ಮತಾಂತರಗೊಳಿಸಲ್ಪಟ್ಟರು. ಪರಿಣಾಮವಾಗಿ, ಇಂದು ಗೋವೆಯಲ್ಲಿ ಕ್ರಿಶ್ಚಿಯನ್ ಧರ್ಮವನ್ನು ಅಂಗೀಕರಿಸಿದ ಕುಣಬಿಗಳು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಆಲಿವಿನೊ ಜೊಫ್ ಗೋಮ್ಸ್ ಅವರ ಅಭಿಪ್ರಾಯದಲ್ಲಿ ಗೋವೆಯ ಮೂಲನಿವಾಸಿಗಳನ್ನು 'ಗಾವಡಿ' ಎಂದು ಕರೆಯುತ್ತಾರೆ. ಮೂಲನಿವಾಸಿಯಾದ 'ಗಾವಡಿ' ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿ 'ಕುನ್‌ಬಿ' ಎಂದು ಕರೆಯಿಸಿಕೊಂಡ (೧೯೮೭:೭೯) ಕುಣಬಿಗಳು ಕರ್ನಾಟಕದ ಕರಾವಳಿ ಮತ್ತು ಮಲಬಾರ ಪ್ರದೇಶಗಳಿಗೆ ಓಡಿ ಬಂದವರು ಕ್ರಿಶ್ಚಿಯನ್ ಧರ್ಮಕ್ಕೆ ಬಲಾತ್ಕಾರವಾಗಿ ಮತಾಂತರಗೊಳ್ಳುವ ಪ್ರಶ್ನೆಯೇ ಇರಲಿಲ್ಲ. ಕುಣಬಿಗಳಲ್ಲಿ ಅನೇಕ ಹಿರಿಯರು ಈ ಮಾತನ್ನು ಪುಷ್ಟೀಕರಿಸುತ್ತಾರೆ. ಈ ವಾದಕ್ಕೆ ಪ್ರತಿಯಾಗಿ ಕೆಲವರು ಆಹಾರ ಮತ್ತು ಇತರ ಆವಶ್ಯಕ ಸಾಮಗ್ರಿಗಳ ಕೊರತೆಯಿಂದಾಗಿ ಕುಣಬಿಗಳು ಗೋವೆಯನ್ನು ಬಿಟ್ಟು ಹೊರನಡೆದರೆಂದು ಹೇಳುತ್ತಾರೆ. ಏನೇ ಆಗಲಿ, ಶೋಚನೀಯ ಪರಿಸ್ಥಿತಿಯಿಂದಾಗಿ ಕುಣಬಿಗಳು ಗೋವೆಯನ್ನು ಬಿಟ್ಟರೆಂದು ಹೇಳಬಹುದು'.[೨೭]

'ಮಂಗಳೂರು, ಕಾರ್ಕಳ, ಬಂಟ್ವಾಳ ಪ್ರದೇಶಗಳಲ್ಲಿರುವ ಕುಡುಬಿಯೇತರ ಜನರು ಕುಡುಬಿಗಳನ್ನು 'ಕುಡುಂಬಿ'ಗಳೆಂದು ಕರೆಯುತ್ತಾರೆ. ಈ ಪ್ರದೇಶಗಳಲ್ಲಿಯ ತುಳು ಮಾತನಾಡುವ ಜನರು ಇವರನ್ನು 'ಕುಡುಂಬಿಲು' ಎಂದರೆ 'ಕುಡುಬಿ'ಗಳೆಂದು ಕರೆಯುತ್ತಾರೆ. ಕನ್ನಡ ಭಾಷೆಯನ್ನಾಡುವ ಕುಂದಾಪುರ ಮತ್ತು ಉಡುಪಿ, ಕಾರವಾರ, ಯಲ್ಲಾಪುರ, ಅಂಕೋಲಾ, ಜೋಯಿಡಾ, ಇವರನ್ನು 'ಕುಡುಂಬಿಯರು' ಅಥವಾ 'ಕುಣಬಿಯರ್' ಎಂದರೆ ಕುಡುಬಿ ಅಥವಾ ಕುಣಬಿಗಳು ಎಂದು ಕರೆಯುತ್ತಾರೆ. ಇಬ್ಬರು ತಮ್ಮ ಮಾತೃಭಾಷೆಯಲ್ಲಿ ಪರಸ್ಪರ ಸಂಭಾಷಿಸುವಾಗ ಒಬ್ಬರನ್ನೊಬ್ಬರು 'ಕುಡುಬಿ' ಅಥವಾ 'ಕುಣುಬಿ' ಎಂದು ಸಂಬೋಧಿಸುತ್ತಾರೆ. ಆಲಿವಿನ್ಹೊ ಜೆ. ಎಫ್. ಗೋಮ್ಸ್ (೧೯೮೭), ಜೆರೋಂ ಎ. ಸಾಲ್ಡಾನಾ (೧೯೩೦), ಆಯ್. ರೆಬೆಲ್ಲೊ, ಎಸ್.

ಎಸ್. ಪ್ರಭು, ಲುಸಿಯೋ ರಾಡ್ರಿಗ್ಸ (೧೯೬೫) ಮುಂತಾದ ಅನೇಕ ಕೊಂಕಣಿ ಮಾತನಾಡುವ ಲೇಖಕರು 'ಕುನ್‌ಬಿ' (Kunbi; Cunbi) ಮತ್ತು 'ಕುಡುಂಬಿ' ಎಂಬ ಶಬ್ದಗಳನ್ನು ಬಳಸುತ್ತಾರೆ. ಘುರ್ಯೆ (೧೯೭೯:೩೧) ಅವರ ಪ್ರಕಾರ 'ಕುನ್‌ಬಿ' ಎಂಬುದು ಬಹುಶಃ ಅವರ ಉದ್ಯೋಗ - ಒಕ್ಕಲುತನವನ್ನು ಸೂಚಿಸುತ್ತದೆ; ಬಹುಶಃ ಈ ಶಬ್ದವು ಬುಡಕಟ್ಟಿನ ಮೂಲದಿಂದ ಬಂದಿರಬಹುದು. ಜೆ.ಎಚ್. ಹಟನ್ (೧೯೮೦:೨೮೬) ರವರ ಅಭಿಪ್ರಾಯವೂ ಇದೇ ತರಹದ್ದಾಗಿದೆ'.[೨೮]

'ಆದರೆ, ಪಾಶ್ಚಾತ್ಯ ವಿದ್ವಾಂಸರು-ಸ್ಟರಾಕ್ (೧೮೮೪), ಥರ್ಸ್ಟನ್ (೧೯೦೯), ಸ್ಟೀಫನ್ ಫಕ್ಸ (೧೯೭೩) ಇವರನ್ನು 'ಕುಡುಬಿ' ಗಳೆಂದು ಕರೆಯುತ್ತಾರೆ. ಮುಂದೆ ಸರಕಾರದ ಅನೇಕ ವರದಿಗಳಲ್ಲಿ – ಉದಾಹರಣೆಗೆ: ಸೌತ ಕೆನರಾ ಗೆಜೆಟೀಯರ್ (೧೯೭೩), ಎಲ್.ಜಿ. ಹಾವನೂರ ವರದಿ (೧೯೭೫) – 'ಕುಡುಬಿ' ಎಂಬ ಶಬ್ಧವನ್ನೇ ಇಟ್ಟುಕೊಳ್ಳಲಾಯಿತು. ಕುಡುಬಿ ಅಥವಾ ಕುಣಬಿಗಳ ಮೂಲ ಒಂದೇ ಆಗಿದೆ. ಈ ಕಾರಣಕ್ಕಾಗಿಯೇ, ಪ್ರಸ್ತುತ ಅಧ್ಯಯನದಲ್ಲಿ ನಾನೂ ಕುಣಬಿ ಪದವನ್ನು ಬಳಸಿದ್ದೇನೆ'.[೨೯]

## ೨.೭ ಕರ್ನಾಟಕದ ಕುಣಬಿಯರು

ಕರ್ನಾಟಕದಲ್ಲಿ ಬಹು ಹೆಚ್ಚಿನ ಸಂಖ್ಯೆಯಲ್ಲಿ ಭೂಮಿಯನ್ನು ಉಳುವ ಸಮುದಾಯವೆಂದರೆ ಕುಣಬಿ/ಕುರ್ಮಿ. ಕುಡುಬಿ ಮತ್ತು ಕುಣಬಿಯರ ಮೂಲ ಒಂದೇ ಆಗಿರುತ್ತದೆ. ಆದರೆ ಕುಡುಬಿಯರು ಕರಾವಳಿ ಪ್ರದೇಶದಲ್ಲಿ ಮಲೆನಾಡುಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

ಈ ಜನವರ್ಗವಲ್ಲದೆ ಬುಡಕಟ್ಟು ಸಮುದಾಯದವರೆಂದೂ, ಗಿರಿಜನರೆಂದೂ ಗುರುತಿಸಲಾಗಿರುವ ಶ್ರಮ ಸಂಸ್ಕೃತಿಯನ್ನು ನೆಚ್ಚಿಕೊಂಡಿರುವ ಜನಸಮೂಹಗಳು ವಲಸೆ ಬಂದಿವೆ. ಕರ್ನಾಟಕ ಪ್ರಾಂತದಲ್ಲಿ ಹೇಳಲಾಗಿರುವ ಐವತ್ತಕ್ಕೂ ಹೆಚ್ಚು ಸಂಖ್ಯೆಯ ಬುಡಕಟ್ಟುಗಳಲ್ಲಿ ಇವೂ ಸೇರಿಕೊಂಡಿವೆ. ನವನಾಗರಿಕತೆಯಿಂದ ದೂರ ಉಳಿದ ಘಟ್ಟ ಪ್ರದೇಶದ ಹಳ್ಳಿಗಾಡುಗಳಲ್ಲಿ ನೆಲೆಸಿರುವ ಈ ಬುಡಕಟ್ಟು ಸಮುದಾಯಗಳು ಕರ್ನಾಟಕ್ಕೆ ಯಾವಾಗ? ಏಕೆ? ಹೇಗೆ? ಬಂದರೆಂಬ ಬಗ್ಗೆ ಖಚಿತವಾಗಿ ಆಧಾರಗಳಾಗಲಿ, ಅಭಿಪ್ರಾಯಗಳಾಗಲಿ ದೊರೆಯುವುದಿಲ್ಲ. ಬದಲಿಗೆ ಅನೇಕ ಕುತೂಹಲಕಾರಿ ಐತಿಹ್ಯಗಳು ಪ್ರಚಲಿತವಾಗಿವೆ. ಬರಗಾಲ ಬಂದದ್ದರಿಂದ ಬದುಕು ಹುಡುಕಿ ಬಂದರೆಂದೂ, ಸಿಡುಬು, ಪ್ಲೇಗ್ ರೋಗಗಳಿಗೆ ಹೆದರಿ ಬಂದರೆಂದೂ, ಮುಸ್ಲಿಮರೂ ದೇವಾಲಯಗಳ ಮೇಲೆ ದಾಳಿ ಮಾಡಿ ಅಟ್ಟಿದರೆಂದೂ, ಪೋರ್ಚುಗೀಸರು ನಡೆಸುತ್ತಿದ್ದ ಕಡ್ಡಾಯ ಮತಾಂತರದಿಂದ ಪಾರಾಗಲು ಓಡಿ ಬಂದರೆಂದೂ, ಯುದ್ಧದಲ್ಲಿ ರಾಜ ಸೋತಾಗ ಸೈನಿಕರಾಗಿದ್ದವರು ದಿಕ್ಕು ಕಾಣದೆ ತಲೆಮರೆಸಿಕೊಂಡು ಬಂದವರೆಂದೂ, ಶತ್ರುಗಳಿಂದ

ರಕ್ಷಣೆ ಕೋರಿ ರಾಜನೇ ಓಡಿ ಬಂದಾಗ ಅವನೊಂದಿಗೆ ಬಂದರೆಂದೂ ಹಲವಾರು ಊಹೆಗಳು ಹರಿದಾಡುತ್ತವೆ'.[೩೦]

'ಇಂಥ ಹಲವು ಒಳಪಂಗಡಗಳನ್ನು ಎರಡು ಮುಖ್ಯ ಪಂಗಡಗಳಾಗಿ ಗಮನಿಸಬಹುದೆನಿಸುತ್ತದೆ. ಒಂದು ಗುಂಪು ಶಿವಾಜಿ ಕಾಲದಲ್ಲಿ ಸೈನಿಕರಾಗಿದ್ದೋ, ಆಶ್ರಿತರಾಗಿದ್ದೋ ಒಡೆಯನ ಸೋಲಿನಿಂದ ದಿಕ್ಕು ಕಾಣದೆ ಶತ್ರುರಾಜರಿಂದ ತಲೆತಪ್ಪಿಸಿಕೊಂಡು ಸಾಂಗ್ಲಿ, ಸೊಲ್ಲಾಪುರ, ಪಂಡರಾಪುರ, ಸತಾರಾಗಳಿಂದ ಕರಾವಳಿಯ ಮಾರ್ಗವಾಗಿ ದಕ್ಷಿಣ ಕಡೆಗೆ ಬಂದವರೆಂದು ಇವರು ದಕ್ಷಿಣ ಕನ್ನಡ, ಕೊಡಗು ಜಿಲ್ಲೆ ಮತ್ತು ಅವುಗಳ ಸರಹದ್ದಿನಲ್ಲಿ ವ್ಯವಸಾಯ, ಕೂಲಿನಾಲಿ, ಮಾಡುತ್ತಾ ನೆಲೆ ನಿಂತರು. ಇವರನ್ನು ಮರಾಟಗಳೆಂದೂ, ಮರಾಠರೆಂದೂ, ಕರೆಯಲಾಗಿದೆ. ಇವರಲ್ಲಿ ಮರಾಟ ನಾಯಕರು, ದೇಶ ಮರಾಟ, ಕುಂಬ್ರಿ ಮರಾಟ, ಕುಣಬಿಗಳು ಮುಂತಾಗಿ ಒಳಪಂಗಡಗಳಿವೆ'.[೩೧]

ಇನ್ನೊಂದು ಮುಖ್ಯ ಪಂಗಡ ಗೋವಾದಿಂದ ಬಂದವರದ್ದು, ಸುಮಾರು ೧೫೦೪ರಿಂದ ೧೫೦೯ರ ಸಮಯದಲ್ಲಿ ಪೋರ್ಚುಗೀಸರ ಅಲ್ಬುಕರ್ಕನಿಂದ ದಬ್ಬಾಳಿಕೆ, ಬಲಾತ್ಕಾರದ ಮತಾಂತರಕ್ಕೊಳಗಾಗಬೇಕಾದ ಗಂಡಾಂತರ ಬಂತು. ಇದನ್ನು ಪ್ರತಿಭಟಿಸಿ ಅಲ್ಲಿಂದ ತಪ್ಪಿಸಿಕೊಂಡು ಕರಾವಳಿಗುಂಟ ದಕ್ಷಿಣ ಕನ್ನಡ, ಉಡುಪಿ ಹಾಗೂ ಉತ್ತರ ಕನ್ನಡ ಜಿಲ್ಲೆಗಳಿಗೆ ವಲಸೆ ಬಂದಿದ್ದಾರೆ. ಇವರು ಕರ್ನಾಟಕದ ಕಡಲ ತೀರದಲ್ಲಿ ತೋಳಾರ ರಾಜಮನೆತನದವರ ಆಶ್ರಯ ಪಡೆದರೆನ್ನಲಾಗಿದೆ. ಕೂಮಲ್ದಪುರದಲ್ಲಿ ನೆಲೆಸಿದ್ದ ಇವರಲ್ಲಿ ಕೆಲವರು ಘಟ್ಟದ ಮೇಲಿನ ಜಿಲ್ಲೆಗಳಿಗೆ ಸ್ಥಳಾಂತರಗೊಂಡಿದ್ದಾರೆ. ಇಲ್ಲಿ ಬಂದ ಮೇಲೆ ಗೋವೆ ಕುಡುಬಿ, ಕೋದಿಯಾಲ ಕುಡುಬಿ, ಅರೆ ಕುಡುಬಿ, ಜೋಗಿ ಕುಡುಬಿ ಮುಂತಾಗಿ ಏಳೆಂಟು ಪಂಗಡಗಳಾಗಿ ಒಡೆದುಕೊಂಡಿದ್ದಾರೆ. ಇವರದು ಕೃಷಿ, ಕೃಷಿ ಕಾರ್ಮಿಕ ವೃತ್ತಿಯ ಬಡತನದ ಬದುಕೇ ಆಗಿದೆ. ಇವರು ಮರಾಠಿಯೊಂದಿಗೆ ಕೊಂಕಣಿ ಭಾಷೆಯನ್ನೂ ಆಡುತ್ತಾರೆ. ಸ್ಥಳೀಯ ತುಳು, ಕನ್ನಡಗಳಿಗೂ ಹೊಂದಿಕೊಂಡಿದ್ದಾರೆ. ಮತಾಂತರದಿಂದ ಪಾರಾಗುವುದಕ್ಕಾಗಿಯೇ ಗೋವಾ ಮೂಲದವರಾದ ಗೌಡ ಸಾರಸ್ವತ ಸಮುದಾಯದ ಕೊಂಕಣಿಗರು ದಕ್ಷಿಣಕ್ಕೆ ವಲಸೆ ಬಂದು ಕರ್ನಾಟಕದ ಕರಾವಳಿಯ ಉದ್ದಕ್ಕೂ ಮತ್ತು ನಾಡಿನ ಎಲ್ಲೆಡೆಗಳಲ್ಲಿಯೂ ನೆಲೆಸಿದ್ದಾರೆಂಬುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ'.[೩೨]

ಮೇಲೆ ಹೇಳಿರುವ ಎರಡು ಮುಖ್ಯ ಗುಂಪುಗಳು ಅವುಗಳ ಒಳಪಂಗಡಗಳೂ ನೆಲೆಸಿರುವ ಕರಾವಳಿ ಮತ್ತು ಘಟ್ಟ ಪ್ರದೇಶದ ನಿರ್ಧಿಷ್ಟ ಸ್ಥಳಗಳೆಂದರೆ ಉತ್ತರ ಕನ್ನಡ ಜಿಲ್ಲೆಯ ಕಾರವಾರ, ಅಂಕೋಲ, ಕುಮಟಾ, ಭಟ್ಕಳ, ಹೊನ್ನಾವರ, ಶಿರಸಿ, ಯಲ್ಲಾಪುರ ಮತ್ತು

ಜೋಯಿಡಾ. ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಯ ಮಂಗಳೂರು, ಪುತ್ತೂರು, ಸುಳ್ಯ, ಉಡುಪಿ, ಕುಂದಾಪುರ, ಕಾರ್ಕಳ, ಕೊಡಗು ಜಿಲ್ಲೆ, ಬೆಳಗಾವಿ ಜಿಲ್ಲೆಯ ಖಾನಾಪುರ, ಶಿವಮೊಗ್ಗ ಜಿಲ್ಲೆಯ ಸಾಗರ, ಹೊಸನಗರ, ತೀರ್ಥಹಳ್ಳಿ, ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ, ಎನ್.ಆರ್.ಪುರ, ಶೃಂಗೇರಿ ಮತ್ತು ಮೂಡಗೆರೆ. ಇವರು ಮಲೆನಾಡು ಪ್ರದೇಶದ ಆಚೆಗೆ ಹೆಚ್ಚಾಗಿ ಹೋಗಿಲ್ಲವೆಂಬುದು ಗಮನಾರ್ಹ ಅಂಶವಾಗಿದೆ.

ಕಾರವಾರ ಜಿಲ್ಲೆಯ ಮತ್ತು ಮಂಗಳೂರು ಜಿಲ್ಲೆಯ ಕುಣಬಿಯರನ್ನು ಕೊಂಕಣಿ ಕುಣಬಿಯರು ಎಂದು ಕರೆಯುವರು. ಗೋವಾ ಕುಣಬಿಯರಲ್ಲಿ ಮತ್ತು ಕರ್ನಾಟಕದ ಕುಣಬಿಯರ ಸಂಸ್ಕೃತಿ, ಸಂಪ್ರದಾಯ ಮತ್ತು ದೇವರುಗಳಲ್ಲಿ, ಹೆಚ್ಚಿನ ವ್ಯತ್ಯಾಸಗಳನ್ನು ನಾವು ಕಾಣುವುದಿಲ್ಲ. ಕರ್ನಾಟಕದ ಎಷ್ಟೋ ಕುಣಬಿಯರು ಮೂಲತಃ ಗೋವಾದವರಿರುವರು. ಅದೇ ರೀತಿ ಗೋವಾದ ಅನೇಕ ಕುಣಬಿಯರು ಕರ್ನಾಟಕದವರಿರುವರು. ಗೋವಾ ಮತ್ತು ಕರ್ನಾಟಕದ ಕುಣುಬಿಯರ ಮಧ್ಯ ಸಂಬಂಧಗಳು ಸಹ ಏರ್ಪಟ್ಟಿವೆ.

ಕರ್ನಾಟಕದಲ್ಲಿಯ ಕುಣಬಿಯರು ಗೋವಾ ಮೂಲದ ಬುಡಕಟ್ಟಿನವರು. ಭಾರತದಲ್ಲಿಯ ಇನ್ನಿತರ ಬುಡಕಟ್ಟಿನವರ ಹಾಗೆ ಕಾಡುಗಳಲ್ಲಿ ವಾಸವಾಗಿದ್ದರು ಎಂದು ಕರೆಯಲಾಗದು. ಇಂಥ ಕುಣಬಿಯರ ಕುಟುಂಬವು ಗುಡಿಸಲುಗಳಲ್ಲಿ ವಾಸವಾಗಿದ್ದು, ಇವರ ನಿಯಂತ್ರಣವು ಗೌಂಕಾರ ಮತ್ತು ಬುಡಕಟ್ಟುಗಳ ಮುಖ್ಯಸ್ಥರು ಮಾಡುವರು. ಒಮ್ಮೆ ಮುಸುಕಿನಂತೆ ಮತ್ತೊಮ್ಮೆ ಬೆಳಕಿನಂತೆ ಕಾಣುವ ಈ ಬಗೆಯ ಸಮುದಾಯಗಳ ನೀತಿ–ನಿಯಮಗಳು ನಮ್ಮ ಆಧುನಿಕ ಲೋಕಕ್ಕೆ ಅನಗತ್ಯ ಅನ್ನಿಸುತ್ತದೆ. ಏಕೆಂದರೆ ಇಂದು ನಗರೀಕರಣದಿಂದ ಈ ಸಮುದಾಯಗಳು ದೂರವೇ ಉಳಿದಿವೆ ಎಂದು ಹೇಳಿದರೂ ಸಹ ಹಳ್ಳಿಯ ಜೀವನಗಳಿಗೆ ಅನ್ಯೋನ್ಯತೆಗಾಗಿ ಹೆಣೆದುಕೊಂಡಿವೆ. ಯಾವುದೇ ಹಬ್ಬ, ಆಚರಣೆ, ಸಂಪ್ರದಾಯಗಳು ಬಂದಾಗಲೆಲ್ಲಾ ಈ ರೀತಿಯ ಸಮುದಾಯಗಳ ಮೌಲ್ಯಗಳು ಬೆಳಕಿಗೆ ಬರುತ್ತವೆ. ಇವು ಇಂದು ಯಾವ ರೀತಿಯಾಗಿವೆ ಎಂದರೆ ಬುಡಕಟ್ಟುಗಳು ಜಾಹೀರಾತುಗಳಂತಹ ಮಾಧ್ಯಮಗಳಿಗೆ ಸರಕುಗಳಾಗಿ ಮಾರ್ಪಟ್ಟಿವೆ. ಇದರಿಂದಾಗಿ ಆಧುನಿಕ ಲೋಕ ಬಯಸುವ ಕ್ರಮಕ್ಕೂ ಬುಡಕಟ್ಟು ಬಯಸುವ ಕ್ರಮಕ್ಕೂ ಬಹಳಷ್ಟು ವ್ಯತ್ಯಾಸವಿದೆ.

ಒಂದು ದೃಷ್ಟಿಯಲ್ಲಿ ನೋಡಿದರೆ ಬುಡಕಟ್ಟು ಸಂಸ್ಕೃತಿಗಳು ಇಂದು ರೂಪಾಂತರಗೊಳ್ಳುತ್ತಿವೆ. ಆದರೆ ಮೂಲ ಪುರುಷರಿಂದ ಪ್ರಾರಂಭವಾದ ವೃತ್ತಿಗಳು ಕ್ರಮೇಣ ಮರೆಯಾಗುತ್ತಿವೆ. ಇದರಿಂದಾಗಿ ಸಂಸ್ಕೃತಿಯ ಅಧ್ಯಯನ ಅವಶ್ಯಕವಾಗಿ ನಡೆಯಬೇಕಾಗಿದೆ. ಈ ದಿಸೆಯಲ್ಲಿ ಅವರ ಸಾಮಾಜಿಕ ರಚನಾಕ್ರಮ, ಆರ್ಥಿಕ ಚಟುವಟಿಕೆಗಳು, ರೂಢಿ ಪದ್ಧತಿಗಳು ಮತ್ತು ಇತರೆ ಬುಡಕಟ್ಟು ಸಮುದಾಯಗಳೊಂದಿಗೆ ಅವರು ಯಾವ ರೀತಿಯ ಸಂಬಂಧವನ್ನು

ಇಟ್ಟುಕೊಂಡಿದ್ದಾರೆ ಎಂಬುದನ್ನು ಕುರಿತು ಅಧ್ಯಯನ ಮಾಡಬೇಕಾಗುತ್ತದೆ. ಈ ಎಲ್ಲಾ ಕಾರಣಗಳಿಂದಾಗಿ ಕುಣಬಿಯರನ್ನು ಕುರಿತು ಅಧ್ಯಯನ ಮಾಡುವುದು ಅಧ್ಯಯನ ಪ್ರಧಾನ ಉದ್ದೇಶವಾಗಿದೆ.

**ಟಿಪ್ಪಣಿಗಳು**

1. Suryanath U. Kamath, Gazetteer of India, Karnataka State Gazetteer, Uttara Kannada District, pp. 245-246, 1985.
2. Ibid., P -436-438
೩. ಉತ್ತರ ಕನ್ನಡ ಜಿಲ್ಲೆಯ ಅಂಕಿ-ಅಂಶಗಳ ನೋಟ, ಪುಟ ೪೬-೪೭, ೨೦೦೯-೧೦.
೪. ಅದೇ ಲೇಖಕರ, ಪುಟ ೪೮-೪೯.
೫. ಅದೇ ಲೇಖಕರ, ಪುಟ ೫೯-೬೧.
೬. ಅದೇ ಲೇಖಕರ, ಪುಟ ೫-೬.
೭. ಅದೇ ಲೇಖಕರ, ಪುಟ ೭೦.
೮. ಗೋಪಾಲಕೃಷ್ಣ ನಾಯ್ಕ
೯. ಪ್ರೊ. ಪಿ. ಮಲ್ಲಪ್ಪ, 'ಕರ್ನಾಟಕ ಭೂಗೋಳಶಾಸ್ತ್ರ', ಮೈಸೂರು, ಪುಟ ೩೧, ೧೯೯೩.
೧೦. ಟಿ.ಕೆ. ಮಹಮೂದ್, 'ಉತ್ತರ ಕನ್ನಡ ದರ್ಶನ', ಪುಟ ೫೬-೫೭, ೧೯೮೬.
೧೧. ಕ್ಷೇತ್ರಕಾರ್ಯದ ಮಾಹಿತಿ, ತಿಳುವಳಿಕೆ ನೀಡಿದವರು : ಶ್ರೀ ಮಾಮನ್ ಮೀರಾಶಿ, ಜಿಲ್ಲಾ ಪಂಚಾಯತ ಸದಸ್ಯರು, ಜೋಯಿಡಾ, ಹುಲ್ಲೂರ.
೧೨. ಡಾ. ಹಿ.ಚಿ. ಬೋರಲಿಂಗಯ್ಯ, 'ಕುಣಬಿಯರು' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.
೧೩. ಅದೇ ಲೇಖಕರ, ಪುಟ ೨೧.
೧೪. ಡಾ. ಆರ್. ಇಂದಿರಾ, 'ಜೋಯಿಡಾ ತಾಲೂಕಿನಲ್ಲಿ ಕುಣಬಿ ಜನಸಂಖ್ಯೆ ಕೇಂದ್ರಿಕೃತವಾಗಿರುವ ಗ್ರಾಮಗಳ ಬಗ್ಗೆ ಮಾಹಿತಿ', ಪುಟ ೫, ೨೦೦೧.
೧೫. ಅದೇ ಲೇಖಕರ, ಪುಟ ೮, ೧೦.
೧೬. ಕ್ಷೇತ್ರಕಾರ್ಯದ ಮಾಹಿತಿ, ತಿಳುವಳಿಕೆ ನೀಡಿದವರು : ಶ್ರೀ ಸುಭಾಷ ಗಾವಡಾ, ಕುಣಬಿ ಸಮುದಾಯದ ಜಿಲ್ಲಾ ಕಾರ್ಯದರ್ಶಿ, ಜೋಯಿಡಾ, ಕುಂಬಾರವಾಡ, ಕಾರವಾರ.
೧೭. ಕ್ಷೇತ್ರಕಾರ್ಯದ ಮಾಹಿತಿ, ತಿಳುವಳಿಕೆ ನೀಡಿದವರು : ಪರಮೇಶ್ವರ ರಾಮಾ ಕುಣಬಿ, ಕುಣಬಿ ಸಮುದಾಯದ ತಾಲೂಕಾ ಕಾರ್ಯದರ್ಶಿ, ಯಲ್ಲಾಪುರ, ಕಟ್ಟಗೆ ಗ್ರಾಮ.
೧೮. ಕ್ಷೇತ್ರಕಾರ್ಯದ ಮಾಹಿತಿ, ತಿಳುವಳಿಕೆ ನೀಡಿದವರು : ನಿಂಗಣ್ಣ ತಮ್ಮಯ್ಯ ಕುಣಬಿ, ಅಂಕೋಲಾ, ಶೀಡಿಗುಳೆ.
೧೯. ಕ್ಷೇತ್ರಕಾರ್ಯದ ಮಾಹಿತಿ, ತಿಳುವಳಿಕೆ ನೀಡಿದವರು:ರಾಮು ಕುಣಬಿ, ಕಾರವಾರ, ಹರೂರ.
೨೦. ಕ್ಷೇತ್ರಕಾರ್ಯದ ಮಾಹಿತಿ, ತಿಳುವಳಿಕೆ ನೀಡಿದವರು : ಶ್ರೀಮತಿ ಮೋಹಿನಿ ಎಸ್. ಪೂಜೇರ ಟೀಡ್ ಟ್ರಸ್ಟ್ ತಂಡ, ಸಮಗ್ರ ಕುಣಬಿ ಸಮುದಾಯ ಅಭಿವೃದ್ಧಿ ಸಂಘ, ಯಲ್ಲಾಪುರ.
೨೧. ಡಾ. ಪ್ರಭಾಕರ ಎ.ಎಸ್., 'ಆದಿವಾಸಿ ಆಖ್ಯಾನ', ಪುಟ ೧೭೪, ೧೮೧, ೨೦೦೬.
೨೨. ಭಾರತದ ಜನಗಣತಿ – ೨೦೦೧, ಜನಗಣತಿ ನಿರ್ದೇಶನಾಲಯ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಪಟ್ಟಿ, ಬೆಂಗಳೂರು.
೨೩. ಡಾ. ಎ.ಎಸ್. ಪ್ರಭಾಕರ, 'ಆದಿವಾಸಿ ಆಖ್ಯಾನ', ಪು. ೧೫೪-೧೬೭, ೨೦೦೬.

೨೪. ಡಾ. ಸವಿತಾ ನಾಯಕ, 'ಪ್ರಸಾಧನ ಕಲೆ', ಪು. ೫೨, ೨೦೦೦.
೨೫. ಡಾ. ಪ್ರಭಾಕರ ಎ.ಎಸ್., 'ಆದಿವಾಸಿ ಆಖ್ಯಾನ', ಪುಟ ೧೬೬-೧೬೭, ೨೦೦೬.
26. Pratap Sinh Velip Kankar, 'The Kurmis-Kunbis of India', pp. 2-3, 2006.
27. Ibid., P 5.
28. Ibid., P 20-22.
೨೯. ಹೆಚ್.ಡಿ. ಪ್ರಶಾಂತ, 'ಜನಸಮುದಾಯ', ಕರ್ನಾಟಕ ರಾಜ್ಯಕೋಶ-೪, ಪು. ೨೦-೨೨, ೨೦೦೩.
30. Pratap Sinh Velip Kankar, 'The Kurmis-Kunbis of India', p. 27, 2006.
31. Ibid., P 41.
32. Ibid., P 80
33. Ibid., P 81,91,93
34. Ibid., P 95,96
35. Ibid., P
36. Saldahna Jerome A., 'Origin and Growth of Konkani or Goan Communities and Language', p. 34, 1938.
37. Mascarenhas, Antonia, 'The Kudubis', Goa from Pre-historic Times, pp. 20-29, 1987.
38. Fuch Stephen, 'The Aboriginal Tribes of India', p. 246, 1973.
39. Gomes Olivino J.F., 'Village Goa (A Study of Goan Social Structure and Change), p. 79, 1987.
40. Prabhu S.S., 'The Konkani People', pp. 7-9, 1965.
41. Rodrigues Lucio, 'The Folk Literature of Goa', pp. 16-18, 1965.
42. Hutton J.H., 'Caste in India', p. 286, 1980.
೪೩. ಡಾ. ಜೆ.ಕೆ. ರಮೇಶ, 'ಮರಾಟಿ ಕುಣಬಿಗಳು', ಪು. ೫, ೨೦೦೮.
೪೪. ಪ್ರೊ. ಎ.ವಿ. ನಾವಡ, 'ಕೊಂಕಣದ ಕುಡುಬಿಯರು', ಪು. ೬, ೨೦೦೮.
೪೫. ಕ್ಷೇತ್ರಕಾರ್ಯ
46. Pratapsing Velip Kankar, 'The Kurmis – Kunbis of India', p. 167, 2006.

ಅಧ್ಯಾಯ ೩

# ಸಮಾಜ ಮತ್ತು ಸಂಸ್ಕೃತಿ

ಅಧ್ಯಾಯ ೩

# ಸಮಾಜ ಮತ್ತು ಸಂಸ್ಕೃತಿ

## ೩.೧ ಕರ್ನಾಟಕದಲ್ಲಿ ಕುಣಬಿ ಸಮುದಾಯದ ನೆಲೆಗಳು

Fuchs Stephen ರವರು ಕುಣಬಿಯರನ್ನು 'ಬೇಟೆ ಆಹಾರ ಸಂಗ್ರಹಣೆಯ ಅಲೆಮಾರಿ ಬುಡಕಟ್ಟು' ಎಂದು ಗುರುತಿಸಿದ್ದಾರೆ.

'ಕುಣಬಿಯರ ವಲಸೆಗೆ ಪೋರ್ಚುಗೀಸರೇ ಕಾರಣ ಎನ್ನುತ್ತಾರೆ. ಈ ಕುಣಬಿಯರಲ್ಲಿ (ತುಳುನಾಡು), ಗೋವಾ ಕುಣಬಿ, ಕೊಡಿಯಾಲ ಕುಣಬಿ, ಜೋಗಿ ಕುಣಬಿಯರೆಂದು ಮೂರು ಪ್ರಧಾನ ಒಳಪಂಗಡಗಳನ್ನು ಗುರುತಿಸಿದ್ದಾರೆ. ಅವುಗಳ ಕೌಟುಂಬಿಕ ಒಳರಚನೆ, ಸ್ಥಳೀಯ ಧಾರ್ಮಿಕ ಪಂಥಗಳ ಪ್ರೇರಣೆಗೆ ಒಳಗಾದ ಕಾರಣಕ್ಕೆ ಒಳಪಂಗಡಗಳು ಹುಟ್ಟಿಕೊಂಡಿವೆ'[೧]

ಬಹುತೇಕ ಈ ಬುಡಕಟ್ಟು ಪಂಗಡಗಳ ಜನರ ಜೀವನ ಶೈಲಿ, ಸಂಪ್ರದಾಯ, ನಂಬಿಕೆ, ಉದ್ಯೋಗ, ಊಟೋಪಚಾರ, ಉಡುಪು, ಭಾಷೆ, ಕಲೆ, ಇತ್ಯಾದಿಗಳಲ್ಲಿ ಸಾಮ್ಯವಿದ್ದು ಮೂಲತಃ ಇವರಲ್ಲಿ ಒಂದೇ ಬುಡಕಟ್ಟಿಗೆ ಸೇರಿದವರಾಗಿರಬಹುದೆನಿಸುತ್ತದೆ. ಪ್ರಾಚೀನ ಕಾಲದಲ್ಲಿ ಸಾರಿಗೆ ಸಂಪರ್ಕದ ಕೊರತೆ, ಪ್ರಾದೇಶಿಕ ರಾಜರ ಆಳ್ವಿಕೆ ಮತ್ತು ತುಳುನಾಡಿನ ಭೌಗೋಳಿಕ ಲಕ್ಷಣಗಳು ಬೇರೆ ಬೇರೆ ಕಡೆ ನೆಲೆನಿಂತ ಕುಣಬಿಯರನ್ನು ಒಂದಾಗಿಸುವಲ್ಲಿ ತೊಡಗಿದ್ದವು. ವಲಸೆ ಬಂದ ನಂತರ ಬೇರೆ ಬೇರೆ ಸ್ಥಳಗಳಲ್ಲಿ ಪ್ರತ್ಯೇಕ ಗುಂಪುಗಳಾಗಿ ಬದುಕಬೇಕಾಗಿ ಬಂದಿದ್ದರಿಂದ ಇವರಲ್ಲಿ ಸಂಪರ್ಕ ಕಡಿಮೆಯಾಗಿ ಸ್ಥಳೀಯ ಸಂಸ್ಕೃತಿಗಳ ಪ್ರಭಾವ ಹೆಚ್ಚಾಗಿ ಮೂಲ ಸಂಸ್ಕೃತಿಯಲ್ಲಿ ವೈವಿಧ್ಯಗಳು ಕಾಣಿಸಿಕೊಂಡಿವೆ. ಅವುಗಳನ್ನೇ ದೊಡ್ಡದು ಮಾಡುತ್ತ ಹುಸಿ ಪ್ರತಿಷ್ಠೆಗಳನ್ನು ಬೆಳೆಸಿಕೊಳ್ಳುತ್ತ, ರಕ್ತ ಸಂಬಂಧಗಳಿಂದಲೂ ದೂರಾಗಿ ಶ್ರೇಣೀಕರಣಗೊಳ್ಳುತ್ತ ಈ ಗುಂಪುಗಳು ಪ್ರತ್ಯೇಕ ಪಂಗಡಗಳೇ ಆಗಿಬಿಟ್ಟವೆ. ಈ ಕಾರಣದಿಂದಾಗಿ ಕುಣಬಿಯರಲ್ಲಿ ಅನೇಕ ಪಂಗಡ ಒಳಪಂಗಡ ಬೆಳೆದುಕೊಂಡು ಬಂದಿದೆ. ಇಂಡೊ ಆರ್ಯರ ಭಾಷಾ ಸಮುದಾಯಕ್ಕೆ ಸೇರುವ ಕುಣಬಿಯರ ಮಾತೃಭಾಷೆ ಕೊಂಕಣಿ. ಕಾಡಿನಲ್ಲಿ ನೆಲೆನಿಂತ ಕುಣಬಿಯ ಭಾಷೆಯಲ್ಲಿ ಯಾವುದೇ ಬದಲಾವಣೆ ಆಗಿರುವುದಿಲ್ಲ. ಇನ್ನಿತರ ಕಡೆಗಳಲ್ಲಿ ನೆಲೆನಿಂತ ಕುಣಬಿಯರ ಭಾಷೆಯ ಮೇಲೆ ಇತರ ಭಾಷೆಗಳ ಪ್ರಭಾವ ಬೀರಿದ್ದು, ಕುಣಬಿಯರು ತಮ್ಮ ಮಾತೃಭಾಷೆಯಲ್ಲದೇ ಸ್ಥಳೀಯ ಭಾಷೆಗಳಾದ ಕನ್ನಡ, ತುಳು, ಮರಾಠಿ ಭಾಷೆಗಳನ್ನು ಬಲ್ಲವರಾಗಿದ್ದಾರೆ. ತಮ್ಮ ಸಮುದಾಯದ ವ್ಯವಹಾರಗಳಲ್ಲಿ ತಮ್ಮ ಮಾತೃಭಾಷೆಯನ್ನು, ಹೊರ ವ್ಯವಹಾರಗಳಲ್ಲಿ ಕನ್ನಡ ಬಳಸುವ ಉದಾಹರಣೆಗಳೂ ಉಂಟು.

ಕರ್ನಾಟಕದಲ್ಲಿ ಕುಣಬಿಯರ 'ಕರಾವಳಿ ಮತ್ತು ಘಟ್ಟ ಪ್ರದೇಶದ ನಿರ್ದಿಷ್ಟ ಸ್ಥಳಗಳೆಂದರೆ ಉತ್ತರ ಕನ್ನಡ ಜಿಲ್ಲೆಯ, ಕಾರವಾರ, ಅಂಕೋಲ, ರಾಮನಗರ, ಕುಮಟಾ, ಭಟ್ಕಳ, ಯಲ್ಲಾಪುರ, ಹಳಿಯಾಳ, ಜೋಯಿಡಾ, ಉಡುಪಿ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆಯ, ಮಂಗಳೂರು, ಪುತ್ತೂರು, ಸುಳ್ಯ, ಕುಂದಾಪುರ, ಕೊಡಗು ಜಿಲ್ಲೆ, ಶಿವಮೊಗ್ಗ ಜಿಲ್ಲೆಯ, ಸಾಗರ, ಹೊಸ ಸಾಗರ, ತೀರ್ಥಹಳ್ಳಿ, ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ, ಎನ್.ಆರ್. ಪುರ, ಶೃಂಗೇರಿ ಮತ್ತು ಮೂಡಿಗೆರೆ, ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲೂಕುಗಳಲ್ಲಿ ಮಾತ್ರ ಕಂಡುಬರುತ್ತಾರೆ. ಇವರು ಮಲೆನಾಡು ಪ್ರದೇಶದ ಆಚೆಗೆ ಹೆಚ್ಚಾಗಿ ಹೋಗಿಲ್ಲವೆಂಬುದು ಗಮನಾರ್ಹ'[೨] ಅಂಶವಾಗಿದೆ.

### ೩.೨ ಸಾಮಾಜಿಕ ಶ್ರೇಣೀಕರಣ

ಎಲ್ಲ ಸಮಾಜಗಳಲ್ಲಿ ಸಾಮಾನ್ಯವಾಗಿ ಬುಡಕಟ್ಟುಗಳನ್ನು ವಿವಿಧ ವಿಭಾಗಗಳಲ್ಲಿ ವಿಂಗಡಿಸುತ್ತಾರೆ. ಕುಣಬಿಯರು ವಲಸೆ ಬಂದ ನಂತರ ಬೇರೆ ಬೇರೆ ಸ್ಥಳಗಳಲ್ಲಿ ಪ್ರತ್ಯೇಕ ಗುಂಪುಗಳಾಗಿ ಬದುಕಬೇಕಾಗಿ ಬಂದಿದ್ದರಿಂದ ಇವರಲ್ಲಿ ಸಂಪರ್ಕ ಕಡಿಮೆಯಾಗಿ ಸ್ಥಳೀಯ ಸಂಸ್ಕೃತಿಗಳ ಪ್ರಭಾವ ಹೆಚ್ಚಾಗಿ ಮೂಲ ಸಂಸ್ಕೃತಿಯಲ್ಲಿ ವೈವಿಧ್ಯಗಳು ಕಾಣಿಸಿಕೊಂಡಿವೆ. ಅವುಗಳನ್ನೇ ದೊಡ್ಡದು ಮಾಡುತ್ತ ಹುಸಿ ಪ್ರತಿಷ್ಠೆಗಳನ್ನು ಬೆಳೆಸಿಕೊಳ್ಳುತ್ತ, ರಕ್ತ ಸಂಬಂಧಗಳಿಂದಲೂ ದೂರಾಗಿ ಶ್ರೇಣೀಕರಣಗೊಳ್ಳುತ್ತ ಈ ಗುಂಪುಗಳು ಪ್ರತ್ಯೇಕ ಪಂಗಡಗಳೇ ಆಗಿಬಿಟ್ಟಿವೆ. ಒಂದು ಬುಡಕಟ್ಟಿನಲ್ಲಿಯೇ ಉಪ-ಬುಡಕಟ್ಟುಗಳಿರುತ್ತವೆ. ಈ ವಿಭಾಗಗಳನ್ನು ಮತ್ತೆ ಕುಲಗಳಾಗಿ ವಿಂಗಡಿಸುತ್ತಾರೆ. 'ಕುಣಬಿಗಳಲ್ಲಿ ಸದ್ಯ ಗೋವೆಯ ಕುಣಬಿ, ಕೊಡಿಯಾಲ ಕುಣಬಿ, ಆರೆ-ಕುಣಬಿ, ಜೋಗಿ ಕುಣಬಿ ಮತ್ತು ನಾಡಕುಣಬಿಗಳೆಂಬ ಪ್ರಧಾನ'[೩] ಉಪವಿಭಾಗಗಳಿವೆ. ಥರ್ಸ್ಟನ್‌ರವರು ಈ ಕೆಳಗಿನ ವಿಭಾಗಗಳನ್ನು ಗುರುತಿಸುತ್ತಾರೆ. ಆರೆ, ಗೋವಾ, ಜೋಗಿ, ಕೊಡಿಯಾಲ ಮತ್ತು ಕಾರೆಯ ಕುಣಬಿ. ಅಯ್ಯಪ್ಪನ್‌ರವರ ವರದಿಯಲ್ಲಿಯೂ ಇಂಥವೇ ವಿಭಾಗಗಳು ನಮೂದಿತವಾಗಿದೆ ಆದರೆ ಕಾರೆಯ ಕುಣಬಿ ಮತ್ತು ಕೊಡಿಯಾಲ ಕುಣಬಿ ಇವೆರಡೂ ಒಂದೇ ಎಂದು ಕಂಡುಬಂದಿದೆ. ಥರ್ಸ್ಟನ್‌ರವರ ಮತ್ತು ಅಯ್ಯಪ್ಪನ್‌ರ ವರದಿಯಲ್ಲಿ ನಾಡ ಕುಣಬಿಗಳ ಉಲ್ಲೇಖವಿಲ್ಲ. ಅಲ್ಲದೆ ಇಂದಿನ ಸಮಾಜದಲ್ಲಿ, ಕುಣಬಿ ಸಮಾಜದಿಂದ ಬಹಿಷ್ಕೃತರಾದವರು ಜಾತಿ ಕುಣಬಿ ಎಂಬ ತಮ್ಮದೆ ಆದ ತಂಡವನ್ನು ಕಟ್ಟಿಕೊಂಡಿದ್ದಾರೆ. ತತ್ಪರಿಣಾಮವಾಗಿ, ಹೆಚ್ಚಿನ ಇನ್ನೊಂದು ಉಪವಿಭಾಗವು ಉಂಟಾಗಿದೆ. ಹೀಗಾಗಿ, ಇಂದು ಕುಣಬಿಗಳು ಆರು ವಿಭಾಗಗಳಾಗಿ ವಿಂಗಡಣೆಯಾಗಿದ್ದಾರೆ.

ಈ ಉಪವಿಭಾಗಗಳ ಹೆಸರುಗಳು ಅವರು ನೆಲೆನಿಂತ ಊರಿನ ಹೆಸರು, ಪ್ರದೇಶ, ಅವರ ಮೊದಲಿನ ಉದ್ಯೋಗಗಳು, ಅವರ ಮೂಲಸ್ಥಳ ಇತ್ಯಾದಿಗಳನ್ನು ಸೂಚಿಸುತ್ತದೆ. ಉದಾಹರಣೆಗೆ,

'ಗೋವಾ ಕುಣಬಿ' ಎಂಬ ಹೆಸರು ಅವರ ಮೂಲ ನೆಲೆಯನ್ನು ಸೂಚಿಸುತ್ತದೆ. ಗೋವಾ-ಕುಣಬಿಗಳು ಉಳಿದವರಿಗಿಂತ ಹೆಚ್ಚು ಸಂಪ್ರದಾಯವಾದಿಗಳು, ಪರಂಪರಾಗತರು, ಉಳಿದವರಿಗಿಂತ ಕಡಿಮೆ ಹಿಂದುತ್ವಕ್ಕೊಳಗಾದವರು, ಕಡಿಮೆ ಆಧುನೀಕರಣಕ್ಕೊಳಗಾದವರು. ಸಂದರ್ಶನ ಒಂದರಲ್ಲಿ ಕೆಲವು ಹಿರಿಯರು ಹೇಳಿದ್ದೇನೆಂದರೆ ಗೋವೆಯಿಂದ ವಲಸೆ ಬಂದ ನಂತರ ಪ್ರಾರಂಭದಲ್ಲಿ ಅವರು ಕಾಡು, ಬೆಟ್ಟ, ಸಮುದ್ರ, ನದಿ ದಂಡೆಯ ಮೇಲೆ ನೆಲೆಸಿದರು. ಈ ಕಾರಣಕ್ಕಾಗಿಯೇ ಅವರನ್ನು 'ಕಾರೆಯ' ಎಂದು ಕರೆದರು ಯಾಕೆಂದರೆ ಕನ್ನಡದಲ್ಲಿ 'ಕರೆ' ಎಂಬ ಶಬ್ದಕ್ಕೆ ನದಿಯ ತೀರ ಅಥವಾ ಸಮುದ್ರ ತೀರ ಎಂಬ ಅರ್ಥವಿದೆ.

ಕಿಟೆಲ್‌ರ ಕನ್ನಡ-ಇಂಗ್ಲೀಷ್ ನಿಘಂಟುನಲ್ಲಿ 'ಆರೆ ಕುಣಬಿ' ಎಂಬ ಶಬ್ದದಲ್ಲಿಯ 'ಆರೆ' ಎಂಬ ಪೂರ್ವಪದವು ಕನ್ನಡ ಭಾಷೆಯಿಂದ ಬಂದಿದ್ದು 'ಆರ' ಅಥವಾ 'ಆರೆ' ಎಂಬ ಶಬ್ಧದ ಅರ್ಥ ಕಾಡು ಎಂದು ಅಥವಾ ಎಂದೆಂದೂ ಸಾಗುವಳಿ ಮಾಡಲಾರದ್ದು ಎಂದು ಉಲ್ಲೇಖಿಸಲಾಗಿದೆ. ನಂಜುಂಡಯ್ಯ ಮತ್ತು ಅಯ್ಯರ್ ಅವರು ಹೇಳಿದಂತೆ ಅದು 'ಆರ‍್ಯ' ಎಂಬ ಶಬ್ಧದಿಂದ ಉತ್ಪತ್ತಿಯಾಗಿಲ್ಲ, ಜೋಗಿ ಕುಣಬಿ ಎಂಬುದು ಮತ್ತೊಂದು ವಿಭಾಗ. ಬಹುಶಃ ಇವರು ಜೋಗಿ ಪಂಥವನ್ನು ಸ್ವೀಕರಿಸಿರಬಹುದು. ಅವರು 'ಗದ್ಯಾ' ಕುಟುಂಬ ಮೂಲದಿಂದ ಬಂದವರಾಗಿರಬೇಕು. ಈ ಶಬ್ದದ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ. 'ನಾಡ ಕುಣಬಿ'ಗಳ ಬಗ್ಗೆ ಸಾಕಷ್ಟು ಸಾಕ್ಷ್ಯಾಧಾರಗಳಾಗಲಿ, ಬಲವಾದ ದಾಖಲಾತಿ ದೊರೆತಿಲ್ಲ.

ಈ ಎಲ್ಲ ಉಪವಿಭಾಗಗಳ ಪೈಕಿ ಗೋವಾ ಕುಣಬಿ ಹಾಗೂ ಕೊಡಿಯಾಲ ಕುಣಬಿಗಳು ಮಾತ್ರ ಬಹುಮುಖ್ಯ ಕುಣಬಿ ಉಪವಿಭಾಗಗಳಾಗಿವೆ.

### ೩.೩ ಕುಣಬಿ ಸಮುದಾಯದ ಉಪಭಾಷೆ

ಬುಡಕಟ್ಟು ಸಮುದಾಯಗಳಲ್ಲಿ ಪಶ್ಚಿಮದ ಘಟ್ಟಗಳಲ್ಲಿ ಕತ್ತಲೆಯ ಪ್ರಪಂಚದಲ್ಲಿ ಆದಿವಾಸಿ ಸಮುದಾಯಗಳೆಂದು ಗುರುತಿಸಿಕೊಂಡ ಕುಣಬಿ ಸಮುದಾಯ ಇತರ ಬುಡಕಟ್ಟು ಸಮುದಾಯಗಳಂತೆ ತನ್ನದೇ ಆದ ವಿಶಿಷ್ಟ ಭಾಷೆಯನ್ನು ರೂಢಿಸಿಕೊಂಡು ಬಂದಿದೆ. ಪ್ರಪಂಚದಲ್ಲಿ ಯಾವುದೇ ಬುಡಕಟ್ಟುಗಳನ್ನು ಅಧ್ಯಯನ ಮಾಡಿದರೆ ಮೊದಲು ಗುರುತಿಸುವುದು ಅವರ ವಿಶಿಷ್ಟ ಭಾಷೆ. ಈ ಹಿನ್ನಲೆಯಲ್ಲಿ ಕುಣಬಿ ಸಮುದಾಯವು ಸಹ ತನ್ನದೇಯಾದ ಒಂದು ಭಾಷೆಯನ್ನು ಮೈಗೂಡಿಸಿಕೊಂಡಿದೆ.

ಉತ್ತರ ಕನ್ನಡದ ಕುಣಬಿಗಳು ಕೊಂಕಣಿಯ ಒಂದು ಉಪಭಾಷೆಯನ್ನು ಮಾತನಾಡುತ್ತಾರೆ. ಕುಣಬಿ ಸಮುದಾಯ ಇಂಡೋ-ಆರ್ಯನ್ ಭಾಷಾ ಸಮುದಾಯಕ್ಕೆ ಸೇರಿದ ಕೊಂಕಣಿ ಕುಣಬಿಯರ ಮಾತೃಭಾಷೆಯಾಗಿದೆ. ಸ್ಟೀಫನ್ ಫಕ್ಸ್‌ರವರು ತಮ್ಮ ಇಂಡೋ-

ಆರ್ಯನ್ ಭಾಷಾ ವಿಭಾಗಗಳ ವಿಶ್ಲೇಷಣೆಯಲ್ಲಿ ಕೊಂಕಣಿಯನ್ನು ದಕ್ಷಿಣ ಭಾಷೆಗಳ ಗುಂಪಿನಲ್ಲಿ ಸೇರಿಸಿದ್ದಾರೆ. ಕೊಂಕಣಿಯ ಇತರೆ ಉಪಭಾಷೆಗಳಿಗೂ ಹಾಗೂ ಕುಣಬಿ ಕೊಂಕಣಿ ಭಾಷೆಗೂ ವ್ಯತ್ಯಾಸವನ್ನು ಸ್ಪಷ್ಟವಾಗಿ ಗುರುತಿಸಬಹುದಾದರೂ, ಕೊಂಕಣಿಯ ಉಪಭಾಷೆಗಳನ್ನಾಡುವ ಜನರು ಕುಣಬಿಗಳೊಂದಿಗೆ ಸುಲಭವಾಗಿ ಸಂವಹನ ಮಾಡಬಲ್ಲರು. ಶತಮಾನಗಳ ಕಾಲ ಕೊಂಕಣಿ ಭಾಷೆಯನ್ನಾಡುವ ಉಳಿದ ಸಮುದಾಯಗಳಿಂದ ಪ್ರತ್ಯೇಕವಾಗಿ ಇದ್ದುದರಿಂದ, ಕುಣಬಿಗಳಾಡುವ ಕೊಂಕಣಿ ಭಾಷೆ ವೈಶಿಷ್ಟಪೂರ್ಣವಾದ ಉಪಭಾಷೆಯಾಗಿ ಉಳಿದಿದೆ. ಕೆಲವೊಂದು ಸ್ಥಾನಿಕ ವ್ಯತ್ಯಾಸಗಳು ಹಾಗೂ ಉಚ್ಚಾರಣಾ-ವಿಶೇಷತೆಗಳೂ ಇವೆ. ಇವರಲ್ಲಿ ಕೆಲವರಿಗೆ ಕೊಂಕಣಿ ತಮ್ಮ ಮಾತೃಭಾಷೆ ಎಂಬುದರ ಅರಿವು ಇಲ್ಲ. 'ನೀವು ಯಾವ ಭಾಷೆ ಮಾತನಾಡುತ್ತೀರಿ ಎಂದು ಕೇಳಿದಾಗ ಅವರು ನಾವು ಕುಣಬಿ ಭಾಷೆ ಮಾತನಾಡುತ್ತೇವೆ'[೨] ಎಂದು ಉತ್ತರಿಸಿದರು. ಪ್ರಾದೇಶಿಕ ಭಾಷೆಗಳ ಪ್ರಭಾವದಿಂದಾಗಿ, ಅನೇಕ ಕನ್ನಡ, ಮರಾಠಿ ಮತ್ತು ತುಳು ಶಬ್ದಗಳು ಕುಣಬಿ ಉಪಭಾಷೆಯಲ್ಲಿ ಬಳಕೆಯಾಗುತ್ತಲಿವೆ. ಹಿಂದಿನ ಕಾಲದಲ್ಲಿ ಅನಕ್ಷರತೆ ಹಾಗೂ ಉಳಿದವರೊಂದಿಗೆ ಸಂಪರ್ಕದ ಕೊರತೆಯಿಂದಾಗಿ ಕುಣಬಿಗಳಿಗೆ ಕನ್ನಡದ ಅರಿವೇ ಇರಲಿಲ್ಲ, ಆದರೆ ಇಂದು ಸುಮಾರಾಗಿ ಎಲ್ಲ ಜನರು ಕನ್ನಡ ಮಾತನಾಡಬಲ್ಲರು. ಕುಣಬಿ ಹೆಣ್ಣುಮಕ್ಕಳು ಕೂಡ ಕನ್ನಡದಲ್ಲಿ ಸ್ವಲ್ಪಮಟ್ಟಿನ ಸಾಹಚರ್ಯ ಸಾಧಿಸಿದ್ದಾರೆ. ತಮ್ಮ ಹಳ್ಳಿಗಳಲ್ಲಿಯ ಬುಡಕಟ್ಟೇತರ ಜನರೊಂದಿಗೆ ವ್ಯವಹರಿಸಲು ಅವರು ಕನ್ನಡ, ಮರಾಠಿ ಹಾಗೂ ತುಳು ಭಾಷೆ ಬಳಸುತ್ತಾರೆ. ಪತ್ರಗಳನ್ನು ಸಹ ಕನ್ನಡದಲ್ಲಿ ಬರೆಯುತ್ತಾರೆ. ಕನ್ನಡ ಅವರ ಮೇಲೆ ಎಷ್ಟೊಂದು ಪ್ರಭಾವ ಬೀರಿದೆ ಎಂದರೆ ಮದುವೆ, ಹೋಳಿ ಇಂಥ ಮಂಗಳಕರವಾದ ಸಂದರ್ಭಗಳಲ್ಲಿ ಅವರು ಕನ್ನಡ, ಮರಾಠಿ ಹಾಗೂ ತುಳು ಭಾಷೆಯ ಹಾಡುಗಳನ್ನು ಹಾಡುತ್ತಾರೆ.

**ದಿನಚರಿ**

ಕುಣಬಿಯರು ಕಾಡಿನ ಜನರಾದುದರಿಂದ ಅವರು ಸಮಯವನ್ನು ತಮ್ಮ ಜೀವನ ಕ್ರಮದಲ್ಲಿ ರೂಢಿಸಿಕೊಂಡಿದ್ದನ್ನು ಇಲ್ಲಿ ಚರ್ಚಿಸಲಾಗಿದೆ. ಹೆಚ್ಚಾಗಿ ಕುಣಬಿಯರು ನಸುಕಿನಿಂದಲೇ ಕಾರ್ಯಾರಂಭ ಮಾಡುತ್ತಾರೆ. 'ಸಕಾಳಿ' ಎನ್ನುವ ಶಬ್ದ ಕುಣಬಿಯದಲ್ಲಿ 'ಬೆಳಿಗ್ಗೆ' ೫ ಗಂಟೆಯ ಸಮಯ ಎನ್ನುವ ಅರ್ಥ ಸೂಚಿಸುತ್ತದೆ. ಇದು ಜೋಯಿಡಾ ತಾಲೂಕು ಗಾವಡೆವಾಡಾ ಗ್ರಾಮದ ಕುಣಬಿಯರಲ್ಲಿ ಹೆಚ್ಚಾಗಿ ಬಳಕೆಯಲ್ಲಿದೆ. ಕೆಲವು ಕುಣಬಿಯರು ವಿಶೇಷವಾಗಿ ಯಲ್ಲಾಪುರ ತಾಲೂಕಿನಲ್ಲಿ ಇದೇ ಶಬ್ದವನ್ನು 'ಬೆಳಿಗ್ಗೆ' ಎಂಬ ಕನ್ನಡ ಶಬ್ದ ಬಳಸುವರು. ಯಾಕೆಂದರೆ ಇವರು ಹವ್ಯಕರ ಮನೆಗಳಲ್ಲಿ ಕೆಲಸ ಮಾಡುವದರಿಂದ ಅವರಿಗೆ ಕನ್ನಡದ ಶಬ್ದ ಬಳಕೆ ಬಂದಿದೆ ಎಂದು ತೋರುವದು.

'ಹೀಗೆ ಬೇರೆ ಬೇರೆ ಕಡೆಗಳಲ್ಲಿ ನೆಲೆನಿಂತ ಕುಣಬಿಯರಲ್ಲಿ ಕನ್ನಡ, ಮರಾಠಿ ಮತ್ತು ಕೊಂಕಣಿ ಮುಂತಾದ ಶಬ್ದಗಳನ್ನು ಸಮಯವನ್ನು ತಿಳಿಯಲು ಅಥವಾ ಹೇಳಲು ಬಳಸುತ್ತಾರೆ'.[೫]

ಅಂಕೋಲಾ ತಾಲೂಕಿನಲ್ಲಿ 'ಮುಂಜಾನೆ' ಎಂಬ ಶಬ್ದವನ್ನು ಹೇಳುವರು. ಆದರೆ ಇಲ್ಲಿ 'ಮುಂಜಾನೆ' ಎಂಬುದು ಕನ್ನಡದಲ್ಲಿ ಇರುವದರಿಂದ ಕನ್ನಡದ ಪ್ರಭಾವ ಈ ಭಾಷೆಯ ಮೇಲೆ ಆಗಿದೆ ಎಂಬುದನ್ನು ಸೂಚಿಸುತ್ತದೆ.

ಕುಣಬಿಯರು ಸಮಯವನ್ನು ತಿಳಿಯುವ ಬಗೆಯನ್ನು ಗಮನಿಸಿದಾಗ ಈ ಮೂರು ತಾಲೂಕುಗಳಲ್ಲಿ ಭಿನ್ನ ಭಿನ್ನವಾಗಿ ಬಳಕೆಯಾಗಿದೆ. ಕೆಲವೊಂದು ಶಬ್ದಗಳ ಮೇಲೆ ಕನ್ನಡದ ಪ್ರಭಾವವಿದ್ದರೆ, ಇನ್ನು ಕೆಲವು ಕಡೆ ಮರಾಠಿ ಪ್ರಭಾವ ಬೀರಿರುವುದನ್ನು ತಿಳಿಯಬಹುದು. ಜೋಯಿಡಾ, ಕಾರವಾರ ತಾಲೂಕಿನಲ್ಲಿ ಮರಾಠಿ ಪ್ರಭಾವ ಇದ್ದು ಯಲ್ಲಾಪುರ, ಅಂಕೋಲಾ ತಾಲೂಕುಗಳಲ್ಲಿ ಕನ್ನಡ ಪ್ರಭಾವ ಇದೆ ಎಂಬುದನ್ನು ತಿಳಿಯಬಹುದಾಗಿದೆ.

ಕುಣಬಿಯವರು ತಮ್ಮ ದಿನನಿತ್ಯದ ಜೀವನದಲ್ಲಿ ಸಮಯವನ್ನು ತಮ್ಮದೇ ಆದ ರೀತಿಯಲ್ಲಿ ಬಳಸಿಕೊಂಡಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

| ಕ್ರ ಸಂ. | ಕುಣಬಿ ಭಾಷೆ | ಕನ್ನಡ ಭಾಷೆ | ಸಮಯ |
|---|---|---|---|
| ೧ | ಸಕಾಳಿ | ಮುಂಜಾನೆ | ೫ ರಿಂದ ೧೧ ರವರೆಗೆ |
| ೨ | ಧನಪಾರ | ಮಧ್ಯಾಹ್ನ | ೧೨ ರಿಂದ ೪ ರವರೆಗೆ |
| ೩ | ಸಾಂಜ | ಸಾಯಂಕಾಲ | ೫ ರಿಂದ ೬ ರವರೆಗೆ |
| ೪ | ರಾತಿನ್ | ರಾತ್ರಿ | ೭ ರಿಂದ ೧೧ ರವರೆಗೆ |
| ೫ | ಮದ್ಯಾನಿ ಚೇರ | ಮಧ್ಯರಾತ್ರಿ | ೧೨ ರವರೆಗೆ[೬] |

ತಿಳುವಳಿಕೆ ನೀಡಿದವರು – ಮಹಾಬಳೇಶ್ವರ ಸೋಮಣ್ಣ ಕಾಜುಗಾರ

**ಬಂಧುತ್ವ (Kinship)**

ಅನೇಕ ರೀತಿಯ ಸಂಬಂಧಗಳಲ್ಲಿ 'ಬಂಧುತ್ವ' ಬಹಳ ಮುಖ್ಯ ಇದಕ್ಕೆ ಇಂಗ್ಲೀಷಿನಲ್ಲಿ 'Kinship' ಕನ್ನಡದಲ್ಲಿ 'ಬಂಧುತ್ವ', ರಕ್ತಸಂಬಂಧಿ, ಕಳ್ಳುಬಳ್ಳಿ, ಪದಗಳಿಂದ ಕರೆಯುವರು ಯಾರೆ ಆಗಲಿ ಬಾಂಧವ್ಯವನ್ನು ತೊರೆದು ಜೀವನ ನಡೆಸಲು ಸಾಧ್ಯವಿಲ್ಲ, ಜೀವನದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಬೇಕಾದರೆ ಇತರರ ಮೇಲೆ ಅವಲಂಬಿಸಬೇಕಾಗುತ್ತದೆ. ಬಂಧುತ್ವ ಹುಟ್ಟಿನಿಂದಲೇ ಇರುವದು. ಪಾಲಕರ–ಪೋಷಕರ ಸಂಪರ್ಕದಿಂದ ವೃದ್ಧಿಯಾಗುವುದು. ಕುಟುಂಬದ ಮೂಲ ಉದ್ದೇಶ ಸಂತಾನೋತ್ಪತ್ತಿ, ಕಾರ್ಯವಾಗಿರದೆ ಸಂಬಂಧವನ್ನು ಸೂಚಿಸುವದು ಸಹ ಆಗಿದೆ.

ಕುಣಬಿಯರಲ್ಲಿ ಎರಡು ರೀತಿಯ ಸಂಬಂಧಗಳನ್ನು ನೋಡಬಹುದು.

೧. ರಕ್ತ ಸಂಬಂಧ ೨. ವೈವಾಹಿಕ ಸಂಬಂಧ

### ೧. ರಕ್ತ ಸಂಬಂಧ

'ಹೆತ್ತ ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ, ದೊಡ್ಡಪ್ಪ-ದೊಡ್ಡಮ್ಮ, ಚಿಕ್ಕಪ್ಪ-ಚಿಕ್ಕಮ್ಮ, ಅಜ್ಜ-ಅಜ್ಜಿ, ತಾತ ಮುಂತಾದವರಿಂದ ಉಂಟಾದ ಸಂಬಂಧವನ್ನು 'ರಕ್ತ ಸಂಬಂಧ' ಎಂದು ಕರೆಯುವರು.

ಕುಣಬಿಯರಲ್ಲಿ ಬಳಕೆಯಾಗುವ ಕೆಲವು ಸಂಬಂಧವಾಚಿ ಪದಗಳು ಈ ರೀತಿ ಇವೆ.

| ಕ್ರ.ಸಂ. | ಕುಣಬಿ ಭಾಷೆ | ಕನ್ನಡ ಭಾಷೆ |
|---|---|---|
| ೧ | ಆಯಿ, ಅಮ್ಮಾ, ಆವಾ | ತಾಯಿ |
| ೨ | ಬಾಪ್ಪಾ, ಆಬಾ, ಆಬು | ತಂದೆ |
| ೩ | ದಾದು | ಅಣ್ಣ |
| ೪ | ಬಾರಕೆಲ ಬಾವ | ತಮ್ಮ |
| ೫ | ಕಾಕು | ಅಕ್ಕ |
| ೬ | ಬಾರಕೆಲಬಹಿನ | ತಂಗಿ |
| ೭ | ಮೊಟೆಲ ಬಾಹಿಲೂ | ದೊಡ್ಡಪ್ಪ |
| ೮ | ಮೊಟಿಮಾಂಸಿ | ದೊಡ್ಡಮ್ಮ |
| ೯ | ಬಾಪುಲೊ | ಚಿಕ್ಕಪ್ಪ |
| ೧೦ | ಮಾಂಸಿ | ಚಿಕ್ಕಮ್ಮ |
| ೧೧ | ಅಜ್ಜಾ | ಅಜ್ಜ |
| ೧೨ | ಅಜ್ಜಿ | ಅಜ್ಜಿ'[೭] |

### ೨. ವೈವಾಹಿಕ ಸಂಬಂಧ

'ಮಾವ, ಅತ್ತೆ, ಮೈದುನ, ಸೊಸೆ, ಭಾವ, ಅತ್ತಿಗೆ, ಅಳಿಯ ಮುಂತಾದವರಿಂದ ಉಂಟಾದ ಸಂಬಂಧಗಳನ್ನು ವೈವಾಹಿಕ ಸಂಬಂಧ ಎಂದು ಕರೆಯುವರು. ಈ ಬಗೆಯ ಸಂಬಂಧಗಳು ಎಲ್ಲಾ ಸಮುದಾಯಗಳಲ್ಲಿ ಕಂಡು ಬರುವದು ಸಹಜವಾದದ್ದು.

| ಕ್ರ.ಸಂ. | ಕುಣಬಿ ಭಾಷೆ | ಕನ್ನಡ ಭಾಷೆ |
|---|---|---|
| ೧ | ಮಾವ, ಮಾವಳೊ | ಮಾವ |
| ೨ | ಮಾಮಿ, ಮಾಯ | ಅತ್ತೆ |
| ೩ | ದೇರ | ಮೈದುನ |
| ೪ | ಸೂನ್ | ಸೊಸೆ |
| ೫ | ಭಾವೋಜಿ | ಭಾವ |
| ೬ | ವೈನಿ | ಅತ್ತಿಗೆ |
| ೭ | ಜಾವಯ | ಅಳಿಯ'[೮] |

೧. ಆಯಿ, ಆಯಾ, ಅಮ್ಮಾ (ತಾಯಿ)

ಇಂಥ ಅನೇಕ ಶಬ್ದಗಳಿಂದ ತಾಯಿಯನ್ನು ಕರೆಯುವರು. ಉದಾ: ಜೋಯಿಡಾ ತಾಲೂಕಿನಲ್ಲಿ 'ಆಯಿ', 'ಆಯಾ' ಎಂದು ತಾಯಿಗೆ ಹೇಳಿದರೆ, ಯಲ್ಲಾಪುರ, ಅಂಕೋಲಾ ತಾಲೂಕುಗಳಲ್ಲಿ ತಾಯಿಗೆ 'ಅಮ್ಮಾ' ಎನ್ನುವ ಶಬ್ದವನ್ನು ಉಪಯೋಗಿಸಿರುವರು.

ಏಕೆಂದರೆ ಕುಣಬಿಯರಲ್ಲಿ 'ಅಮ್ಮಾ' ಎನ್ನುವ ರೀತಿಯಲ್ಲಿ ಬಳಸುವರು. ಉದಾ: ತಾಯಿಗೆ ಮತ್ತು ತಾಯಿಯ ತಾಯಿಗೆ.

೨. ಬಪ್ಪಾ, ಅಬ್ಬು, ಬಾ (ತಂದೆ)

ಜೋಯಿಡಾ ತಾಲೂಕಿನಲ್ಲಿ ಕುಣಬಿಯರು ತಂದೆಯನ್ನು ಬಪ್ಪ, ಅಬ್ಬ, ಬಾ ಎಂದು ಕರೆಯುತ್ತಾರೆ. ಅದೇ ರೀತಿ ಕನ್ನಡದ ಪ್ರಭಾವ ಇರುವ ಸ್ಥಳಗಳಲ್ಲಿ ಕನ್ನಡ ಭಾಷೆಯ 'ತಂದೆ' ಪದವನ್ನೇ ಬಳಸುವರು. ಯಲ್ಲಾಪುರ, ಅಂಕೋಲಾ ಮತ್ತು ಜೋಯಿಡಾ ತಾಲೂಕುಗಳಲ್ಲಿ ಭಿನ್ನ ಭಿನ್ನವಾಗಿ ಬಳಕೆಯಲ್ಲಿದೆ.

೩. ಅಂಗಾಂಗಳು

'ಕುಣಬಿಯರು ದೇಹದ ಅಂಗಾಂಗಗಳಿಗೆ ಸಂಬಂಧಿಸಿದಂತೆ ವೈವಿಧ್ಯಮಯವಾದ ಪದಗಳನ್ನು ಬಳಸುತ್ತಾರೆ.

| ಕ್ರಸಂ. | ಕುಣಬಿ ಭಾಷೆ | ಕನ್ನಡ ಭಾಷೆ |
|---|---|---|
| ೧ | ತಕಲಿ | ತಲೆ |
| ೨ | ಕೇಸ್ | ಕೂದಲು |
| ೩ | ಡೊಳೊ | ಕಣ್ಣು |
| ೪ | ನಾಕ | ಮೂಗು |
| ೫ | ಕಾನ | ಕಿವಿ |
| ೬ | ಕಪಲ | ಹಣೆ |
| ೭ | ತೊಂಡ | ಬಾಯಿ |
| ೮ | ಪೇವಣೆ | ತುಟಿ |
| ೯ | ದಾತ್ | ಹಲ್ಲು |
| ೧೦ | ಜಿಬಲಿ | ನಾಲಿಗೆ |
| ೧೧ | ಖಾಡಕೂಲಿ | ಗದ್ದ |
| ೧೨ | ಗಳೊ | ಗಂಟಲು |

| | | |
|---|---|---|
| ೧೩ | ಭಾವಳಿ | ಭುಜ |
| ೧೪ | ಖಾಂದ | ತೋಳು |
| ೧೫ | ಬೋಟ | ಬೆರಳು |
| ೧೬ | ಪೋಟ, ಪೇಟ | ಹೊಟ್ಟೆ |
| ೧೭ | ಚಮಡಿ | ಚರ್ಮ |
| ೧೮ | ಹಾಡ, ಹಾಡ್ಡಾ | ಎಲಬು |
| ೧೯ | ಪಾಯೇ | ಕಾಲು |
| ೨೦ | ಛಾತಿ | ಎದೆ |

ತಿಳುವಳಿಕೆ ನೀಡಿದವರು – ಮಹಾಬಳೇಶ್ವರ ಸೋಮಣ್ಣ ಕಾಜುಗಾರ

ಇದನ್ನೇ ಸ್ಟೀಫನ್ ಫಕ್ಸರು ಔಚಿತ್ಯಪೂರ್ಣವಾಗಿ ಗಮನಿಸಿದ್ದಾರೆ 'ಭಾರತದ ಬುಡಕಟ್ಟು ಜನಸಂಖ್ಯೆಯ ಬಹುಭಾಗವು ತಮ್ಮ ಮೂಲ ಭಾಷೆಯನ್ನು ಬಿಟ್ಟುಕೊಟ್ಟು, ತಮ್ಮ ನೆರೆಹೊರೆಯ ಜನರ ಉಪಭಾಷೆಗಳನ್ನೇ ಮಾತನಾಡುತ್ತಾರೆ, ಯಾಕೆಂದರೆ ಇವುಗಳಿಗೆ ಉತ್ಕೃಷ್ಟವಾದ ಸಂಸ್ಕೃತಿ ಇದ್ದು, ಹೆಚ್ಚು ಪರಿಣಿತವಾದ ನುಡಿಗಟ್ಟುಗಳಿವೆ. ಆದರೆ ಈ ಬುಡಕಟ್ಟುಗಳು ತಾವು ಹೊಸದಾಗಿ ಅಂಗೀಕರಿಸಿದ ಭಾಷೆಯಲ್ಲಿ ತಮ್ಮ ಮೂಲಭಾಷೆಯ ನಿರ್ಧಿಷ್ಟ ರಾಚನಿಕ ಹಾಗೂ ಧ್ವನಿಯ ವೈಶಿಷ್ಟ್ಯಗಳನ್ನು ಪಡೆನುಡಿಗಳನ್ನು, ಶಬ್ದಗಳನ್ನು ಉಳಿಸಿಕೊಳ್ಳಬಹುದಾಗಿತ್ತು'.[೧೦]

ಮೇಲಿನ ವಿಶ್ಲೇಷಣೆಯಿಂದ ಸ್ಪಷ್ಟವಾಗಿ ಕಾಣುವ ಸಂಗತಿ ಏನೆಂದರೆ ಕುಣಬಿ ಉಪಭಾಷೆಯು ನೆರೆಹೊರೆಯ ಹಿಂದೂ ಸಂಸ್ಕೃತಿ ಮತ್ತು ಭಾಷೆಯ ಪ್ರಭಾವದಿಂದಾಗಿ ಪರಿವರ್ತನೆಯ ಹಾದಿಯಲ್ಲಿದೆ. ಅವರು ನಿಧಾನವಾಗಿ ತಮ್ಮ ಮೂಲ ಉಪಭಾಷೆಯನ್ನು ಬಿಟ್ಟು ಬಿಡುತ್ತಿದ್ದಾರೆ. ಮರಾಠಿ, ತುಳು ಮತ್ತು ಕನ್ನಡದ ಪ್ರಭಾವ ದಟ್ಟವಾಗಿದೆ. ಮೇಲು ವರ್ಗದ ಹಿಂದೂಗಳು ತಮ್ಮ ಭಾಷೆಯಲ್ಲಿ ಉಪಯೋಗಿಸುತ್ತಿರುವ ಅನೇಕ ಸಂಸ್ಕೃತ ಶಬ್ದಗಳು ಕುಣಬಿಗಳ ಮಾತಿನಲ್ಲಿ ಧಾರಾಳವಾಗಿದೆ. ಇದು ಪ್ರಸ್ತುತ ಕುಣಬಿಗಳಲ್ಲಿ ನಡೆಯುತ್ತಿರುವ ಸಂಸ್ಕೃತೀಕರಣ ಹಾಗೂ ಹಿಂದುತ್ವದ ಪ್ರಕ್ರಿಯೆಯನ್ನು ಸ್ಪಷ್ಟವಾಗಿ ತೋರಿಸುತ್ತದೆ. ಅಲ್ಲದೇ, ಕುಣಬಿಗಳು ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ತತ್ಪರಿಣಾಮವಾಗಿ ಅವರ ಮಕ್ಕಳು ಪ್ರಾದೇಶಿಕ ಭಾಷೆಗಳಲ್ಲಿ ನಿರರ್ಗಳತೆಯನ್ನು ಸಾಧಿಸುತ್ತಾರೆ. ಕಾರಣವಿಷ್ಟೇ, ಶಾಲೆಗಳಲ್ಲಿ ಪ್ರಾದೇಶಿಕ ಭಾಷೆಯೇ ಶಿಕ್ಷಣ ಮಾಧ್ಯಮದ ಭಾಷೆಯಾಗಿದೆ. ಕುಣಬಿಗಳು, ವಿಶೇಷವಾಗಿ ಗಂಡಸರು ಬಾಹ್ಯ ಜಗತ್ತಿನೊಂದಿಗೆ ಹೆಚ್ಚು ತೆರೆದುಕೊಂಡಿದ್ದಾರೆ; ಹೀಗಾಗಿ ಅವರು ಪ್ರಾದೇಶಿಕ ಭಾಷೆಯನ್ನು ಅಭ್ಯಸಿಸುವ ಅಗತ್ಯವನ್ನು ಮನಗಂಡಿದ್ದಾರೆ. ಪರಿವರ್ತನೆಯ ಈ ಹಾದಿಯಲ್ಲಿ ಅವರ ಮೂಲ ಭಾಷೆ ಕಳೆದು ಹೋಗುತ್ತಿದೆ.

ಅವರು ಈಗ ಬುಡಕಟ್ಟೇತರ ಜನರು ಮಾತನಾಡುವಂತೆ ದ್ರಾವಿಡ ಭಾಷೆಗಳನ್ನು ಮಾತನಾಡುತ್ತಿದ್ದಾರೆ. ಹೀಗೆ, ಇಂಡೋ-ಆರ್ಯನ್ ಭಾಷೆಯಿಂದ ದ್ರಾವಿಡಿಯನ್ ಭಾಷಾರೂಪದೆಡೆಗೆ ಬದಲಾವಣೆಯಾಗತೊಡಗಿದೆ.

### ೩.೪ ಆಹಾರ ಪದ್ಧತಿಗಳು

ಜನರ ಪೌಷ್ಠಿಕತೆಯ ಮಟ್ಟವನ್ನು ಕಂಡುಹಿಡಿಯಲು ಆಹಾರ ಪದ್ಧತಿಯ ಅಧ್ಯಯನ ಮಾಡುವದು ಮುಖ್ಯವಾಗಿದೆ. ಆಹಾರ ವಿಧಾನಗಳು ಅನೇಕ ಅಂಶಗಳಿಂದ ಪ್ರಭಾವಿತವಾಗಿರುತ್ತವೆ; ಉದಾಹರಣೆಗೆ: ಪರಿಸರ, ಹವಾಮಾನ, ಬೇಸಾಯ ಮತ್ತು ಬೇಸಾಯ ಸಂಬಂಧಿ ಚಟುವಟಿಕೆಗಳು, ಆಹಾರ ವಸ್ತುಗಳ ಲಭ್ಯತೆ, ನಂಬಿಕೆ, ಸಂಪ್ರದಾಯ, ಸಾಂಸ್ಕೃತಿಕ ಆಚರಣೆಗಳು ಇತ್ಯಾದಿ. ವ್ಯಕ್ತಿಯೊಬ್ಬನ ಆರೋಗ್ಯ ಮಟ್ಟವನ್ನು ಕಂಡುಹಿಡಿಯಲು ಸಹ ಆಹಾರ ಪದ್ಧತಿ-ಸಹಾಯಕಾರಿಯಾಗಿದೆ.

ಎಲ್ಲ ಕಡೆಗಳಲ್ಲಿ 'ಬುಡಕಟ್ಟುಗಳು ತಮ್ಮದೇ ಆದ ನಂಬಿಕೆ ಹಾಗೂ ಆಹಾರ ಪದ್ಧತಿಗಳನ್ನು ಹೊಂದಿವೆ. ಆದರೆ ಈ ಆಹಾರ ಪದ್ಧತಿಗಳು ವಿಭಿನ್ನ ಬುಡಕಟ್ಟುಗಳಲ್ಲಿ, ಅಷ್ಟೇ ಏಕೆ, ಒಂದೇ ಬುಡಕಟ್ಟಿನ ವಿವಿಧ ವಿಭಾಗ, ಉಪವಿಭಾಗಗಳಲ್ಲಿ ಕೂಡ ಬೇರೆ ಬೇರೆಯಾಗಿರುತ್ತವೆ'.[೧೧] ರಾಜ್ಯಲಕ್ಷ್ಮೀಯವರು ಹೀಗೆ ಹೇಳುತ್ತಾರೆ 'ಬುಡಕಟ್ಟು ಹಾಗೂ ಬುಡಕಟ್ಟೇತರ ಜನರ ಜೀವನಶೈಲಿ ಹಾಗೂ ಆಹಾರ ಪದ್ಧತಿಗಳಲ್ಲಿ ಯಾವಾಗಲೂ ಮಹತ್ವದ ವ್ಯತ್ಯಾಸವಿದೆ'. ಶಶಿ ಬೈರಾತಿಯವರ ಅಭಿಪ್ರಾಯದಂತೆ, 'ನೈರ್ಮಲ್ಯ, ಆರೋಗ್ಯಶಾಸ್ತ್ರ, ಆಹಾರ, ಪೌಷ್ಠಿಕತೆ ಮುಂತಾದ ಸೂಕ್ತವಾದ ಆರೋಗ್ಯ ಪಾಲನೆಯ ವಿಧಾನಗಳ ಅರಿವು ಇಲ್ಲದೇ ಇರುವದು ಬುಡಕಟ್ಟು ಪ್ರದೇಶಗಳಲ್ಲಿ ಅಧಿಕ ಪ್ರಮಾಣದ ರೋಗ ಪ್ರಸಾರಣೆಯ ಮುಖ್ಯ ಕಾರಣಗಳಲ್ಲಿ ಒಂದಾಗಿದೆ'.

ಪ್ರಸ್ತುತ ಅಧ್ಯಯನದಲ್ಲಿ ಕುಣಬಿಗಳ ಆಹಾರ ಪದ್ಧತಿಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ; ಹಾಗೆಯೇ ಎಷ್ಟರ ಮಟ್ಟಿಗೆ ಪಾರಂಪರಿಕ ಆಹಾರ ಪದ್ಧತಿಗಳು ಆಧುನಿಕ ಅಭಿವೃದ್ಧಿ ಯೋಜನೆಗಳು, ಶಿಕ್ಷಣ, ನಾಗರಿಕ-ಜನರ ಸಂಪರ್ಕ ಮುಂತಾದವುಗಳ ಪ್ರಭಾವದಿಂದ ಬದಲಾವಣೆಗಳಾಗಿವೆ ಎಂಬುದನ್ನು ಕಂಡುಹಿಡಿಯುವ ಪ್ರಯತ್ನವನ್ನು ಮಾಡಲಾಗಿದೆ.

ಕುಣಬಿಗಳ ಪ್ರಧಾನ ಆಹಾರ ಕುದಿಸಿದ ಅಕ್ಕಿ (ಅನ್ನ). ಇದನ್ನು 'ಗಂಜಿ' ಅಥವಾ 'ಪೇಜ' ಎಂದು ಕರೆಯುತ್ತಾರೆ ಅಥವಾ ತರಕಾರಿ ಜೊತೆ ಬೇಯಿಸಿ, ಸೋಸಿ ತೆಗೆದ ದ್ರವ, ಮೀನು, ತೆಂಗಿನ ಕಾಯಿ ಹಾಗೂ ಮಸಾಲೆ ಪದಾರ್ಥಗಳಾದ ಜೀರಿಗೆ, ಬೆಳ್ಳೊಳ್ಳಿ, ಉಳ್ಳಾಗಡ್ಡಿ, ಮೆಣಸಿನಕಾಯಿ, ಮುಂತಾದವುಗಳನ್ನು ಅಡಿಗೆಯಲ್ಲಿ ಬಳಸುತ್ತಾರೆ. ಸಾಮಾನ್ಯವಾಗಿ ಮಣ್ಣಿನ ಗಡಿಗೆ ಹಾಗೂ ಅಲ್ಯೂಮಿನಿಯಂ ಪಾತ್ರೆಗಳನ್ನು ಅಡಿಗೆಗೆ ಬಳಸುತ್ತಾರೆ. ನೀರನ್ನು ಸಾಮಾನ್ಯವಾಗಿ

ಬಾವಿಯಿಂದ ಅಥವಾ ಸಮೀಪದ ಕೆರೆ ಅಥವಾ ನದಿಯಿಂದ ತರುತ್ತಾರೆ. ಮುಂಜಾನೆ ಹೊತ್ತು ಅನ್ನದೊಂದಿಗೆ ಸಾರು, ಚಟ್ನಿ ಅಥವಾ ಉಪ್ಪಿನಕಾಯಿಯೊಂದಿಗೆ ಸೇವಿಸುತ್ತಾರೆ. ಮಧ್ಯಾಹ್ನದ ಊಟದಲ್ಲಿ ಅನ್ನದೊಂದಿಗೆ ತರಕಾರಿ ಹಾಕಿದ ಸಾರು ಇರುತ್ತದೆ. ರಾತ್ರಿಯ ವೇಳೆ ಉಳಿದ ಆಹಾರದೊಂದಿಗೆ ಸಾರು, ಒಮ್ಮೊಮ್ಮೆ ಮೀನಿನ ಸಾರು ಸೇರಿಸಿಕೊಂಡು ಸೇವಿಸುತ್ತಾರೆ. ಈ ಆಹಾರ ಪದಾರ್ಥಗಳು ಅವರ ಆಹಾರದ ಅಗತ್ಯಗಳನ್ನು ಪೂರೈಸುತ್ತವೆ. ಆದರೆ ಇವುಗಳನ್ನು ಆರೋಗ್ಯಪೂರ್ಣವಾಗಿ ತಯಾರಿಸುವುದಿಲ್ಲ.

ಇವರು ವಿವಿಧ ತರಕಾರಿಗಳನ್ನು ಬೆಳೆಯುತ್ತಾರೆ ಹಾಗೂ ತಿನ್ನುತ್ತಾರೆ. ಉದಾ: ವಟಾಣಿ, ಬೆಂಡೆ, ಚಪ್ಪವರೆ, ಸಿಹಿಗುಂಬಳ, ಹಾಗಲ, ಸವತೆಕಾಯಿ, ಬದನೆ, ಬೂದುಗುಂಬಳ ಮತ್ತು ಕೆಲವು ಎಲೆ ತರಕಾರಿಗಳು ಹಾಗೂ ಕೆಲವು ಕಂದ ಮೂಲಗಳು, ಗೆಣಸು ಮರಗೆಣಸು ಮುಂತಾದವುಗಳು.

'ಕುಣಬಿಗಳಿಗೆ ಕೆಸುವಿನ ಸಾರೆಂದರೆ ಬಹಳ ಇಷ್ಟ. ಎಲೆ ಅಲ್ಲದೆ ಅದರ ಕಾಂಡವನ್ನು ಬಹಳ ಮುಖ್ಯವಾದ ತರಕಾರಿಯಾಗಿ ಬಳಸುತ್ತಾರೆ. ಒಟಾಣಿ ಮತ್ತು ಬಸಳೆಯ ಸಾರು ಬಹಳ ಸಾಮಾನ್ಯವಾದದ್ದು. ಥರ್ಸ್ಟನ್‌ರ ಪ್ರಕಾರ ಕುಣಬಿಗಳೆ ಗೆಣಸು, ಗೋಡಂಬಿ ಹಾಗೂ ಮರಗೆಣಸುಗಳನ್ನು ಗೋವೆಯಿಂದ ಉತ್ತರ ಕನ್ನಡ ಜಿಲ್ಲೆಗೆ ತಂದವರೆ ಅವರು. ಅನೇಕ ಬಗೆಯ ಕಾಡು ಸಸ್ಯಗಳನ್ನು ಹಾಗೂ ಗಡ್ಡೆಗಳನ್ನು ಆಹಾರವಾಗಿ ಉಪಯೋಗಿಸುತ್ತಾರೆ. ಸುತ್ತಮುತ್ತಲಿನ ಕಾಡು ಪ್ರದೇಶಗಳಲ್ಲಿ ಇಂದಿಗೂ ಕೂಡ ಕುಣಬಿಗಳು ಋತುಮಾನಕ್ಕನುಗುಣವಾಗಿ ಸಿಗುವ ಹಣ್ಣು, ಹಸಿ ಗಡ್ಡೆಗಳು, ಹಲಸಿನ ಹಣ್ಣು ಮತ್ತು ಜೇನು ತುಪ್ಪಗಳ ಮೇಲೆ ಅವಲಂಬಿಸಿ ಬದುಕುತ್ತಾರೆ'.[೨]

ಹೋಳಿ, ದೀಪಾವಳಿ, ನಾಗರಪಂಚಮಿ, ನವರಾತ್ರಿ, ಕೃಷ್ಣ ಜನ್ಮಾಷ್ಟಮಿ ಹಾಗೂ ಹಬ್ಬ ಹರಿದಿನಗಳಂದು ಕುಣಬಿಗಳು ವಿವಿಧ ಬಗೆಯ ಖಾದ್ಯ ತಯಾರಿಸುತ್ತಾರೆ. ಸಾಮಾನ್ಯವಾಗಿ ಈ ಖಾದ್ಯಗಳನ್ನು ಸ್ಥಳೀಯ ಹಿಂದೂ ಜನರು ಮಾಡುವ ರೀತಿಯಲ್ಲೇ ಮಾಡುತ್ತಾರೆ. ಗುಂಡಾ (ಅಕ್ಕಿ ಹಾಗೂ ಮೆಣಸು ಸೇರಿಸಿ ಮಾಡಿದ್ದು), ಪತ್ರೊಡೆ (ಬಸಳೆ ಹಾಗೂ ಅನ್ನ ಸೇರಿಸಿದ್ದು), ಶ್ಯಾವಿಗೆ ಮತ್ತು ಪಾಥೋಳಿ (ಅರಿಶಿಣದ ಎಲೆಯ ಮೇಲೆ ಅನ್ನ ಮತ್ತು ತೆಂಗು ಸೇರಿಸಿ ಮಾಡುವರು). ಇಂತಹ ನಿರ್ದಿಷ್ಟ ದೇಶೀ ಖಾದ್ಯ ತಯಾರಿಸುತ್ತಾರೆ. ಅಮಾವಾಸೆಯಂದು ಬಸಳೆಯ ಸಾರು ಕಡ್ಡಾಯವಾಗಿ ಆಗಲೇಬೇಕು. ಈ ದಿನದಂದು ಊಟವನ್ನು ಕಾಡುಗಿಡದ ಎಲೆಯಲ್ಲಿ ಉಣ್ಣುತ್ತಾರೆ. ಹೋಳಿ ಹಬ್ಬದಂದು ಇಡ್ಲಿ, ಪಾಯಸ ಹಾಗೂ ವ್ಯಂಜನ ಪದಾರ್ಥಗಳನ್ನು ಮಾಡುತ್ತಾರೆ. ಇಂತಹ ಸಂದರ್ಭಗಳಲ್ಲಿ ಮಾಡುವ ಖಾದ್ಯ ಪದಾರ್ಥಗಳು ಸ್ಥಳೀಯ ಹಿಂದೂ ಜನರಿಂದ ಅನುವಾದಂಥವು. ಹಬ್ಬ ಹರಿದಿನಗಳಂದು ಮಾಂಸಾಹಾರ ನಿಷಿದ್ಧ. ಹಬ್ಬವಾದ ನಂತರ

ತೆಗೆದುಕೊಳ್ಳಬಹುದು. ಅನಂತಕೃಷ್ಣ ಎಲ್.ಕೆ. ಅಯ್ಯರರ ಪ್ರಕಾರ 'ಪ್ರಾಚೀನ ಬುಡಕಟ್ಟುಗಳು ಆಹಾರದ ಪಾವಿತ್ರ್ಯತೆಗೆ ಅತಿಯಾದ ಮಹತ್ವ ಕೊಡುತ್ತವೆ. ಆಹಾರ ಪದಾರ್ಥಗಳ ಆಯ್ಕೆ, ಅವುಗಳ ತಯಾರಿಕಾ ವಿಧಾನ, ಅವುಗಳನ್ನು ಸೇವಿಸುವ ರೀತಿ – ಇವುಗಳ ಬಗ್ಗೆ ಕಟ್ಟುನಿಟ್ಟಾದ ನಿಯಮಗಳನ್ನು ಆಯಾ ಧರ್ಮಗಳಲ್ಲಿ ಹೇಳಲಾಗಿರುತ್ತದೆ; ಇವುಗಳನ್ನು ಅವರು ಈಗಲೂ ಪಾಲಿಸುತ್ತಾರೆ'.

ವಿಭಿನ್ನವಾದ ನಂಬಿಕೆ, ಮೂಢನಂಬಿಕೆ ಹಾಗೂ ಆಹಾರದ ಬಗ್ಗೆ ವಿಧಿ–ನಿಷೇಧಗಳು ಇವುಗಳ ಕಾರಣದಿಂದಾಗಿ ಆಹಾರ ಪದ್ಧತಿಯಲ್ಲಿ ಕೆಲವು ನಿರ್ಧಿಷ್ಟವಾದ ಕಟ್ಟುಪಾಡುಗಳಿವೆ. 'ಕುಣಬಿಗಳಲ್ಲಿ ಕೆಲವೊಂದು ಆಹಾರ ಪದಾರ್ಥಗಳ ಬಗ್ಗೆ ಪ್ರತಿಬಂಧವಿದೆ. ಹಾಲು ಮತ್ತು ಹಾಲಿನ ಉತ್ಪನ್ನಗಳಾದ ತುಪ್ಪ, ಬೆಣ್ಣೆ, ಮಜ್ಜಿಗೆ ಇವುಗಳ ಬಳಕೆ ನಗಣ್ಯವಾಗಿದೆ. ಕುಣಬಿಗಳು ಮಾಂಸಾಹಾರಿಗಳಾದರೂ ಕೂಡ, ಸಾಕು ಪ್ರಾಣಿಗಳಾದ ಕುರಿ, ಆಡು, ಹಂದಿ, ಇವುಗಳ ಮಾಂಸಗಳನ್ನು ತಿನ್ನುವುದಿಲ್ಲವೆಂಬುದು ಆಶ್ಚರ್ಯ. ಈ ಅರ್ಥದಲ್ಲಿ ಅವರು ಉಳಿದ ಬುಡಕಟ್ಟು ಹಾಗೂ ಅನುಸೂಚಿತ ಜಾತಿಯ ಜನರಿಗಿಂತ ಮೇಲ್ಮಟ್ಟದಲ್ಲಿದ್ದವರೆಂದು ತಿಳಿಯುತ್ತಾರೆ. ಪಕ್ಷಿಗಳನ್ನು ಸಾಕುವುದು ಕಟ್ಟುನಿಟ್ಟಾಗಿ ನಿಷೇಧಿಸಲ್ಪಟ್ಟಿದೆ. ಅವುಗಳೊಂದಿಗೆ ಸಂಪರ್ಕ ಅಥವಾ ಅವುಗಳ ಹಿಕ್ಕೆಯ ಸಂಪರ್ಕ ಮಾಲಿನ್ಯದಲ್ಲಿ ಪರ್ಯಾವಸಾನವಾಗುತ್ತದೆ. ಹಿಂದಿನ ಕಾಲದಲ್ಲಿ ಯಾರಾದರು ಇವುಗಳ ಸಂಪರ್ಕದಲ್ಲಿ ಬಂದರೆ, ತನ್ನನ್ನು ಶುದ್ಧೀಕರಿಸಿಕೊಳ್ಳುವುದಕ್ಕಾಗಿ ಅವರು ಆಕಳ ಸಗಣಿ ಮಿಶ್ರಿತ ನೀರು ಕುಡಿಯಬೇಕಾಗುತ್ತಿತ್ತು. ಈ ಶುದ್ಧೀಕರಣದ ಪ್ರಕ್ರಿಯೆ ಹಿಂದೂಕರಣದ ಪ್ರಭಾವ ತೋರಿಸುತ್ತದೆ. ಪಕ್ಷಿಗಳನ್ನು ಸಾಕದೆ ಇರುವುದಕ್ಕೆ, ಅದರ ಮಾಂಸ ತಿನ್ನದೇ ಇರುವುದಕ್ಕೆ ಪ್ರಾದೇಶಿಕ ಲೇಖಕರು ವಿಭಿನ್ನ ಕಾರಣಗಳನ್ನು ಕೊಟ್ಟಿದ್ದಾರೆ. ಜೋಶಿ, ಈಶ್ವರ ಎನ್. ಹಾಗೂ ನಾಯಕ ಶ್ರೀಧರ ಪಿ. ಅವರ ಅಭಿಪ್ರಾಯದಲ್ಲಿ 'ಕೊ' ಅಕ್ಷರದಿಂದ ಪ್ರಾರಂಭವಾಗುವ ಪಕ್ಷಿಗಳ ಮಾಂಸ ತಿನ್ನುವುದು ನಿಷಿದ್ಧ. ನಾವಡ ಎ.ವಿ.ರವರ ಪ್ರಕಾರ ಪಕ್ಷಿಯನ್ನು ಕುಲದೇವತೆಯ ಸಂಕೇತವೆಂದು ಪರಿಗಣಿಸಿದ್ದರಿಂದ, ಪಕ್ಷಿ ಸಾಕಾಣಿಕೆ ಹಾಗೂ ಭಕ್ಷಣೆ ಎರಡೂ ನಿಷಿದ್ಧ'.[೧೩]

ಈ ಇಬ್ಬರೂ ಲೇಖಕರ ಅಭಿಪ್ರಾಯಗಳು ತದ್ವಿರುದ್ಧವಾಗಿವೆ ಏಕೆಂದರೆ ಕುಣಬಿಗಳು ಯಾವುದೇ ಸಾಕು ಪ್ರಾಣಿಯ ಮಾಂಸ ತಿನ್ನುವುದಿಲ್ಲ. ಅವರು ಯಾವುದೇ ಪ್ರಾಣಿಯನ್ನು ಸಾಕುವುದಿಲ್ಲ, ಆದರೆ ಅವರು ಕಾಡು ಪ್ರಾಣಿಗಳನ್ನು, ಕಾಡು ಪಕ್ಷಿಗಳನ್ನು ಬೇಟೆಯಾಡಿ ಕೊಂದು ತಿನ್ನುತ್ತಾರೆ. ಆದ್ದರಿಂದ ಕೇವಲ 'ಕೊ' ಎಂಬ ಅಕ್ಷರದಿಂದ ಪ್ರಾರಂಭವಾಗುವ ಪಕ್ಷಿಗಳ ಮಾಂಸ ಭಕ್ಷಣೆ ನಿಷಿದ್ಧವಾದದ್ದು ಎಂಬ ವಾದ ಅಸಮರ್ಥನೀಯ. ಹಾಗೆಯೇ, ಅವರ ಆಹಾರ

ವಿಷಯಕ್ಕೆ ವಿಧಿ-ನಿಷೇಧಗಳು ಸಾಕು ಪ್ರಾಣಿಯನ್ನು ಒಳಗೊಂಡಿರುವುದರಿಂದ, ಪಕ್ಷಿಯೊಂದನ್ನೆ ಕುಲದೇವರ ಸಂಕೇತವೆಂದು ಹೇಳುವಂತಿಲ್ಲ. ನಾನು ಕೈಗೊಂಡ ಅಧ್ಯಯನದಲ್ಲಿ ಯಾರೂ ಪಕ್ಷಿಯನ್ನು ಕುಲದೇವರು ಎಂದು ಹೇಳಲಿಲ್ಲ.

ಪ್ರತಿಬಂಧಿತ ಆಹಾರ ಪದಾರ್ಥಗಳಂತೆ, ಮಾರುಕಟ್ಟೆಯಲ್ಲಿ ಮಾರಾಟವಾಗುವ ಮೀನು ವಿರಳವಾಗಿ ಬಳಕೆಯಾಗುತ್ತದೆ. ಆದರೆ ತಾವೇ ಹಿಡಿದ ಮೀನನ್ನು ತಿನ್ನುತ್ತಾರೆ. ಕುಣಬಿಗಳ ದೃಷ್ಟಿಯಲ್ಲಿ ಆಹಾರಕ್ಕಾಗಿ ಸಾಕು ಪ್ರಾಣಿಗಳನ್ನು ಕೊಲ್ಲುವುದು ಉಚಿತವಲ್ಲ. ಆದರೆ ಬೇಟೆಯಾಡಿ ಕಾಡು ಪ್ರಾಣಿಗಳನ್ನು ಕೊಲ್ಲುವುದು ಸಮರ್ಥನೀಯ, ಏಕೆಂದರೆ ಅದರಲ್ಲಿ ಶ್ರಮ ಮತ್ತು ಹೋರಾಟ ಅಡಕವಾಗಿದೆ. ಆಹಾರವೆಂದು ಬಳಕೆಯಾದ ನಿರ್ಧಿಷ್ಟ ಕಾಡು ಪ್ರಾಣಿಗಳು ಕುಣಬಿಗಳಿಗೆ ಪವಿತ್ರವಾಗುತ್ತದೆ. ಅವುಗಳ ಹೆಸರನ್ನು ಕುಲದ ಕುಲದೇವತೆಯಾಗಿ ಉಪಯೋಗಿಸುತ್ತಾರೆ. ಇಂದಿಗೂ ಕೂಡ ಮಾರುಕಟ್ಟೆಯಲ್ಲಿ ಖರೀದಿಸಿದ ಮೀನನ್ನು ಮನೆಯ ಹೊರಗಡೆ ಬೇಯಿಸಿದರೆ, ಬೇಟೆ ಆಡಿದ ಕಾಡು ಪ್ರಾಣಿಗಳ ಮಾಂಸವನ್ನು ಮನೆಯ ಒಳಗೆ ಬೇಯಿಸುತ್ತಾರೆ. ಹಾಗೆಯೇ ಕುಲದೇವರೆಂದು ಪರಿಗಣಿತವಾದ ಕೆಲವು ಪ್ರಾಣಿಗಳ ಮಾಂಸಾಹಾರ ಕುಣಬಿಗಳಿಗೆ ನಿಷಿದ್ಧ. ಉದಾಹರಣೆಗೆ: ನವಿಲು, ಗಿಣಿ, ಗೋವು ಮುಂತಾದವು. ಗೋ ಮಾಂಸ ಭಕ್ಷಣೆ ಖಡಾಖಂಡಿತವಾಗಿ ನಿಷೇಧಿಸಲ್ಪಟ್ಟಿದ್ದು, ಹಿಂದೂ ಧರ್ಮದ ಬಗ್ಗೆ ಅವರಿಗಿರುವ ಶ್ರದ್ಧೆ ತೋರಿಸುತ್ತದೆ.

ಹಾರ್ಸ್ಕೋವಿಟ್ಸ್ ಮೆಲ್‌ವಿಲೇ ಜೆ. ತಮ್ಮ 'ಪುರಾತನರ ಆಹಾರ ನಿಷೇಧಗಳು ಹಾಗೂ ಆಯ್ಕೆಗಳು' ಎಂಬ ವರದಿಯಲ್ಲಿ ಹೀಗೆ ಹೇಳುತ್ತಾರೆ. 'ಆಹಾರ ಮತ್ತು ಬಟ್ಟೆ ಅತ್ಯವಶ್ಯಕವಾದ ಬಳಕೆಯಾಗುವ ಸರಕುಗಳು. ಬಹುತೇಕ ಅನಕ್ಷರಸ್ಥ ಸಮಾಜಗಳಲ್ಲಿ ಇವುಗಳು ಹಂಚಿಕೆಯಾಗುವ ಆರ್ಥಿಕ ಪ್ರಕ್ರಿಯೆಗಳು ಬಹಳ ಸರಳವಾಗಿರುತ್ತವೆ. ಇಲ್ಲಿರುವ ನಿಜವಾದ ಸಮಸ್ಯೆ ಆರ್ಥಿಕ ವಲಯದಿಂದ ಹೊರಗೆ ಇರುತ್ತದೆ. ಕೇವಲ ಪ್ರಾಣ ಧಾರಣೆಯ ಮಟ್ಟದಲ್ಲಿರುವ ಜನರು ಕೂಡ ತಮಗೆ ಲಭ್ಯವಿರುವ ಆಹಾರ ಪದಾರ್ಥಗಳನ್ನು ಬಳಸುವುದಿಲ್ಲವೆಂಬುದನ್ನು ನಾವು ನೋಡಿದ್ದೇವೆ. ಇದಕ್ಕೆ ಕಾರಣವೆಂದರೆ ಸೇವನೆಗೆ ಯೋಗ್ಯವಾದ ಆಹಾರ ಯಾವುದೆಂಬುದರ ಬಗ್ಗೆ ಪ್ರಸ್ತಾಪಿತವಾದ ಕಲ್ಪನೆಗಳು ಅಥವಾ ಧಾರ್ಮಿಕ ಇಲ್ಲವೆ ಸಾಮಾಜಿಕ ಸ್ವರೂಪದ ವಿಶೇಷ ನಿಷೇಧಗಳು. ಇದೇ ತರದ ಆಯ್ಕೆ ಉಡುಪು ಹಾಗೂ ಬಟ್ಟೆಯ ವಿಚಾರದಲ್ಲಿಯೂ ಇದೆ. ಇಲ್ಲಿ ಉತ್ಪಾದಕ ಸಾಮರ್ಥ್ಯವು ವರ್ಗಗಳಲ್ಲಿಯ ಅಂತರವನ್ನು ಸೂಚಿಸುವಂತಿರುತ್ತದೆ, ಹಾಗೂ ಬಟ್ಟೆ/ಡ್ರೆಸ್ ಸಾಮಾಜಿಕ ಅಂತಸ್ಥಿತ ಕುರುಹು ಆಗುತ್ತದೆ.

ಸಾಮಾನ್ಯವಾಗಿ ಕುಣಬಿಗಳು ಆಹಾರಕ್ಕಾಗಿ ಈ ಕೆಳಗಿನ ಪ್ರಾಣಿಗಳನ್ನು ಬೇಟೆಯಾಡುತ್ತಾರೆ. ಕಾಡು ಹಂದಿ, ಮುಳ್ಳು ಹಂದಿ, ಮೊಲ, ಜಿಂಕೆ, ಮೊಸಳೆ ಸೂಚಕ ಹಲ್ಲಿ, ಅಳಿಲು, ಕಾಡು ಹಕ್ಕಿ, ಮುಂತಾದವು. ಕೆಲವೊಂದು ಪಕ್ಷಿಗಳನ್ನು ಬಲೆ ಹಾಕಿ ಹಿಡಿದು ಆಹಾರಕ್ಕಾಗಿ ಬಳಸುತ್ತಾರೆ. ಅವರಿಗೆ ಕಾಡು ಹಂದಿ, ಮುಳ್ಳು ಹಂದಿ ಹಾಗೂ ಮೊಲದ ಮಾಂಸ ಬಹಳ ಇಷ್ಟ. ಆದರೆ ಬೇಟೆಯ ಹೊತ್ತಿನಲ್ಲಿ ಅಕಸ್ಮಾತಾಗಿ ನವಿಲು ಕೊಲ್ಲಲ್ಪಟ್ಟರೆ ಅದನ್ನು ತಿನ್ನುತ್ತಾರೆ.

ಹಿಂದಿನ ಕಾಲದಲ್ಲಿ ಕುಣಬಿಗಳು ಗಂಜಿ, ರಾಗಿ, ಕಾಡು ಹಣ್ಣು, ಕಾಡು ಗಡ್ಡೆ, ಜೇನುತುಪ್ಪ, ಕಾಡು ಪಕ್ಷಿಗಳ ಮೇಲೆ ಜೀವಿಸಿದ್ದರು. ರಾಗಿ ಶಕ್ತಿದಾಯಕ ಆಹಾರವಾಗಿತ್ತು, ಏಕೆಂದರೆ ಅವರು ಬೇಸಾಯ, ಕೂಲಿ, ಬಾವಿ ತೋಡುವುದು ಹಾಗೂ ಇನ್ನಿತರ ಕೆಲಸಗಳಲ್ಲಿ ತೊಡಗಿ ಶ್ರಮಜೀವಿಗಳಾಗಿದ್ದರು. ತಿನ್ನುವ ಆಹಾರ ಮತ್ತು ಮಾಡುವ ಕೆಲಸ ಇವೆರಡರ ನಡುವೆ ನಿಕಟ ಸಂಬಂಧವಿದೆ ಎಂಬುದು ಇದರಿಂದ ಗೊತ್ತಾಗುತ್ತದೆ.

ಸದ್ಯಕ್ಕೆ ಕುಣಬಿಗಳಲ್ಲಿ ಚಹಾ ಅತ್ಯಂತ ಮುಖ್ಯ ಪೇಯ. ಹಿಂದಿನ ಕಾಲದಲ್ಲಿ ಮಾದಕದ್ರವ್ಯ ಸೇವನೆ ನಿಷೇಧವಾಗಿತ್ತು. ಇವರು ಮಾದಕ ದ್ರವ್ಯಗಳನ್ನು ತಯಾರಿಸುವದೂ ಇಲ್ಲ ಮತ್ತು ಭಾರತದ ಇತರೆ ಬುಡಕಟ್ಟುಗಳಲ್ಲಿ ಕಂಡುಬರುವಂತೆ ಅವುಗಳನ್ನು ತಮ್ಮ ದೇವರಿಗೆ ಅರ್ಪಿಸುವುದೂ ಇಲ್ಲ. ಆದರೆ ಇತ್ತೀಚೆಗೆ ಅವರಲ್ಲಿ ಕೆಲವರು ಮಾದಕ ದ್ರವ್ಯಗಳನ್ನು ಮುಕ್ತವಾಗಿ ಕುಡಿಯುತ್ತಾರೆ.

**ಕೋಷ್ಟಕ ೩.೧**
**ಮದ್ಯಪಾನ ಮಾಡುವವರ ಪ್ರಮಾಣ**

| ಕ್ರಸಂ. | ಮದ್ಯಪಾನ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಪ್ರತಿ ದಿನ ಕುಡಿಯುವುದಾಗಿ | ೭೧ | ೨೩.೬೬ |
| ೨ | ವಾರದಲ್ಲಿ ಒಂದೆರಡು ಸಲ | ೩೪ | ೧೧.೩೪ |
| ೩ | ಜಾತ್ರೆ, ಉತ್ಸವ ಸಂದರ್ಭದಲ್ಲಿ | ೧೦೯ | ೩೬.೩೪ |
| ೪ | ಕುಡಿಯುವುದಿಲ್ಲವೆಂದು ಹೇಳಿದವರು | ೮೬ | ೨೮.೬೬ |
| | ಒಟ್ಟಾರೆ | ೩೦೦ | ೧೦೦.೦೦ |

ವ್ಯಕ್ತಿ ಅಧ್ಯಯನ ವಿಧಾನದಿಂದ ಅವಲೋಕಿಸಿದಾಗ ೨೧೪ ಗಂಡಸರು (೭೧.೩೪) ಮಾದಕ ದ್ರವ್ಯಗಳನ್ನು ಕುಡಿಯುವದಾಗಿ ಹೇಳಿದರು ಹಾಗೂ ೮೬ (೨೮.೬೬) ಕುಡಿಯುವುದಿಲ್ಲವೆಂದು ತಿಳಿಸಿದರು. ಮಾದಕ ಪೇಯ ಸೇವಿಸುವವರಲ್ಲಿ ೭೧ (೨೩.೬೬

ಪ್ರತಿಶತ) ರಷ್ಟು ಪ್ರತಿದಿನ ಕುಡಿಯುವದಾಗಿ, ೩೪ (೧೧.೩೪ ಪ್ರತಿಶತ) ರಷ್ಟು ವಾರದಲ್ಲಿ ಒಂದೆರಡು ಸಲ ಕುಡಿಯುವದಾಗಿ ಹಾಗೂ ೧೦೯ (೩೬.೩೪ ಪ್ರತಿಶತ) ರಷ್ಟು ಜನ ಜಾತ್ರೆ, ಉತ್ಸವ, ಇಂತಹ ವಿಶೇಷ ಸಂದರ್ಭಗಳಲ್ಲಿ ಕುಡಿಯುವದಾಗಿ ತಿಳಿಸಿದರು. ಹೀಗೆ ಇಂದು ಕುಣಬಿಗಳಲ್ಲಿ ಬಹುಸಂಖ್ಯಾತ ಜನರು ಮಾದಕ ಪೇಯ ಸೇವಿಸುತ್ತಾರೆ.

ಕೋಷ್ಟಕವನ್ನು ಗಮನಿಸಿದಾಗ ಕುಣಬಿಗಳಲ್ಲಿ ಮದ್ಯಪಾನ ಮಾಡುವವರ ಸಂಖ್ಯೆ ಅಧಿಕವಾಗಿದೆ. ಜಾತ್ರೆ ಮತ್ತು ಉತ್ಸವಗಳಲ್ಲಿ ಅಧಿಕ ಕುಣಬಿಗಳು ಮದ್ಯಪಾನ ಮಾಡುತ್ತಾರೆ, ಆದರೆ ಆಧುನಿಕ ಸಂಸ್ಕೃತಿ ಮತ್ತು ಶಿಕ್ಷಣದಿಂದ ಕೆಲವು ಕುಣಬಿಗಳು ಮದ್ಯಪಾನದಿಂದ ದೂರವಿದ್ದದ್ದು ವಿಶೇಷವಾಗಿದೆ.

ಎಲೆ,ಅಡಿಕೆ ಜಗಿಯುವದು ಅವರಲ್ಲಿ ಜನಪ್ರಿಯವಾಗಿದೆ. ಹೆಂಗಸರು, ಗಂಡಸರು ಇಬ್ಬರೂ ತಂಬಾಕು ಸೇರಿಸಿ ಜಗಿಯುತ್ತಾರೆ. ಕೆಲವರು ಸುವಾಸನೆಗಾಗಿ ಕಾಚನ್ನು ಉಪಯೋಗಿಸುತ್ತಾರೆ, ಬೀಡಿಯು ಜನಪ್ರಿಯವಾಗಿದೆ.

ಸ್ಥಿರ ಬೇಸಾಯ, ಕಾಡು ಸವರಿಕೆ, ಕಾಡು ಸಂರಕ್ಷಣೆ, ಪಟ್ಟಣಗಳಿಗೆ ವಲಸೆ ಈ ಕಾರಣಗಳಿಂದಾಗಿ ಕುಣಬಿಗಳು ಸೇವಿಸುತ್ತಿರುವ ಆಹಾರ ಪ್ರಕಾರಗಳಲ್ಲಿ ಅನೇಕ ಬದಲಾವಣೆಗಳಾಗುತ್ತಿರುವದು ಮೇಲಿನ ಚರ್ಚೆಯಿಂದ ವಿದಿತವಾಗಿತ್ತದೆ. ಇಂದು ಕುಣಬಿಗಳಿಗೆ ಅಕ್ಕಿ ಪ್ರಧಾನ ಆಹಾರವಾಗಿದೆ. ಕೆಲವು ನಿರ್ಧಿಷ್ಟ ಪ್ರದೇಶಗಳಲ್ಲಿ ಪಕ್ಷಿಗಳು ಸೇರಿದಂತೆ ಸಾಕು ಪ್ರಾಣಿಗಳ ಮಾಂಸ ಸೇವನೆಯೂ ಕಂಡುಬಂದಿದೆ. ಮೊದಲಿಗೆ ಇದು ನಿಷಿದ್ಧವಾಗಿತ್ತು.

**ಕೋಷ್ಟಕ ೩.೨**
**ಆಹಾರ ವಿಷಯವಾಗಿ ಹೊಂದಿರುವ ವಿವರ**

| ಕ್ರಸಂ. | ಆಹಾರ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಆಹಾರ ಪದ್ಧತಿ ಉಲ್ಲಂಘನೆ/ಸಮರ್ಥನೆ | ೨೨೪ | ೭೪.೬೬ |
| ೨ | ವಿರೋಧ | ೭೬ | ೨೫.೩೪ |
| | ಒಟ್ಟಾರೆ | ೩೦೦ | ೧೦೦.೦೦ |

ಕೋಷ್ಟಕ ೩.೨ ರಲ್ಲಿ ಆಹಾರ ವಿಷಯವಾಗಿ ಸಾಂಪ್ರದಾಯಿಕ ನಿಯಮಗಳ ಕಟ್ಟುಪಾಡುಗಳನ್ನು ಉಲ್ಲಂಘಿಸಿದ ಬಗ್ಗೆ ವ್ಯಕ್ತಿ ಅಧ್ಯಯನ (Case Study) ವಿಧಾನದಿಂದ ಅವಲೋಕಿಸಿದಾಗ ಗ್ರಹಿಕೆಗಳ ಮೌಲ್ಯಮಾಪನ ಮಾಡಲಾಯಿತು. ಮಾಹಿತಿದಾರರಲ್ಲಿ ೨೨೪ (೭೪.೬೬ ಪ್ರತಿಶತ) ರಷ್ಟು ಜನರು ಆಹಾರ ವಿಷಯಕ ವಿಧಿ-ನಿಷೇಧಗಳ ಉಲ್ಲಂಘನೆಯನ್ನು

ಸಮರ್ಥಿಸುತ್ತಾರೆ. ಆದರೆ ೭೬ (೨೫.೩೪ ಪ್ರತಿಶತ) ಜನರು ವಿರೋಧಿಸುತ್ತಾರೆ. ಇದರಿಂದಾಗಿ ಕುಣಬಿಗಳಲ್ಲಿ ಆಹಾರ ಪದಾರ್ಥಗಳ ಬಗ್ಗೆ ಈ ಹಿಂದೆ ಇದ್ದ ಕಟ್ಟುಪಾಡು, ವಿಧಿ-ನಿಷೇಧಗಳು ಬದಲಾಗತೊಡಗಿವೆ ಎಂಬುದು ಕಂಡುಬರುತ್ತದೆ. ಅಲ್ಲದೆ, ಸಮುದಾಯದ ಹಿರಿಯರು, ಯುವಕರು, ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ಉಲ್ಲಂಘಿಸುವುದನ್ನು ತಾಳಿಕೊಂಡಿದ್ದಾರೆ ಎಂಬುದು ಗೊತ್ತಾಗುತ್ತದೆ.

ಅರಣ್ಯ ನಾಶ ಹಾಗೂ ತತ್ಪರಿಣಾಮವಾಗಿ ಬೇಟೆಯ ಚಟುವಟಿಕೆಗಳು ಕ್ಷೀಣಿಸಿದ್ದರಿಂದ ಅವರು ತಮ್ಮ ಆಹಾರ ಪದ್ಧತಿಯಲ್ಲಿ ಬದಲಾವಣೆ ತರುವದು ಅನಿವಾರ್ಯವಾಗಿತ್ತು. ಕಾಡು ಪ್ರಾಣಿಗಳು ದೊರೆಯುವದು ಕಠಿಣವಾದದ್ದರಿಂದ ಸಾಕು ಪ್ರಾಣಿಗಳ ಮಾಂಸ ಸೇವನೆ ಅನಿವಾರ್ಯವಾಯಿತು. ಕೆಲವು ಕುಟುಂಬಗಳಲ್ಲಿ ಪಕ್ಷಿ ಪಾಲನೆಯೂ ಕಂಡುಬಂದಿದೆ. ಗುರಿಕಾರ, ರಾಯಬಾರಿ ಮತ್ತು ಗದ್ಯಾ ಇವರು ಸಹ ಈಗ ಮಾಂಸಾಹಾರ ಸೇವಿಸುತ್ತಾರೆ; ಆದರೆ ಈ ಹಿಂದೆ ಇದು ನಿಷಿದ್ಧವಾಗಿತ್ತು.

ಸ್ಥಿರ ಬೇಸಾಯ ಮತ್ತು ನೆರೆಹೊರೆಯ ಸಮುದಾಯಗಳ ಪ್ರಭಾವದಿಂದಾಗಿ ಕುಣಬಿಗಳು ಕೆಲವೊಂದು ಬಾಳಿಕೆ ಬರುವಂಥ ಆಹಾರ ಪದಾರ್ಥಗಳನ್ನು ತಯಾರಿಸುತ್ತಿದ್ದಾರೆ. ಉದಾ: ಪಾಪಡ, ಉಪ್ಪಿನಕಾಯಿ, ಹಣ್ಣಿನ ಜ್ಯಾಂ, ಇತ್ಯಾದಿ. ಇವುಗಳನ್ನು ಡಬ್ಬಿಗಳಲ್ಲಿ ಜೋಪಾನವಾಗಿ ಸಂಗ್ರಹಿಸಿ, ಮಳೆಗಾಲದಲ್ಲಿ ಬಳಸುತ್ತಾರೆ. ಈ ಕಾಲದಲ್ಲಿ ಶ್ರಮದ ಕೆಲಸವನ್ನೇ ಅವಲಂಬಿಸಿದಂಥ ಕೆಲವರು ಕೆಲಸವಿಲ್ಲದೆ ಖಾಲಿ ಕೂಡಬೇಕಾಗುತ್ತದೆ ಮತ್ತು ಪ್ರಧಾನ ಆಹಾರ ಸಾಕಷ್ಟು ಪ್ರಮಾಣದಲ್ಲಿ ಸಿಗುವದಿಲ್ಲ.

ಹಿಂದಿನ ಕಾಲದಲ್ಲಿ ಅವರು ತಮ್ಮ ಆಹಾರಕ್ಕಾಗಿ ಕಾಡನ್ನೇ ಅವಲಂಬಿಸಿದ್ದರಿಂದ ಅವರ ಆಹಾರ ಕ್ರಮದಲ್ಲಿ ಕಾಳು, ತರಕಾರಿಗಳಿಗೆ ಸ್ಥಾನವೇ ಇರಲಿಲ್ಲ. ಆದರೆ ಅವರು ಇಂದು ಧಾನ್ಯಗಳನ್ನಲ್ಲದೆ ತರಕಾರಿಗಳನ್ನು ತಿನ್ನುತ್ತಾರೆ. ಆದರೆ ಅವರ ಆಹಾರ ಸೇವನೆಯ ಕ್ರಮ ಆರೋಗ್ಯದಾಯಕವಾಗಿಲ್ಲ. ಬಹುಸಂಖ್ಯಾತ ಜನರಿಗೆ ಸತ್ವಭರಿತ ಆಹಾರದ, ಪೌಷ್ಟಿಕ ಆಹಾರದ ಕಲ್ಪನೆಯೇ ಇಲ್ಲ. ಅರಣ್ಯದೊಂದಿಗೆ ಸಂಪರ್ಕ ಕಡಿಮೆಯಾಗುತ್ತಲಿರುವುದರಿಂದ, ಅರಣ್ಯದಿಂದ ದೊರಕುವ ಪೌಷ್ಟಿಕ ಆಹಾರ ಪದಾರ್ಥಗಳು ಕ್ಷೀಣವಾಗುತ್ತಲಿವೆ. ಮದ್ಯ ಸೇವನೆಯಿಂದಾಗಿ ಅನೇಕ ಸಾಂಸರ್ಗಿಕ ರೋಗಗಳ ಬಾಧೆಯೂ ಕುಣಬಿಗಳನ್ನು ತಟ್ಟತೊಡಗಿದೆ.

### ೩.೫ ಆರೋಗ್ಯ

ಅನೇಕ ಸಂಸ್ಕೃತಿಗಳಲ್ಲಿ ಆರೋಗ್ಯವು ಸಾಮಾನ್ಯವಾದ ವಿಷಯವಾಗಿದೆ. ನಿಜವಾಗಿಯು ಎಲ್ಲ ಸಮುದಾಯಗಳು ತಮ್ಮ ಸಂಸ್ಕೃತಿಯ ಒಂದು ಅಂಗವಾಗಿ ಆರೋಗ್ಯ ಕುರಿತಾದ ತಮ್ಮದೇ ಆದ ಕಲ್ಪನೆಯನ್ನು ಹೊಂದಿವೆ. ಮಾನವನು ಸಮಾಜದಲ್ಲಿ ಉತ್ತಮವಾದ ಜೀವನವನ್ನು

ನಡೆಸಲು ಹಲವಾರು ಅಂಶಗಳು ಅತಿ ಅವಶ್ಯಕವಾಗಿವೆ. ಅವುಗಳಲ್ಲಿ ಆರೋಗ್ಯವು ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಒಂದು ನಾಣ್ಣುಡಿಯು ಹೇಳುವಂತೆ, 'ಆರೋಗ್ಯವೇ ಸಂಪತ್ತು, ಒಬ್ಬ ಮನುಷ್ಯನು ಆರೋಗ್ಯವಂತನಾಗಿದ್ದರೆ ಅವನು ಹೆಚ್ಚು ಕೆಲಸವನ್ನು ಮಾಡಬಹುದು ಮತ್ತು ಜೀವನದಲ್ಲಿ ಬೇಕಾದುದನ್ನು ಆರ್ಜಿಸಬಹುದು ಎಂಬ ಮಾತಿನಲ್ಲಿ ಸತ್ಯವಿದೆ'.[೧೪]

'ಆರೋಗ್ಯ ಎಂಬ ಶಬ್ದವು ಸಾಮಾನ್ಯವಾಗಿ ಸಕಾರಾತ್ಮಕವಾದ ಸ್ವಸ್ಥ ಮನೋಭಾವದ ಸ್ಥಿತಿಯನ್ನು ಸೂಚಿಸುತ್ತದೆ. ಈ ಮನಃಸ್ಥಿತಿಯಲ್ಲಿ ದೇಹ-ಮನಸ್ಸುಗಳೆರಡೂ ತಮ್ಮ ಗರಿಷ್ಠ ಸಾಮರ್ಥ್ಯಕ್ಕೆ ತಕ್ಕುದಾದ ಕಾರ್ಯನಿರ್ವಹಣೆ ಮಾಡುತ್ತವೆ. WHO – ವಿಶ್ವ ಆರೋಗ್ಯ ಸಂಸ್ಥೆಯು ಆರೋಗ್ಯ ಎಂಬ ಪದವನ್ನು ಹೀಗೆ ವ್ಯಾಖ್ಯಾನಿಸುತ್ತದೆ – ದೈಹಿಕ, ಮಾನಸಿಕ ಹಾಗೂ ಸಾಮಾಜಿಕವಾಗಿ ಪರಿಪೂರ್ಣವಾದ ಸುಸ್ಥಿತಿಯಾಗಿದ್ದು, ಆರ್ಥಿಕ ಹಾಗೂ ಸಾಮಾಜಿಕ ಪ್ರಗತಿಗೆ ಆರೋಗ್ಯವೆ ಮೂಲ ಮಂತ್ರ'.[೧೫]

ಉತ್ತಮ ಆರೋಗ್ಯ ಮನುಷ್ಯನ ಆಸ್ತಿ ಇದ್ದಂತೆ : ಅದು ದೊಡ್ಡ ಸಂಪತ್ತು. ಯಾವುದೇ ಒಂದು ಸಮಾಜಕ್ಕೆ ಅದರ ವೈಯಕ್ತಿಕ ಆರೋಗ್ಯ ಬಹುಮುಖ್ಯವಾದದ್ದು ಮತ್ತು ಆರೋಗ್ಯವಂತ ವ್ಯಕ್ತಿಗಳಿಗೆ ಸಾಕಷ್ಟು ಆರೋಗ್ಯಕರವಾದ ವಿಶೇಷತೆಗಳು ಅಷ್ಟೇ ಮುಖ್ಯವಾಗಿವೆ. ಉತ್ತರ ಕನ್ನಡ ಜಿಲ್ಲೆಯ ಕುಣಬಿಗಳನ್ನು ಕುರಿತು ಆರೋಗ್ಯ ಮತ್ತು ನೈರ್ಮಲ್ಯದ ಈ ಅಧ್ಯಯನವು ಜಿಲ್ಲೆಯಲ್ಲಿರುವ ವಿವಿಧ ಗ್ರಾಮಸ್ಥರು ಆರೋಗ್ಯ ಮತ್ತು ನೈರ್ಮಲ್ಯದ ಬಗ್ಗೆ ಇಟ್ಟುಕೊಂಡಿರುವ ಕಲ್ಪನೆಯನ್ನು ತಿಳಿದುಕೊಳ್ಳುವ ಗುರಿಯನ್ನು ಹೊಂದಿದೆ.

ಕುಣಬಿಗಳಲ್ಲಿ ಅನಾರೋಗ್ಯವು ದೊಡ್ಡ ಸಮಸ್ಯೆಯಾಗಿದೆ. ಇದಕ್ಕೆ ಅನೇಕ ಕಾರಣಗಳಿವೆ. ಅನಾರೋಗ್ಯಕರವಾದ ವಾತಾವರಣದಲ್ಲಿ ವಾಸಿಸುವದು, ಶುದ್ಧ ನೀರಿನ ಕೊರತೆ, ಬಡತನ ಮತ್ತು ಶಕ್ತಿ ಹೀನತೆ, ವೈದ್ಯಕೀಯ ಜ್ಞಾನ ಮತ್ತು ಮಾಹಿತಿಯ ಕೊರತೆ. (ಮುಖ್ಯ ಕಾರಣವೆಂದರೆ ಕೆಲವು ನಂಬಿಕೆ, ಮೂಢನಂಬಿಕೆಗಳಲ್ಲಿ ಅಚಲ ವಿಶ್ವಾಸ). ಅನೇಕ ಸಂದರ್ಭಗಳಲ್ಲಿ ಅವರ ಮೂಢನಂಬಿಕೆಗಳ ಪರಿಣಾಮವಾಗಿ ಅವರು ವೈದ್ಯಕೀಯ ಸೌಲಭ್ಯಗಳನ್ನು ಪಡೆಯಲು ಹಿಂಜರಿಯುತ್ತಾರೆ.

ಸಂದರ್ಶಿತ ೩೦೦ ಮಾಹಿತಿದಾರರಲ್ಲಿ ೧೪೪ ಜನರು ತಮ್ಮ ಕುಟುಂಬದಲ್ಲಿ ಒಂದಿಲ್ಲೊಂದು ಬೇನೆಯಿಂದ ಬಳಲುವವರಿದ್ದಾರೆಂದು ತಿಳಿಸಿದರು – ಅಸ್ತಮಾ ಮತ್ತು ಕ್ಷಯ ಮುಖ್ಯ ರೋಗಗಳು. ಅನೇಕ ಕುಣಬಿ ಮನೆಗಳಿಗೆ ಸಾಕಷ್ಟು ಗಾಳಿ-ಬೆಳಕಿನ ವ್ಯವಸ್ಥೆ ಇರುವುದಿಲ್ಲ. ಅಲ್ಲದೆ ಅವುಗಳು ಜನದಟ್ಟನೆಯಿಂದ ಕೂಡಿದ್ದು, ನೈರ್ಮಲ್ಯ ಹಾಗೂ ಆರೋಗ್ಯದ ಸೌಲಭ್ಯಗಳು ಇರುವುದಿಲ್ಲ. ಈ ಕಾರಣಗಳಿಂದಾಗಿ ಅನೇಕ ರೋಗರುಜಿನಗಳು ಹರಡಿವೆ. ಕುಣಬಿಗಳು ಮಂತ್ರ-ತಂತ್ರಗಳ ಮೇಲೆ ಹೆಚ್ಚು ಅವಲಂಬಿತರಾಗಿದ್ದಾರೆ. ಕೆಲವರಂತೂ ಸ್ಥಳೀಯ ಗಿಡಮೂಲಿಕೆಗಳನ್ನು ಸ್ವಯಂ ತಾವೇ

ಉಪಯೋಗಿಸುತ್ತಾರೆ; ಇಲ್ಲವೆ ಕುಣಬಿ ವೈದ್ಯರ ಪರಿಣತಿಯನ್ನು ಅವಲಂಬಿಸಿರುತ್ತಾರೆ. ಅವರಲ್ಲಿ ಬಹುಸಂಖ್ಯೆಯ ಜನರು ತಮ್ಮ ಗರ್ಭಿಣಿಯರನ್ನು ಹೆರಿಗೆಗಾಗಿ ಆಸ್ಪತ್ರೆಗೆ ಸೇರಿಸುವುದಿಲ್ಲ. ಹೆರಿಗೆಯ ನಂತರ ಬಾಣಂತಿಯನ್ನು ೧೧ ದಿನಗಳವರೆಗೆ ಹೊರಮನೆಯಲ್ಲಿ ಇಡುತ್ತಾರೆ. ಸಾಮಾನ್ಯವಾಗಿ ಈ ಹೊರಮನೆ ದನಕರುಗಳಿಗಾಗಿ ಕಟ್ಟಿದ ಶೆಡ್ ಆಗಿರುತ್ತದೆ. ಈ ತರಹದ ವಾಸ ಸ್ಥಳವು ಗಂಭೀರವಾದ ಕಾಯಿಲೆಗೆ ಒಮ್ಮೊಮ್ಮೆ ಸಾವಿಗೂ ಕಾರಣವಾಗಬಲ್ಲದು. ಹೆರಿಗೆಯಾದ ಬಾಣಂತಿಯನ್ನು ಮನೆಯಲ್ಲೇ ಇಟ್ಟುಕೊಳ್ಳುವುದರಿಂದ ಮನೆ ಮತ್ತು ಮನೆಯ ದೇವರು ಅಪವಿತ್ರ, ಮೈಲಿಗೆಯಾಗುವುದೆಂದು ಕುಣಬಿಗಳು ತಿಳಿದುಕೊಳ್ಳುತ್ತಾರೆ. ಮತ್ತೊಂದು ಅನಾರೋಗ್ಯಕರವಾದ ರೂಢಿಯೆಂದರೆ ಹುಟ್ಟಿದ ಮಗುವಿನ ಹೊಕ್ಕಳು ಬಳ್ಳಿಯನ್ನು ಚಾಕು ಅಥವಾ ಕುಡಗೋಲಿನಿಂದ ಕತ್ತರಿಸುತ್ತಾರೆ.

ಕುಣಬಿಗಳಲ್ಲಿರುವ ಈ ಅನಾರೋಗ್ಯಕರವಾದ ಪದ್ಧತಿಗಳು ಅನೇಕ ಸಾಂಸರ್ಗಿಕ ರೋಗಗಳಿಗೆ ದಾರಿ ಮಾಡಿಕೊಡುತ್ತವೆ. ಉದಾ: ಗಂಡಸರು ಹೋಳಿ ಹಬ್ಬದಲ್ಲಿ ಅಥವಾ ಪ್ರವಾಸದಲ್ಲಿ ಅನೇಕ ದಿನಗಳವರೆಗೆ ಅವೇ ಬಟ್ಟೆಗಳನ್ನು ಧರಿಸುತ್ತಾರೆ. ಅವುಗಳನ್ನು ನಿಯಮಿತವಾಗಿ ಒಗೆದು ಶುಚಿಗೊಳಿಸುವುದಿಲ್ಲ. ಒಮ್ಮೆ ಮಡಿಯಾದ ಬಟ್ಟೆಗಳನ್ನು ಧರಿಸಿದ ಮೇಲೆ ಮುಂದಿನ ವರ್ಷದ ಹೋಳಿಹಬ್ಬದ ಕುಣಿತಕ್ಕೆ ಅವೇ ಬಟ್ಟೆಗಳನ್ನು ಮಡಿ ಮಾಡದೇ ಹಾಗೆಯೇ ಧರಿಸುತ್ತಾರೆ. ಈ ಸಂಬಂಧವಾಗಿ ೩೦೦ ಮಾಹಿತಿದಾರರಿಂದ ರೋಗಗಳ ಉಪಚಾರದ ಬಗ್ಗೆ ವಿಚಾರಿಸಿ ಅವರ ಅಭಿಪ್ರಾಯವನ್ನು ಈ ಮುಂದಿನ ಕೋಷ್ಟಕದಲ್ಲಿ ಸಂಗ್ರಹಿಸಲಾಗಿದೆ.

**ಕೋಷ್ಟಕ ೩.೩**
**ಕುಣಬಿಯರು ಅನಾರೋಗ್ಯದ ವೇಳೆಯಲ್ಲಿ ಬಳಸುವ ಉಪಚಾರದ ವಿವರ**

| ಕ್ರಸಂ. | ಉಪಚಾರಗಳು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಡಾಕ್ಟರ್‌ರನ್ನು ಕಾಣುವದಿಲ್ಲ | ೨೭೯ | ೯೩.೦೦ |
| ೨ | ಡಾಕ್ಟರ್‌ರನ್ನು ಕಾಣುತ್ತೇವೆ | ೨೧ | ೭.೦೦ |
| | ಒಟ್ಟಾರೆ | ೩೦೦ | ೧೦೦.೦೦ |

ರೋಗಗಳ ಉಪಚಾರಕ್ಕಾಗಿ ಡಾಕ್ಟರ್‌ನ್ನು ಸಂಪರ್ಕಿಸಲಾಗುತ್ತದೆಯೇ ಎಂದು ಮಾಹಿತಿದಾರರನ್ನು ಕೇಳಲಾಯಿತು. ಮೇಲಿನ ಕೋಷ್ಟಕದಲ್ಲಿ ಮಾದರಿಯಾಗಿ ಸಂಗ್ರಹಿಸಿದ ೩೦೦ ಮಾಹಿತಿದಾರರು ಆರೋಗ್ಯದ ಸಂದರ್ಭದಲ್ಲಿ ಬಳಸುವ ಉಪಚಾರದ ಕ್ರಮಗಳ ಕುರಿತು ವಿವರಿಸಲಾಗಿದ್ದು, ಮಾದರಿಯಾಗಿ ಸಂಗ್ರಹಿಸಿದ್ದ ಮಾಹಿತಿಯ ಪ್ರಕಾರ ೨೭೯ (೯೩ ಪ್ರತಿಶತ) ರಷ್ಟು ಮಾಹಿತಿದಾರರು ತಾವು ಡಾಕ್ಟರ್‌ನನ್ನು ಉಪಚಾರಕ್ಕಾಗಿ ಕಾಣುವುದಿಲ್ಲದಾಗಿಯೂ, ಕೇವಲ (೨೧.೦೭ ಪ್ರತಿಶತ) ರಷ್ಟು ಮಾಹಿತಿದಾರರು ಡಾಕ್ಟರ್‌ನನ್ನು ಉಪಚಾರಕ್ಕಾಗಿ ಕಾಣುತ್ತೇವೆಂದು

ತಿಳಿಸಿದರು. ಬಹುಸಂಖ್ಯೆಯ ಜನರು ೨೫೫ (೮೫ ಪ್ರತಿಶತ) ತಾವು ರೋಗ ಉಪಚಾರಕ್ಕಾಗಿ ಧಾರ್ಮಿಕ ತಜ್ಞರನ್ನು ಸಂಪರ್ಕಿಸುವುದಾಗಿ ಮತ್ತು ೪೫ (೧೫ ಪ್ರತಿಶತ) ಮಾಹಿತಿದಾರರು ತಾವು ಹಾಗೆ ಮಾಡುವದಿಲ್ಲವೆಂದು ಹೇಳಿದರು.

ಒಟ್ಟಾರೆಯಾಗಿ ಮಾಹಿತಿದಾರರು ನೀಡಿರುವ ಅಭಿಪ್ರಾಯದಲ್ಲಿ ವೈದ್ಯಕೀಯ ವಿಚಾರದಲ್ಲಿ ಕುಣಬಿಯರು ತಮ್ಮ ಸಂಪ್ರದಾಯವನ್ನು ಬಿಟ್ಟಿಲ್ಲವೆಂದು ಗೊತ್ತಾಗುತ್ತದೆ. ಇದು ಕುಣಬಿಯ ಸಮುದಾಯದ ಸಂತತಿಗೆ ಮಾರಕವಾಗಿದೆ.

**ಕೋಷ್ಟಕ ೩.೪**
**ಕುಣಬಿಯರು ಅನಾರೋಗ್ಯದ ವೇಳೆಯಲ್ಲಿ ವೈದ್ಯರನ್ನು ಸಂಪರ್ಕಿಸದಿರುವ ಕಾರಣಗಳ ವಿವರ**

| ಕ್ರ.ಸಂ. | ಕಾರಣಗಳು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಧಾರ್ಮಿಕ ತಜ್ಞರನ್ನು | ೧೪೪ | ೪೮.೦೦ |
| ೨ | ಬುಡಕಟ್ಟು ಸಂಪ್ರದಾಯ | ೭೮ | ೨೬.೦೦ |
| ೩ | ಭೂತಪ್ರೇತಗಳ ತೊಂದರೆಯಿಂದ | ೩೩ | ೧೧.೦೦ |
| ೪ | ನಕಾರಾತ್ಮಕ ಉತ್ತರ ಕೊಟ್ಟವರು | ೨೯ | ೧೦.೦೦ |
| ೫ | ನಂಬಿಕೆ ಇಲ್ಲವೆಂದವರು | ೧೬ | ೫.೦೦ |
| | ಒಟ್ಟಾರೆ | ೩೦೦ | ೧೦೦.೦೦ |

ಕೋಷ್ಟಕ ೩.೪ ರಲ್ಲಿ ಮಾಹಿತಿದಾರರನ್ನು ಅನಾರೋಗ್ಯದ ಸಂದರ್ಭದಲ್ಲಿ ಅವರು ಸಂಪರ್ಕಿಸುವ, ಸಂಪರ್ಕಿಸದಿರುವ ಕುರಿತು ಚರ್ಚಿಸಲಾಗಿದ್ದು, ಇವುಗಳ ಕುರಿತು ತಿಳಿದುಕೊಳ್ಳುವಾಗ ಧಾರ್ಮಿಕ ತಜ್ಞರನ್ನು ಸಂಪರ್ಕಿಸುವ ಅಥವಾ ಸಂಪರ್ಕಿಸದಿರುವ ಕಾರಣಗಳನ್ನು ಕೇಳಲಾಯಿತು. ಧಾರ್ಮಿಕ ತಜ್ಞರನ್ನು ಸಂಪರ್ಕಿಸಿದವರಲ್ಲಿ ೧೪೪ (೪೮ ಪ್ರತಿಶತ) ಜನರು ರೋಗದ ಕಾರಣವನ್ನು ತಿಳಿದುಕೊಳ್ಳುವುದಕ್ಕಾಗಿ ತಾವು ಹಾಗೆ ಮಾಡುವುದಾಗಿ ತಿಳಿಸಿದರು. ೭೮ (೨೬ ಪ್ರತಿಶತ) ಮಾಹಿತಿದಾರರು ಇದು ಬುಡಕಟ್ಟಿನ ಸಾಂಪ್ರದಾಯವೆಂದು ಹೇಳಿದರು. ೩೩ (೧೧ ಪ್ರತಿಶತ) ಮಾಹಿತಿದಾರರು ಭೂತ–ಪ್ರೇತಗಳು ಕೊಡುವ ತೊಂದರೆಗಾಗಿ ಧಾರ್ಮಿಕ ತಜ್ಞರನ್ನು ಕಾಣುವದಾಗಿ ಹೇಳಿದರೆ, ಇದಕ್ಕೆ ಪ್ರತಿಯಾಗಿ ನಕಾರಾತ್ಮಕ ಉತ್ತರ ಕೊಟ್ಟ ಮಾಹಿತಿದಾರರಲ್ಲಿ ೨೯ (೧೦ ಪ್ರತಿಶತ) ಮಾಹಿತಿದಾರರು ತಮಗೆ ಅದರಲ್ಲಿ ನಂಬಿಕೆ ಇಲ್ಲವೆಂದು ತಿಳಿಸಿದರು; ೧೬ (೫ ಪ್ರತಿಶತ). ಸಂಗ್ರಹಿಸಿದ ಮಾಹಿತಿಯ ಮೇಲಿಂದ ಕಂಡುಬರುವುದೇನೆಂದರೆ ಬಹುಜನರು ೨೫೫ (೮೫ ಪ್ರತಿಶತ) ರೋಗರುಜಿನಗಳು ಅತಿಮಾನುಷ ಮತ್ತು ಅನಿಷ್ಟ ಶಕ್ತಿಗಳ

ಪ್ರಭಾವದಿಂದ ಉಂಟಾಗುತ್ತವೆ ಎಂದು ನಂಬುತ್ತಾರೆ; ಕೇವಲ ೪೫ (೧೫ ಪ್ರತಿಶತ) ಜನರು ಹಾಗೆ ನಂಬುವದಿಲ್ಲವೆಂದು ಹೇಳಿದರು. ಇದರಿಂದ ತಿಳಿದುಬರುವ ಮಾಹಿತಿ ಎಂದರೆ ಆರೋಗ್ಯದ ವಿಚಾರದಲ್ಲಿ ಕುಣಬಿಯರು ಧಾರ್ಮಿಕ ತಜ್ಞರನ್ನು ನಂಬುತ್ತಾರೆ. ಇದರಿಂದ ಕುಣಬಿಯರ ಮೂಢನಂಬಿಕೆಯನ್ನು ಹೊಂದಿರುವ ಮನೋಭಾವನೆ ತಿಳಿಯುತ್ತದೆ.

**ಕೋಷ್ಟಕ ೩.೫**
**ಕುಣಬಿಯರು ಅನಾರೋಗ್ಯದ ವೇಳೆಯಲ್ಲಿ ನಂಬಿಕೆ ಇಟ್ಟಂಥ ವಿವರ**

| ಕ್ರ.ಸಂ. | ನಂಬಿಕೆ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಅತಿಮಾನುಷ ಮತ್ತು ಅನಿಷ್ಟಶಕ್ತಿಗಳೇ ಕಾರಣಕ್ಕೆ (ಹೌದು) | ೧೪೭ | ೪೯.೦೦ |
| ೨ | ಭೂತಪ್ರೇತಗಳ ಶಕ್ತಿಯಲ್ಲಿ ನಂಬಿಕೆ | ೯೦ | ೩೦.೦೦ |
| ೩ | ಔಷಧಿಗಳು ಯಾವುದೇ ಪರಿಣಾಮ ಬೀರದಿರುವುದು | ೧೭ | ೫.೭೦ |
| ೪ | ಇಲ್ಲವೆಂದವರು | ೨೭ | ೯.೦೦ |
| ೫ | ಅರ್ಥಹೀನ | ೧೯ | ೬.೩೦ |
| | ಒಟ್ಟಾರೆ | ೩೦೦ | ೧೦೦.೦೦ |

ಕೋಷ್ಟಕ ೩.೫ ರಲ್ಲಿ ರೋಗರುಜಿನಗಳಿಗಾಗಿ ಅತಿಮಾನುಷ ಮತ್ತು ಅನಿಷ್ಟ ಶಕ್ತಿಗಳೇ ಕಾರಣ ಎಂಬುದರಲ್ಲಿ ನಂಬಿಕೆ ಇಟ್ಟಂಥ ಮಾಹಿತಿದಾರರು ಕೊಟ್ಟ ಕಾರಣಗಳನ್ನು ವಿವೇಚಿಸಲಾಗಿದೆ. 'ಹೌದು' ಎಂದು ಪ್ರತಿಕ್ರಿಯಿಸಿದವರಲ್ಲಿ ೧೪೭ (೪೯ ಪ್ರತಿಶತ) ಜನ ಹೆದರಿಕೆಯಿಂದ ತಾವು ನಂಬಿಕೆ ಇಟ್ಟಿರುವವೆಂದು ಹೇಳಿದರೆ, ೯೦ (೩೦ ಪ್ರತಿಶತ) ಮಾಹಿತಿಗಾರರು ಭೂತ-ಪ್ರೇತಗಳ ಶಕ್ತಿಯಲ್ಲಿ ಬಲವಾದ ನಂಬಿಕೆ ಹಾಗೂ ವಿಶ್ವಾಸ ಇಟ್ಟಿರುವುದಾಗಿ ತಿಳಿಸಿದರು. ೧೭ (೫.೭ ಪ್ರತಿಶತ) ಮಾಹಿತಿದಾರರ ಅಭಿಪ್ರಾಯದಲ್ಲಿ ತಾವು ತೆಗೆದುಕೊಂಡ ಔಷಧಿಗಳು ಯಾವುದೇ ಪರಿಣಾಮ ಬೀರದೆ ಇದ್ದುದರಿಂದ, ಭೂತ-ಪ್ರೇತಗಳು ರೋಗರುಜಿನಗಳ ಮೇಲೆ ಪ್ರಭಾವ ಬೀರುತ್ತವೆಂಬುದಾಗಿ ತಿಳಿಸಿದರು. ಇದಕ್ಕೆ ಪ್ರತಿಯಾಗಿ 'ಇಲ್ಲ' ಎಂದು ಉತ್ತರಿಸಿದವರಲ್ಲಿ ೨೭ (೯ ಪ್ರತಿಶತ) ಜನರು ಅನುಮಾನಗಳನ್ನು ನಂಬುವುದಿಲ್ಲವೆಂದು, ೧೯ (೬.೩ ಪ್ರತಿಶತ) ಜನರು ಅತಿಮಾನುಷ ಮತ್ತು ಅನಿಷ್ಟ ಶಕ್ತಿಗಳಲ್ಲಿ ನಂಬಿಕೆ ಇಡುವುದು, ಈಗ ಅರ್ಥಹೀನವೆಂದು ಹೇಳಿದರು. ಈ ಅಧ್ಯಯನದಿಂದ ತಿಳಿದು ಬರುವುದೇನೆಂದರೆ ಕುಣಬಿಯರು ಅನಿಷ್ಟ ಶಕ್ತಿಗಳಿಂದ ಅನಾರೋಗ್ಯ ಬರುತ್ತದೆಂದು ನಂಬುತ್ತಾರೆ. ಇದಕ್ಕೆ ಕಾರಣವೇನೆಂದರೆ ಅವರು ವಾಸಿಸುವ

ಭೌಗೋಳಿಕ ಪ್ರದೇಶದ ಪ್ರಭಾವವಾಗಿರುತ್ತದೆ. ಕುಣಬಿಗಳಲ್ಲಿ ಕೆಲವರಾದರೂ ಪ್ರಗತಿಪರ ಮನೋಭಾವ ಹೊಂದಿದ್ದು ವಿಶೇಷವಾಗಿದೆ.

**ಕೋಷ್ಟಕ ೩.೬**
**ಕುಣಬಿಗಳಲ್ಲಿ ಸ್ತ್ರೀಯರಿಗೆ ಹೆರಿಗೆಯನ್ನು ಮಾಡಿಸುವ ವಿವರ**

| ಕ್ರಸಂ. | ವಿವರ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಮನೆಯಲ್ಲಿ | ೧೮೦ | ೬೦.೦೦ |
| ೨ | ತರಬೇತಿ ಪಡೆದ ದಾದಿಯರಲ್ಲಿ | ೫೭ | ೧೯.೦೦ |
| ೩ | ಗೊತ್ತಿಲ್ಲ | ೬೩ | ೨೧.೦೦ |
| | ಒಟ್ಟಾರೆ | ೩೦೦ | ೧೦೦.೦೦ |

ಕೋಷ್ಟಕ ೩.೬ ರಲ್ಲಿ ಮಾಹಿತಿದಾರರು ಹಾಗೂ ಅವರ ಪೂರ್ವಜರಲ್ಲಿಯ ಸ್ತ್ರೀಯರುಗಳು ಹೆರಿಗೆ ಮಾಡಿಸುವುದರ ವಿವರವನ್ನು ಕುರಿತು ಮಾಹಿತಿ ನೀಡಲಾಗಿದ್ದು, ಇದರ ಪ್ರಕಾರ ಪ್ರತಿಶತ ೬೦ ರಷ್ಟು ಮಾಹಿತಿದಾರರು ಪೂರ್ವಜರು ಮನೆಯಲ್ಲಿಯೇ ಹೆರಿಗೆಯನ್ನು ಮಾಡಿಸುತ್ತಿದ್ದರು, ಅಲ್ಲದೆ ತರಬೇತಿ ಪಡೆದ ದಾದಿಯರಲ್ಲಿ ಪ್ರತಿಶತ ೧೯ ರಷ್ಟು. ಆದರೆ ಹೆರಿಗೆಯ ಸಂದರ್ಭದಲ್ಲಿ ನಡೆಯುವ ಅಪಾಯವನ್ನು ತಾಯಿ, ಮಗುವಿನ ಆರೋಗ್ಯವನ್ನು ಕಾಪಾಡುವ ದೃಷ್ಟಿಯಿಂದ ಇಂದು ಆಸ್ಪತ್ರೆಗಳ ಅವಶ್ಯಕತೆ ತುಂಬಾ ಅವಶ್ಯಕವಾಗಿದೆ. ಕುಣಬಿ ಸ್ತ್ರೀಯರಿಗೆ ಹೆರಿಗೆಯನ್ನು ಮನೆಯಲ್ಲಿಯೇ ಹೆಚ್ಚಾಗಿ ಮಾಡಿಸುತ್ತಾರೆ. ಇದರಿಂದ ತಾಯಿ ಮತ್ತು ಮಗುವಿನ ಆರೋಗ್ಯದ ಮೇಲೆ ಪ್ರಭಾವ ಬೀರುತ್ತದೆ ಮತ್ತು ಹೆರಿಗೆ ಸಮಯದಲ್ಲಿ ತಾಯಿ ಮತ್ತು ಮಗುವಿಗೆ ಅಪಾಯ ಕಂಡುಬರುತ್ತದೆ. ಈ ದೆಸೆಯಲ್ಲಿ ಕುಣಬಿಯರು ವಿದ್ಯಾವಂತರಾಗುವದು ಅನಿವಾರ್ಯವಾಗಿದೆ ಮತ್ತು ಸರಕಾರ ವಿಶೇಷವಾದ ಆಸ್ಪತ್ರೆಗಳನ್ನು ಕುಣಬಿ ಪ್ರದೇಶದಲ್ಲಿ ಸ್ಥಾಪಿಸಿದರೆ ಈ ಸಮುದಾಯದ ಅಭಿವೃದ್ಧಿಯಾಗುವುದು.

ಒಟ್ಟಾರೆಯಾಗಿ ಮಾಹಿತಿದಾರರು ನೀಡಿರುವ ಅಭಿಪ್ರಾಯದಲ್ಲಿ ಅವರ ಆಹಾರ ಸೇವನೆ, ಆರೋಗ್ಯ ಮುಂತಾದವುಗಳನ್ನು ಅರಿತುಕೊಂಡಾಗ ಅಪಾರವಾದ ಪರಿವರ್ತನೆಗಳು ಆಗಿವೆ. ಕಾಲಕ್ಕನುಗುಣವಾಗಿ ದೊರೆಯುತ್ತಿರುವ ಸೌಲಭ್ಯಗಳು ಮನುಷ್ಯನನ್ನು ಪರಿವರ್ತನೆಯತ್ತ ಸಾಗಿಸುತ್ತಿರುವವು. ಮಾನವನಿಗೆ ಕಾಲದಿಂದ ಕಾಲಕ್ಕೆ ದೊರಕುವ ಶಿಕ್ಷಣ, ಆರ್ಥಿಕ ಪರಿಸ್ಥಿತಿಯ ಸುಧಾರಣೆ, ಕೈಗಾರಿಕರಣ, ನಗರೀಕರಣ, ವಿಜ್ಞಾನದ ಬೆಳವಣಿಗೆ, ತಂತ್ರಜ್ಞಾನದ ಬೆಳವಣಿಗೆ, ಪಾಶ್ಚಾತ್ಯೀಕರಣ ಹಾಗೂ ಜಾಗತೀಕರಣದ ಪ್ರಭಾವವು ಅಗಾಧವಾಗಿರುವುದು. ಈ ಮುಂತಾದ

ಕಾರಣಗಳಿಂದ ಮಾಹಿತಿಗಾರರು ಅವರ ಪೂರ್ವಜರಿಗಿಂತ ಪರಿವರ್ತನೆಯನ್ನು ಹೊಂದಿರುವುದು ಈ ಅಧ್ಯಯನ ತೋರಿಸುತ್ತದೆ.

### ೩.೬ ಕುಣಬಿಯರ ಶೈಕ್ಷಣಿಕ ಸ್ಥಿತಿಗತಿ

**ಪರಿಚಯ:** ಶಿಕ್ಷಣವು ಆಧುನಿಕ ಸಮಾಜಗಳ ಮೂಲಭೂತ ಚಟುವಟಿಕೆಗಳಲ್ಲಿ ಒಂದೆನಿಸಿದೆ. ಅದು ಆಧುನಿಕ ಮಾನವನ ಸಮೂಹ ಜೀವನದ ಅನಿವಾರ್ಯ ಅವಶ್ಯಕತೆ. 'ವ್ಯಕ್ತಿಯ ಚಾರಿತ್ರ್ಯ, ವ್ಯಕ್ತಿತ್ವ, ಸಂಸ್ಕೃತಿ, ಜ್ಞಾನ, ವಿವೇಚನೆ, ನೈಪುಣ್ಯತೆ ಮುಂತಾದ ಮಾನವನ ಜೀವನಕ್ಕೆ ಸಂಬಂಧಿಸಿದ ಅಂಶಗಳನ್ನು ಶಿಕ್ಷಣವು ತುಂಬಾ ಹತ್ತಿರದಿಂದ ಅವಲಂಬಿಸಿದೆ. ಶಿಕ್ಷಣವಿಲ್ಲದೆ ಸಂಘ ಜೀವನ ನಡೆಸುವ ಪ್ರಶ್ನೆಯೇ ಇಲ್ಲ. ಪ್ರತಿಯೊಂದು ಹೊಸ ಪೀಳಿಗೆಯೂ ಕೂಡ ತನ್ನ ಸಮುದಾಯದ ರೀತಿ–ನೀತಿಗಳಿಗೆ, ಜೀವನ ವಿಧಾನಕ್ಕೆ ಅಥವಾ ಸಾಂಸ್ಕೃತಿಕ ಅಗತ್ಯಗಳಿಗೆ ತಕ್ಕಂತೆ ನಡೆದುಕೊಳ್ಳುವ ಬಗ್ಗೆ ಹಿರಿಯ ಪೀಳಿಗೆಯಿಂದ 'ಶಿಕ್ಷಣ'ವನ್ನು ಪಡೆಯುವುದು ಅನಿವಾರ್ಯವಾಗುವುದು. ಸಾಂಸ್ಕೃತಿಕ ಪರಂಪರೆಯ ಮುಂದುವರಿಯುವಿಕೆಯ ದೃಷ್ಟಿಯಿಂದಲೂ ಇದು ಅಗತ್ಯವಾಗಿದೆ. ಶಿಕ್ಷಣದಿಂದಾಗಿ ಸಮೂಹಗಳು, ಸಮುದಾಯಗಳು ತಮ್ಮ ಐಕ್ಯವನ್ನು ಕಾಯ್ದುಕೊಳ್ಳುವುದೂ ಸಹ ಸಾಧ್ಯವಾಗುವುದು. ಶಿಕ್ಷಣವು ಮಾನವನಿಗೆ ಅಜ್ಞಾನದಿಂದ ಜ್ಞಾನದ ಕಡೆಗೆ ಕರೆದು ತರುವ ಸಾಧನವಾಗಿದೆ. ಇದು ಮಾನವನಲ್ಲಿಯ ಹೊಸ ಹೊಸ ವಿಚಾರ, ಆಲೋಚನೆ ಹಾಗೂ ಆಸೆ, ಆಕಾಂಕ್ಷೆಗಳು ಬೆಳೆಯುವಂತಾಗಲು ಸಹಾಯ ಮಾಡುವುದು. ಈ ನಿಟ್ಟಿನಲ್ಲಿ ಪಿ.ಎ. ಸಾರೋಕಿನ್ ಅವರು 'ಶಿಕ್ಷಣವು ಮೇಲ್ಮುಖ ಸಂಚಲನೆಯ ವಾಹಕ, ಏಕೆಂದರೆ ಶಿಕ್ಷಣವು ವ್ಯಕ್ತಿಗಳನ್ನು ಅವರ ಸಾಂಪ್ರದಾಯಿಕ ಜೀವನ ಶೈಲಿಯಿಂದ ಆಧುನಿಕ ಜೀವನ ಶೈಲಿಯತ್ತ ಪರಿವರ್ತಿಸುವ ಶಕ್ತಿಯನ್ನು ಹೊಂದಿದೆ' ಎಂದಿದ್ದಾರೆ. ಶಿಕ್ಷಣ ಪಡೆದಿರುವ ವ್ಯಕ್ತಿ ಸಾಮಾನ್ಯವಾಗಿ ಮೇಲ್ಮುಖ ಸಂಚಲನೆಗೆ ಹೆಚ್ಚು ಅವಕಾಶ ಹೊಂದಿರುತ್ತಾನೆ. ಅಶಿಕ್ಷಿತರಿಗಿಂತಲೂ ಸುಶಿಕ್ಷಿತರು ಹೆಚ್ಚು ಸಂಚಲನೆಯನ್ನು ಹೊಂದಿದವರಾಗಿದ್ದಾರೆ'.[೧೬]

ಶಿಕ್ಷಣವು ಆದಿಕಾಲದಿಂದಲೂ ಸಮಾಜದ ಅಸ್ಥೆಯ ವಿಷಯವಾಗಿಯೆ ಬೆಳೆದುಬಂದಿದೆ. ಆದರೆ ಶಿಕ್ಷಣದ ರೂಪ, ಸ್ವರೂಪ ಮತ್ತು ಗುಣಮಟ್ಟವು ಸಮಾಜದ ಬೆಳವಣಿಗೆಯ ಹಂತವನ್ನು ಅವಲಂಬಿಸಿರುತ್ತದೆ. ಸಾಮಾಜಿಕ ನಿಯಂತ್ರಣ ಹಾಗೂ ಪರಿವರ್ತನೀಯ ಸಾಧನವಾಗಿ, ಸಾಂಸ್ಕೃತಿಕ ಸಂರಚನೆಯ ಪ್ರಭಾವಿ ಮಾಧ್ಯಮವಾಗಿ ಮತ್ತು ಇಂದಿನ ಆಧುನಿಕ ಸಮಾಜದ ಉದ್ಯೋಗ ತರಬೇತಿಯ ಕೇಂದ್ರವಾಗಿ ಶಿಕ್ಷಣ ಮತ್ತು ಶೈಕ್ಷಣಿಕ ಸಂಸ್ಥೆಗಳ ಪ್ರಾಮುಖ್ಯ ದಿನೇ ದಿನೇ ಹೆಚ್ಚುತ್ತಲಿದೆ ಮಾತ್ರವಲ್ಲ, ಸಾಮಾಜಿಕ ಅಂತಸ್ತಿನ ಶ್ರೇಣಿ ವ್ಯವಸ್ಥೆಯಲ್ಲಿ ಕೆಳಸ್ತರದಿಂದ ಮೇಲಕ್ಕೆ ಸಾಗಿ ಹೋಗಲು ಸಹಾಯಕವಾದ ಏಣಿಯಂತಿರುವ ಶಿಕ್ಷಣವನ್ನು 'ಮುಕ್ತ'ವಾಗಿರಿಸಬೇಕು ಮತ್ತು

ಶೈಕ್ಷಣಿಕ ಅವಕಾಶಗಳನ್ನು ಎಲ್ಲರಿಗೂ 'ಸಮಾನ'ವಾಗಿ ಕಲ್ಪಿಸಿಕೊಡಬೇಕು ಎಂಬ ಘೋಷಣೆ ಇಂದು ಎಲ್ಲೆಡೆ ಕೇಳಿಬರುತ್ತಿದೆ. ಸಾಂಪ್ರದಾಯಿಕತೆಯ ಬಿಗಿಮುಷ್ಟಿಯಿಂದ ಆಧುನಿಕತೆಯತ್ತ ದಾಪುಗಾಲು ಹಾಕಲು, ಅರ್ಥಾತ್ ಕ್ಷಿಪ್ರಗತಿಯ ಸಾಮಾಜಿಕ ಪರಿವರ್ತನೆಯನ್ನು ತರಲು ಶಿಕ್ಷಣವು ಒಂದು ಪರಿಣಾಮಕಾರಿಯಾದ ಅಸ್ತ್ರವಾಗಿದೆ ಎಂಬ ನಂಬಿಕೆಯೂ ಇಂದು ಬಲಿಯುತ್ತಿದೆ. ಪರಿಣಾಮವಾಗಿ ಜಗತ್ತಿನ ಹೆಚ್ಚಿನ ಎಲ್ಲ ದೇಶಗಳು ಕೂಡ ಶಿಕ್ಷಣದ ಪ್ರಗತಿಗಾಗಿ ಸಾಕಷ್ಟು ಗಮನಹರಿಸುತ್ತಿವೆ ಹಾಗೂ ಬಹಳಷ್ಟು ಹಣವನ್ನು ವಿನಿಯೋಗಿಸುತ್ತಲಿವೆ.

ಸಮಾಜವು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಜೀವನದ ಹಲವಾರು ಕ್ಷೇತ್ರಗಳಲ್ಲಿ ಪರಿವರ್ತನೆಯಾಗಲು ಮತ್ತು ಸಮಾಜ ಹಾಗೂ ವ್ಯಕ್ತಿಗಳ ಕಾರ್ಯ ಸುಗಮವಾಗಲು ಶಿಕ್ಷಣವು ಅತಿ ಅವಶ್ಯಕವಾಗಿದೆ. ಸಮಾಜವು ಮುಂದುವರೆಯಲು ಶಿಕ್ಷಣವು ಜೀವನಾಡಿಯಿದ್ದಂತೆ. ಈ ನಿಟ್ಟಿನಲ್ಲಿ Kochar and Pandya ರವರು 'ಶಿಕ್ಷಣದಿಂದ ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಹಾಗೂ ಸಾಂಪ್ರದಾಯಿಕವಾಗಿ ಮನುಷ್ಯ ಮುಂದೆ ಬರುತ್ತಾನೆ. ಇದರಿಂದಾಗಿ ಅವನು ತನ್ನ ಸ್ಥಾನಮಾನಗಳಲ್ಲಿ ಪರಿವರ್ತನೆ ಹೊಂದುವುದಲ್ಲದೆ ತನ್ನ ಗುರಿಗಳನ್ನು ತಲುಪುತ್ತಾನೆ. ಶಿಕ್ಷಣವು ಮೇಲ್ಮುಖ ಸಾಮಾಜಿಕ ಚಲನೆಗೆ ಅವಕಾಶವನ್ನುಂಟು ಮಾಡುತ್ತದೆ'[೧೮] ಎಂದಿದ್ದಾರೆ.

ಮಾನವನ ಸರ್ವಾಂಗೀಣ ಅಭಿವೃದ್ಧಿಗೆ ಕಾರಣವಾದ ಶಿಕ್ಷಣವು ಭಾರತದಲ್ಲಿ ಪ್ರಾಚೀನ ಕಾಲದಲ್ಲಿ ಗುರುಕುಲಗಳಲ್ಲಿ ಕೇವಲ ಬ್ರಾಹ್ಮಣರಿಗೆ ಮಾತ್ರ ಸೀಮಿತವಾಗಿತ್ತು, ಆದರೆ ಇಂದು ಶಿಕ್ಷಣವು ಕಡ್ಡಾಯವಾಗಿದ್ದು, ಅದನ್ನು ಸಾರ್ವತ್ರಿಕವಾಗಿ ಬೋಧಿಸಲಾಗುತ್ತಿದೆ. ಈ ನಿಟ್ಟಿನಲ್ಲಿ ನಗರ, ಪಟ್ಟಣ, ಗ್ರಾಮಗಳಿಂದ ಹಿಡಿದು ಎಲ್ಲ ಚಿಕ್ಕಪುಟ್ಟ ಗ್ರಾಮ, ಸಮುದಾಯಗಳವರೆಗೂ ಅದು ವ್ಯಾಪಿಸಿದ್ದು, ಕುಣಬಿ ಸಮುದಾಯದವರೂ ಸಹ ಶಿಕ್ಷಣವನ್ನು ಪಡೆಯುತ್ತಿದ್ದಾರೆ.

**ಶಿಕ್ಷಣ ವ್ಯವಸ್ಥೆ**

ಒಂದು ಕಡೆ ನಿಂತು ತಮ್ಮ ನೆಲೆಯಾಗಿ ಗುರುತಿಸಿಕೊಂಡ ತಮ್ಮದೇ ಆದ ಕೃಷಿಯನ್ನು ಮೈಗೂಡಿಸಿಕೊಂಡಿರುವ ಕುಣಬಿ ಸಮುದಾಯವು ತನ್ನ ಅಗತ್ಯತೆಗಳನ್ನು ರೂಪಿಸಿಕೊಂಡು ಮಾನಸಿಕವಾಗಿ ನೆಮ್ಮದಿಯಿಂದ ಬದುಕುತ್ತಿದೆ. ಇಂತಹ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗೆ ಶಿಕ್ಷಣವೇ ಯಾಕೆ? ಒಂದು ರೀತಿಯಲ್ಲಿ ಶಿಕ್ಷಣ ಇಡೀ ಸಮುದಾಯದ ಅಗತ್ಯತೆಗಳನ್ನು ಪೂರೈಸುತ್ತದೆಂದು ನಂಬುವುದಾದರೆ ಆ ಶಿಕ್ಷಣ ಸ್ವರೂಪ ಮಹತ್ವವೆಂತಹದು. ಗಾಂಧೀಜಿ ಹೇಳುವಂತೆ ಮೂಲ ಶಿಕ್ಷಣವೇ? ಬ್ರಿಟಿಷರು ಹಾಗೂ ಇತ್ತೀಚಿನ ಭಾರತ ಸರಕಾರದವರು ತಂದ ಶಿಕ್ಷಣವೇ? ಅಥವಾ ಕಂಪ್ಯೂಟರ್ ಮಾಹಿತಿ ತಂತ್ರಜ್ಞಾನ ಶಿಕ್ಷಣವೇ? ಈ ರೀತಿಯಾಗಿ

ಬುಡಕಟ್ಟುಗಳಿಗೆ ಶಿಕ್ಷಣವನ್ನು ಕೊಡಬೇಕಾದರೆ ಮಾಧ್ಯಮ ಯಾವುದಾಗಿರಬೇಕು? ಎಂದು ಆಲೋಚಿಸುವುದು ಸೂಕ್ತವೆನಿಸುತ್ತದೆ. ಈ ಹಿನ್ನಲೆಯಲ್ಲಿ ಬುಡಕಟ್ಟು ಸಮುದಾಯಗಳಿಗೆ ನಾವು ಕೊಡುತ್ತಿರುವ ಶಿಕ್ಷಣ ಎಷ್ಟರಮಟ್ಟಿಗೆ ತಲುಪುತ್ತದೆ ಎಂಬುದು ಗಮನದಲ್ಲಿರಿಸಿಕೊಳ್ಳಬೇಕು. ಕುಣಬಿಯರು ತನ್ನ ನೆಲೆಯನ್ನು ಹೆಚ್ಚಾಗಿ ದಟ್ಟಾರಣ್ಯದಲ್ಲಿ ಗುರುತಿಸಿಕೊಂಡು ಅದರಲ್ಲೂ ಬೆಟ್ಟಗಳ ಇಳಿಜಾರಿನಲ್ಲಿ ವಾಸಸ್ಥಳವನ್ನು ಮಾಡಿಕೊಂಡು ಅದಕ್ಕೊಂದು ಊರು ಎಂದು ಹೆಸಿರಿಟ್ಟುಕೊಂಡಿವೆ ಇದರಿಂದಾಗಿ ಯಾವುದೇ ಸೌಲಭ್ಯವಿಲ್ಲದೆ ಜೀವನವನ್ನು ಸಾಗಿಸುವ ಒಂದು ಬುಡಕಟ್ಟು ಸಮುದಾಯವಾಗಿದೆ.

ಕುಣಬಿಯರು ವಾಸಿಸುವುದು ದಟ್ಟಾರಣ್ಯಗಳಲ್ಲಾದುದರಿಂದ ಶಾಲೆಗಳು ಕೂಡ ತುಂಬಾ ಅಂತರದಲ್ಲಿರುತ್ತವೆ. ಕೆಲವೊಮ್ಮೆ ಶಿಕ್ಷಕರೇ ಬರುವುದಿಲ್ಲ. ಮಳೆಗಾಲದಲ್ಲಿ ಕೇಳುವವರೂ ಇಲ್ಲ, ಶಾಲೆಗಳೂ ನಡೆಯುವುದಿಲ್ಲ. ಬಹುತೇಕ ಶಿಕ್ಷಕರು ಬಯಲು ಸೀಮೆ ಕಡೆಯಿಂದ ಬಂದವರು. ಮಾತೃಭಾಷೆ ಕೊಂಕಣಿ, ಶಿಕ್ಷಕರಿಗೆ ಈ ಭಾಷೆ ಗೊತ್ತಿಲ್ಲದಿರುವುದರಿಂದ ಮಕ್ಕಳಿಗೆ ಮನವರಿಕೆ ಮಾಡುವುದು ಕಷ್ಟವಾಗುತ್ತದೆ. ಆದ್ದರಿಂದ ಕೊಂಕಣಿ ಗೊತ್ತಿರುವ ಶಿಕ್ಷಕರನ್ನು ನೇಮಿಸಬೇಕೆಂಬುದು ಕುಣಬಿಗಳ ಒತ್ತಾಯ.

ದೂರದೂರದ ಶಾಲೆಗಳು, ಶಿಕ್ಷಕರ ಗೈರುಹಾಜರಿ, ಕೆಲವು ಶಾಲೆಗಳು ಸಂಪೂರ್ಣವಾಗಿ ಮುಚ್ಚಿ ಹೋಗಿರುವುದು ಇವೆಲ್ಲ ಶಿಕ್ಷಣದ ಪ್ರಗತಿಗೆ ಅಡ್ಡಿಯಾಗಿವೆ. ಇವೆಲ್ಲದರ ಪರಿಣಾಮವಾಗಿ ಅರ್ಧದಲ್ಲಿಯೇ ಶಾಲೆ ಬಿಡುವ ಮಕ್ಕಳ ಸಂಖ್ಯೆ ಹೆಚ್ಚು. ಇದರ ಪರಿಣಾಮ ಉನ್ನತ ಶಿಕ್ಷಣ ಎಂಬುದು ಈ ಸಮುದಾಯಕ್ಕೆ ಮರೀಚಿಕೆ. ಪದವಿ ಪಡೆದವರು ಕೇವಲ ಬೆರಳೆಣಿಕೆಯಷ್ಟು. ಇಡೀ ಸಮುದಾಯದಲ್ಲಿ ಇಬ್ಬರು ಮಾತ್ರ ಶಿಕ್ಷಕರಾಗಿ ನೇಮಕ ಹೊಂದಿದ್ದಾರೆ. ಇಡೀ ಕಾಡನ್ನು ವಿದ್ಯುತ್ ಯೋಜನೆಗಾಗಿ ಧಾರೆ ಎರೆದ ಕುಣಬಿ ಸಮುದಾಯದಲ್ಲಿ ಕೆ.ಪಿ.ಟಿ.ಸಿ.ಎಲ್. ಕೇವಲ ಮೂವರಿಗೆ ಮಾತ್ರ ನೌಕರಿ ನೀಡಿದೆ. ಆರೇಳು ಜನ ವಿವಿಧ ಇಲಾಖೆಗಳಲ್ಲಿ ನಾಲ್ಕನೇ ದರ್ಜೆ ನೌಕರರಾಗಿ ಸೇರಿದ್ದಾರೆ. ಸ್ನಾತಕೋತ್ತರ ಮಟ್ಟದ ಉನ್ನತ ಶಿಕ್ಷಣ ಯಾರಿಗೂ ಇಲ್ಲ.

ಶೈಕ್ಷಣಿಕವಾಗಿ ತೀರಾ ಹಿಂದುಳಿದಿರುವ ಕುಣಬಿಯರಿಗಾಗಿ ಯಾವುದೇ ಪ್ರತ್ಯೇಕ ಯೋಜನೆಗಳನ್ನು ಜಾರಿಗೊಳಿಸಲಾಗಿಲ್ಲ. ವಯಸ್ಕರ ಶಿಕ್ಷಣ ಅಥವಾ ಸಾಕ್ಷರತಾ ಆಂದೋಲನಗಳು ಇಲ್ಲಿ ಯಾವ ಪರಿಣಾಮವನ್ನು ಬೀರಿಲ್ಲ. ಒಟ್ಟಾರೆಯಾಗಿ ಶೈಕ್ಷಣಿಕವಾಗಿ ಕುಣಬಿಗಳು ಅತ್ಯಂತ ಹಿಂದುಳಿದವರು. ಅಲ್ಲಿ ಸರಕಾರ ಶಾಲೆಗಳನ್ನು ತೆರೆದರೂ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಹಿಂಜರಿಯುತ್ತಾರೆ. ಇದಕ್ಕೆ ಮುಖ್ಯ ಕಾರಣಗಳೆಂದರೆ, ಬಡತನ, ಪ್ರೇರಣೆಯ ಕೊರತೆ, ಪ್ರೋತ್ಸಾಹದ ಕೊರತೆ, ಅನಕ್ಷರತೆ, ಖಿನ್ನತೆಯನ್ನುಂಟು ಮಾಡುವಂಥ ಮನೆಯ ವಾತಾವರಣ, ಬುಡಕಟ್ಟುಗಳಿಗೆ ಕೊಡ ಮಾಡಿದ ಪ್ರಯೋಜನೆಗಳ ಅಲಭ್ಯತೆ ಇತ್ಯಾದಿ. ಕುಣಬಿಯರಿಗೆ ಕೂಡ ಭೂಮಿ ಮತ್ತು

ತಮ್ಮ ಬದುಕಿನ ಅನ್ನದ ಪ್ರಶ್ನೆಯೇ ಮುಖ್ಯವಾಗಿರುವುದರಿಂದ ಶಿಕ್ಷಣದ ಕಡೆ ಗಮನ ಇನ್ನೂ ಅಷ್ಟಾಗಿ ಹರಿದಿಲ್ಲ. ಆದರೂ ಇತ್ತೀಚಿಗಿನ ದಿನಗಳಲ್ಲಿ ಕುಣಬಿಯರ ಯುವ ಸಮುದಾಯ ಶಾಲೆಗಳಿಗಾಗಿ, ಶಿಕ್ಷಕರಿಗಾಗಿ ಮತ್ತು ಹಾಸ್ಟೆಲ್‌ಗಳಿಗಾಗಿ ಹೋರಾಟದ ಹಾದಿ ಹಿಡಿದಿದ್ದಾರೆ.

ಯಾವುದೇ ಒಂದು ಸಮುದಾಯವು ಮುಂದುವರೆಯಲು ಶಿಕ್ಷಣವು ಅತೀ ಅವಶ್ಯಕವಾದದ್ದು. ಕುಣಬಿಗಳು ವಾಸಿಸುತ್ತಿರುವ ಯಾವ ಪ್ರದೇಶದಲ್ಲಿ ಸಮುದಾಯವು ಆರ್ಥಿಕವಾಗಿ ದುಸ್ಥಿತಿಯಲ್ಲಿದೆಯೋ ಆ ಎಲ್ಲಾ ಪ್ರದೇಶಗಳಲ್ಲಿ ಸದರಿ ಸಮುದಾಯದ ಸಾಕ್ಷರತೆಯ ಮತ್ತು ಶಿಕ್ಷಣ ಹೊಂದಿದ್ದವರ ಪ್ರಮಾಣವು ಅದು ಯಾವ ತೆರನಾಗಿ ಸಾಗಿದೆ ಎಂಬುದನ್ನು ಕುಣಬಿಯರ ಶೈಕ್ಷಣಿಕ ಮಟ್ಟದ ಸ್ಥಿತಿಗತಿಗಳನ್ನು ಅರಿತುಕೊಳ್ಳಬೇಕಾಗುತ್ತದೆ. ಕುಣಬಿ ಸಮುದಾಯದಲ್ಲಿಯ ಪ್ರಚಲಿತ ಕಾಲದಲ್ಲಿ ಶೈಕ್ಷಣಿಕ ಮಟ್ಟ ಸ್ಥಿತಿಗತಿ ಯಾವ ರೀತಿಯಾಗಿದೆ ಎಂಬುದನ್ನು ಕೋಷ್ಟಕ ೩.೭ ರಲ್ಲಿ ವಿವರಿಸಲಾಗಿದೆ.

**ಕೋಷ್ಟಕ ೩.೭**

**ಕುಣಬಿ ಸಮುದಾಯದ ಶೈಕ್ಷಣಿಕ ಸ್ಥಿತಿಗತಿ**

| ಕ್ರ.ಸಂ. | ಶೈಕ್ಷಣಿಕ ಹಂತ | ಗಂಡು | ಪ್ರತಿಶತ | ಹೆಣ್ಣು | ಪ್ರತಿಶತ |
|---|---|---|---|---|---|
| ೧ | ಪ್ರಾಥಮಿಕ | ೧೪೬ | ೯.೦೦ | ೭೨ | ೫.೦೦ |
| ೨ | ಮಾಧ್ಯಮಿಕ | ೭೫ | ೫.೦೦ | ೩೭ | ೨.೦೦ |
| ೩ | ಪ್ರೌಢಶಾಲೆ | ೨೦೩ | ೧೨.೦೦ | ೮೮ | ೬.೦೦ |
| ೪ | ಡಿಪ್ಲೊಮಾ | ೮ | ೦.೦೦ | ೦ | ೦.೦೦ |
| ೫ | ಪದವಿಪೂರ್ವ | ೮೯ | ೫.೦೦ | ೧೧ | ೧.೦೦ |
| ೬ | ಪದವಿ | ೫ | ೦.೦೦ | ೦ | ೦.೦೦ |
| ೭ | ಸ್ನಾತಕೋತ್ತರ | ೦ | ೦.೦೦ | ೦ | ೦.೦೦ |
| ೮ | ಅನಕ್ಷರಸ್ಥರು | ೧೧೦೩ | ೬೮.೦೦ | ೧೩೦೮ | ೮೬.೦೦ |
| | ಒಟ್ಟಾರೆ | ೧೬೨೯ | ೧೦೦.೦೦ | ೧೫೧೬ | ೧೦೦.೦೦ |



ಕೋಷ್ಟಕ ೩.೭ ನ್ನು ನೋಡಿದಾಗ ಕುಣಬಿ ಸಮುದಾಯದ ಗಂಡು ಮಕ್ಕಳ ಶಿಕ್ಷಣ ಕೇವಲ ಪ್ರಾಥಮಿಕದಿಂದ ಪ್ರೌಢಶಾಲಾ ಮಟ್ಟಕ್ಕೆ ಮಾತ್ರ ತಲುಪುತ್ತಿದ್ದು ಹೆಚ್ಚಿನ ಸಂಖ್ಯೆಯ ಕುಣಬಿಯರು ಅನಕ್ಷರಸ್ಥರಾಗಿ (೬೮ ಪ್ರತಿಶತ) ಉಳಿದಿದ್ದಾರೆ. ಕೇವಲ ೫ ಪ್ರತಿಶತ ಮಕ್ಕಳು ಪದವಿಪೂರ್ಣ ಶಿಕ್ಷಣ ಪೂರೈಸಿದ್ದು, ಸುಮಾರು ೬ ಪ್ರತಿಶತ ಮಕ್ಕಳು ಪ್ರೌಢಶಾಲೆಯ ಹಂತದಲ್ಲಿಯೇ ತಮ್ಮ ಶಿಕ್ಷಣವನ್ನು ಮೊಟಕುಗೊಳಿಸಿದ್ದಾರೆ.

ಕುಣಬಿ ಹೆಣ್ಣು ಮಕ್ಕಳ ಶಿಕ್ಷಣವಂತೂ ಅತ್ಯಂತ ದಯನೀಯ ಸ್ಥಿತಿಯಲ್ಲಿದೆ. ಕೇವಲ ೧೪ ಪ್ರತಿಶತ ಹೆಣ್ಣು ಮಕ್ಕಳು ವಿವಿಧ ಶಿಕ್ಷಣ ಹಂತದಲ್ಲಿದ್ದು, ಅವರೂ ಸಹ ಹೆಚ್ಚಿನ ಸಂಖ್ಯೆಯಲ್ಲಿ ಮಾಧ್ಯಮಿಕ ಹಾಗೂ ಪ್ರೌಢ ಶಿಕ್ಷಣ ಪಡೆಯುತ್ತಿದ್ದಾರೆ.

ಕುಣಬಿ ಸಮುದಾಯದ ಶಿಕ್ಷಣ ಗುಣಮಟ್ಟ ಸುಧಾರಿಸಲು ಸರಕಾರ ಮತ್ತು ಅರೆ ಸರಕಾರಿ ಸಂಘ ಸಂಸ್ಥೆಗಳಿಗೆ ಒಂದು ಸವಾಲಾಗಿದೆ. ಶಿಕ್ಷಣ ಇಲಾಖೆಯ ಸರ್ವಶಿಕ್ಷಣ ಅಭಿಯಾನ ಯೋಜನೆ ಕುಣಬಿ ಸಮುದಾಯದ ಶಿಕ್ಷಣ ಗುಣಮಟ್ಟ ಸುಧಾರಿಸಲು ಹೆಚ್ಚಿನ ಕ್ರಮವಹಿಸಬೇಕಾಗಿರುವುದು.

ಕುಣಬಿ ಸಮುದಾಯದ ಸಾಕ್ಷರತೆಯ ಹಾಗೂ ಶೈಕ್ಷಣಿಕ ಪ್ರಮಾಣವು ಕಡಿಮೆ ಮಟ್ಟದ ಶಿಕ್ಷಣಕ್ಕೆ ಕಾರಣ ಕುಣಬಿಗಳಿಗೆ ನಿಶ್ಚಿತ ಆರ್ಥಿಕ ಮೂಲಗಳಿಲ್ಲದೆ ಇರುವುದು ಹಾಗೂ ಶಿಕ್ಷಣ ಪಡೆಯಲು ಇರಬೇಕಾದ ಮೂಲಭೂತ ಸೌಲಭ್ಯಗಳ ಕೊರತೆ ಇದೆ. 'ಯಾವ ಸಮುದಾಯವು ಕೇವಲ ಅನಿಶ್ಚಿತ ಮತ್ತು ಅವಲಂಬಿತ ಆರ್ಥಿಕ ಮೂಲಗಳನ್ನು ನೆಚ್ಚಿಕೊಂಡಿರುತ್ತದೋ ಆ ಸಮುದಾಯವು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಯಾವತ್ತೂ ಹಿನ್ನಡೆಯನ್ನು ಅನುಭವಿಸುತ್ತಲೇ ಇರುತ್ತದೆ. ವರ್ತಮಾನವನ್ನು ಚರಿತ್ರೆಯ ನೆನಪುಗಳಿಂದ ಎದುರಿಸುವುದು ಸಾಧ್ಯವಿಲ್ಲ, ಹೀಗಾಗಿ ಸಮುದಾಯವೊಂದಕ್ಕೆ ಸಾಂಸ್ಕೃತಿಕವಾಗಿ ಶತಮಾನಗಳ ಇತಿಹಾಸವಿದ್ದರೂ, ವರ್ತಮಾನವನ್ನು ಎದುರಿಸುವ ಆಧುನಿಕ ಕೌಶಲ್ಯಗಳಿಲ್ಲದೇ ಹೋದರೆ ಅಂತಹ ಸಮುದಾಯಗಳು ಭವಿಷ್ಯತ್ತಿನಲ್ಲಿ ಮೂಲೆ ಗುಂಪಾಗುತ್ತವೆ'.[೧೯] ಹೀಗೆ ಸಮುದಾಯಕ್ಕೆ ಆರ್ಥಿಕ ಮೂಲಗಳಿಲ್ಲದ ಕಾರಣದಿಂದ ಶಿಕ್ಷಣ ಪಡೆಯಲು ಆಗದೆ ಇರುವುದು ಬಹುಮುಖ್ಯವಾದ ಕಾರಣ. ಸದರಿ ಸಮುದಾಯ ತಮ್ಮ ನಿತ್ಯದ ಬದುಕನ್ನು ನಿರ್ವಹಿಸಲು ಪ್ರಯತ್ನಿಸುವಾಗ ಸ್ಪರ್ಧಾತ್ಮಕ ಶಿಕ್ಷಣ ರಂಗಕ್ಕೆ ಮುನ್ನುಗ್ಗಲು ಹೇಗೆ ಸಾಧ್ಯ? ಇಂತಹ ಸ್ಪರ್ಧಾತ್ಮಕ ಯುಗದಲ್ಲಿ ಆರ್ಥಿಕವಾಗಿ ಸಬಲಗೊಳ್ಳದೆ ಶಿಕ್ಷಣಕ್ಕೆ ಪ್ರಾಧಾನ್ಯತೆ ಕೊಡಲು ಸಾಧ್ಯವೇ?

## ಕೋಷ್ಟಕ ೩.೮
## ಕುಣಬಿ ಸಮುದಾಯದ ಸಾಕ್ಷರತೆ (ಶೇಕಡಾವಾರು ಪ್ರಮಾಣ) ದೇಶ, ರಾಜ್ಯ, ಜಿಲ್ಲೆಯೊಂದಿಗೆ ಹೋಲಿಕೆ ವಿವರ

| ಕ್ರಸಂ. | ವಿವರಗಳು | ಒಟ್ಟು ಜನಸಂಖ್ಯೆಗೆ | ಮಹಿಳೆಯರು | ಪುರುಷರು |
|---|---|---|---|---|
| ೧ | ಭಾರತ | ೬೪.೮ | ೫೩.೭ | ೭೫.೩ |
| ೨ | ಕರ್ನಾಟಕ | ೬೬.೬ | ೫೬.೯ | ೭೬.೧ |
| ೩ | ಉತ್ತರ ಕನ್ನಡ ಜಿಲ್ಲೆ | ೭೬.೬ | ೬೮.೫ | ೮೪.೫ |
| ೪ | ಪರಿಶಿಷ್ಟ ಜಾತಿ | ೫೨.೯ | ೪೧.೭ | ೫೩.೮ |
| ೫ | ಪರಿಶಿಷ್ಟ ಪಂಗಡ | ೪೮.೩ | ೩೬.೬ | ೫೧.೭ |
| ೬ | ಕುಣಬಿ | ೩೭.೫ | ೧೧.೧ | ೪೯.೭ |

ಆಧಾರ: ಪ್ರಕಾಶಕರು, ಪ್ರಸಾರಂಗದ ನಿಯಂತ್ರಣಾಧಿಕಾರಿಗಳು, ಸಿವಿಲ್ ಲೈನ್ ದೆಹಲಿ, ಜನಗಣತಿ-೨೦೦೧.




ಈ ಕೋಷ್ಟಕದ ಪ್ರಕಾರ ಉತ್ತರ ಕನ್ನಡ ಜಿಲ್ಲೆ ಸಾಕ್ಷರತೆಯಲ್ಲಿ (ಪುರುಷ ಮತ್ತು ಮಹಿಳೆಯರು) ಸರಾಸರಿ ದೇಶ, ರಾಜ್ಯಕ್ಕಿಂತ ಹೆಚ್ಚು ಇದ್ದು ಸುಶಿಕ್ಷಿತ ಶಿಕ್ಷಣ ಹೊಂದಿದವರಾಗಿದ್ದಾರೆ. ಆದರೆ ಅಧ್ಯಯನ ಕೈಗೊಂಡ ಕುಣಬಿ ಸಮುದಾಯದ ಸ್ಥಿತಿ ಹೇಳತೀರದು. ಇದು ದೇಶ, ರಾಜ್ಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪುರುಷ ಮತ್ತು ಮಹಿಳೆಯರ ಸಾಕ್ಷರತ ಪ್ರಮಾಣಕ್ಕಿಂತೂ ಅತೀ ಕಡಿಮೆ ಇದ್ದು (೪೯.೭ ಮತ್ತು ೧೧.೧ ಪ್ರತಿಶತ) ಶೈಕ್ಷಣಿಕವಾಗಿ ಅತೀ ಹಿಂದುಳಿದವರಾಗಿದ್ದು ಆಫ್ರಿಕಾ ದೇಶದ ಸಾಕ್ಷರತಾ ಪ್ರಮಾಣಕ್ಕಿಂತಲೂ ಕಡಿಮೆ ಇದೆ'[೨೦]

ಇದಕ್ಕೆ ಕಾರಣ ಈ ಸಮುದಾಯದ ಆರ್ಥಿಕ ಸ್ಥಿತಿ ಎಂಬುದು ಸ್ಪಷ್ಟವಾಗುತ್ತದೆ. ಸದರಿ ಸಮುದಾಯದ ಜನ, ನಿತ್ಯದ ಬದುಕನ್ನು ನಿರ್ವಹಿಸುವ ಮತ್ತು ಎರಡು ಹೊತ್ತಿನ ಊಟದ ಪ್ರಶ್ನೆಯೇ ಮುಖ್ಯವಾಗಿರುವಲ್ಲಿ ಇವರು ಹೇಗೆ ಅಕ್ಷರ ಲೋಕಕ್ಕೆ ಪ್ರವೇಶ ಪಡೆಯಲು ಸಾಧ್ಯ? ಸದರಿ ಸಮುದಾಯ ಸಾಕ್ಷರತೆಯ ಮತ್ತು ಶಿಕ್ಷಣ ಹೊಂದಿದವರ ಪ್ರಮಾಣವು ಅತ್ಯಂತ ಕಡಿಮೆ ಇರುವುದು ಕಂಡುಬರುತ್ತದೆ.

ಕೋಷ್ಟಕ ೩.೯
ಕುಣಬಿಯರ ಶಿಕ್ಷಣದ ಪ್ರಮಾಣ

| ಕ್ರಸಂ. | ಶಿಕ್ಷಣ | ಗಂಡು | ಪ್ರತಿಶತ | ಹೆಣ್ಣು | ಪ್ರತಿಶತ |
|---|---|---|---|---|---|
| ೧ | ಅನಕ್ಷರಸ್ಥರು | ೨೫೨ | ೮೪.೦೦ | ೧೮೧ | ೬೦.೦೦ |
| ೨ | ಪ್ರಾಥಮಿಕ | ೨೭ | ೯.೦೦ | ೫೪ | ೧೮.೦೦ |
| ೩ | ಮಾಧ್ಯಮಿಕ | ೧೪ | ೫.೦೦ | ೪೨ | ೧೪.೦೦ |
| ೪ | ಪ್ರೌಢ | ೭ | ೨.೦೦ | ೧೪ | ೫.೦೦ |
| ೫ | ಪದವಿಪೂರ್ವ | ೦ | ೦.೦೦ | ೮ | ೩.೦೦ |
| ೬ | ಪದವಿ | ೦ | ೦.೦೦ | ೧ | ೦.೦೦ |
| | ಒಟ್ಟಾರೆ | ೩೦೦ | ೧೦೦.೦೦ | ೩೦೦ | ೧೦೦.೦೦ |

ಕೋಷ್ಟಕ ೩.೯ ರಲ್ಲಿ ಕುಣಬಿಯರು ಪಡೆದಿರುವ ಶಿಕ್ಷಣ ಪ್ರಮಾಣ ಕುರಿತು ವಿವರಿಸಲಾಗಿದ್ದು, ಕುಣಬಿ ಸಮುದಾಯದ ಶಿಕ್ಷಣ ಸ್ಥಿತಿಗತಿಯನ್ನು 'ವ್ಯಕ್ತಿ ಅಧ್ಯಯನ (Case Study)' ವಿಧಾನದಿಂದ ಅವಲೋಕಿಸಿದಾಗ ಪ್ರತಿಶತ ೮೪ ರಷ್ಟು ಗಂಡು ಮಕ್ಕಳು ಅನಕ್ಷರಸ್ಥರಾಗಿ ಉಳಿದಿದ್ದಾರೆ. ಅವರ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಶಾಲೆ ಶಿಕ್ಷಣ 'ಸಂದರ್ಶನ ವಿಧಾನ' (Interview Method)ದ ಅಂಕಿಅಂಶಗಳೊಂದಿಗೆ ಹೋಲಿಸಿದಾಗ ಸಾಮಿಪ್ಯತೆ ಕಂಡುಬರುತ್ತದೆ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಹೆಣ್ಣು ಮಕ್ಕಳ ಶಿಕ್ಷಣ ಮಟ್ಟದಲ್ಲಿ ಹೆಚ್ಚಿನ ಪ್ರಮಾಣದ ವ್ಯತ್ಯಾಸ ಕಂಡುಬರುತ್ತದೆ. ಹಾಗೆಯೇ ಪ್ರತಿಶತ ಅನಕ್ಷರಸ್ಥರ ಅಂಕಿ ಅಂಶದಲ್ಲಿಯೂ ಸಹ ಪ್ರತಿಶತ ೨೬ ರಷ್ಟು ವ್ಯತ್ಯಾಸ ಇದೆ.

ಈ ಸಮುದಾಯದಲ್ಲಿ ಹೆಣ್ಣು ಮಕ್ಕಳು ಶಿಕ್ಷಣ ಪಡೆಯುತ್ತಿರುವ ಗಂಡು ಹುಡುಗರಿಗಿಂತ ಅಧಿಕವಾಗಿದೆ. ಆದರೆ ಮಾಧ್ಯಮಿಕ ಶಿಕ್ಷಣದ ನಂತರ ಈ ಸಮುದಾಯದವರು ಶಿಕ್ಷಣವನ್ನು ಮೊಟಕುಗೊಳಿಸಿದ್ದಾರೆ. ಇನ್ನು ಉನ್ನತ ಶಿಕ್ಷಣವಾದ ಪದವಿ, ಸ್ನಾತಕೋತ್ತರ, ವೈದ್ಯಕೀಯ ಹಾಗೂ ತಾಂತ್ರಿಕ ಶಿಕ್ಷಣವನ್ನು ಪಡೆಯದೆ ಇರುವದು ಕಂಡುಬಂದಿದೆ.

ಲಭ್ಯವಿರುವ ಶೈಕ್ಷಣಿಕ ಸೌಲಭ್ಯಗಳ ಮೌಲ್ಯಂಕನ ಮಾಡಲಾಯಿತು. ಮಾಹಿತಿದಾರರಲ್ಲಿ ಬಹುಸಂಖ್ಯಾತರು ೨೩೦ (ಪ್ರತಿಶತ ೭೬.೬) ಸೌಲಭ್ಯಗಳು ಸಾಕಷ್ಟಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದರೆ, ಕೇವಲ ೭೦ (ಪ್ರತಿಶತ ೨೩.೪) ಜನರು ಅವು ಸಾಕಷ್ಟಿವೆ ಎಂದರು. ಅವರು ಈ ಕೆಳಗಿನ ಕಾರಣಗಳನ್ನು ಕೊಟ್ಟರು. ದೀರ್ಘವಾದ ಅಂತರ, ಮಳೆಗಾಲದಲ್ಲಿ ಉಂಟಾಗುವ ಅನಾನುಕೂಲತೆಗಳು, ಪ್ರಾಥಮಿಕ ಮತ್ತು ಪೂರ್ವ ಪ್ರಾಥಮಿಕ ಶಿಕ್ಷಣಕ್ಕಾಗಿ ಅವರ ಪ್ರದೇಶಗಳಲ್ಲಿ ಕಂಡುಬರುವ ಸೌಲಭ್ಯಗಳ ಕೊರತೆ.

ವ್ಯಕ್ತಿ ಅಧ್ಯಯನ ವಿಧಾನದಲ್ಲಿ ಚರ್ಚಿಸಿದಂತೆ ಕುಣಬಿ ಸಮುದಾಯದ ಪಾಲಕರು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಉತ್ತಮ ಧೋರಣೆ (ಆಶೋತ್ತರ) ಗಳನ್ನು ಹೊಂದಿರುವುದು ಕಂಡುಬರುತ್ತದೆ. ಅವರಲ್ಲಿ ಬಹುಸಂಖ್ಯಾತರು ೨೫೮ (ಪ್ರತಿಶತ ೮೬) ಜನರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವ ಬಗ್ಗೆ ಒಲವು ಉಳ್ಳವರಾಗಿದ್ದರು; ಉಳಿದ ೪೨ (ಪ್ರತಿಶತ ೧೪) ಜನರು ಯಾವುದೇ ಆಸಕ್ತಿ ತೋರಿಸಲಿಲ್ಲ. ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವುದರಿಂದ ಉತ್ತಮ ಅವಕಾಶಗಳು, ಉದ್ಯೋಗ, ಸ್ಥಾನಮಾನ ಮತ್ತು ತಮ್ಮ ಭದ್ರತೆ ಇವುಗಳೇ ಪಾಲಕರಿಗೆ ಪ್ರೇರಣೆಯನ್ನೊದಗಿಸಿದ ಪ್ರಮುಖ ಅಂಶಗಳಾಗಿವೆ.

ನಿಷೇಧಾತ್ಮಕ ಉತ್ತರ ಕೊಟ್ಟವರು ಉದ್ಯೋಗಾವಕಾಶಗಳ ಕೊರತೆ, ಆರ್ಥಿಕ ಸಮಸ್ಯೆಗಳು ಮತ್ತು ತಮ್ಮ ಮಕ್ಕಳಲ್ಲಿ ಪ್ರೇರಣೆಯ ಒಟ್ಟು ಕೊರತೆ – ಈ ಕಾರಣಗಳನ್ನು ಮುಂದು ಮಾಡಿದರು.

**ಕೋಷ್ಟಕ ೩.೧೦**

**ಮಕ್ಕಳ ಶಿಕ್ಷಣ ಕುರಿತು ಪಾಲಕರ ಆಶೋತ್ತರಗಳು**

| ಕ್ರಸಂ. | ಉತ್ತರ (ಶಿಕ್ಷಣ) | ಪಾಲಕರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಪ್ರಾಥಮಿಕ | ೯೫ | ೩೨.೦೦ |
| ೨ | ಮಾಧ್ಯಮಿಕ | ೭೮ | ೨೬.೦೦ |
| ೩ | ಪ್ರೌಢ | ೪೩ | ೧೪.೦೦ |
| ೪ | ಕಾಲೇಜು | ೩೮ | ೧೩.೦೦ |
| ೫ | ಸರ್ಟಿಫಿಕೇಟ್/ಡಿಪ್ಲೊಮಾ | ೧೮ | ೬.೦೦ |
| ೬ | ಉತ್ತರಿಸಲಾರದವರು | ೨೮ | ೯.೦೦ |
| | ಒಟ್ಟಾರೆ | ೩೦೦ | ೧೦೦.೦೦ |



ಕೋಷ್ಟಕ ೩.೧೦ ರಲ್ಲಿ ಮಾಹಿತಿ (ಪಾಲಕರ)ದಾರರ ಆಶೋತ್ತರಗಳನ್ನು ಕುರಿತು ಮಾಹಿತಿ ಇದೆ. ಮಾಹಿತಿದಾರರು ತಮ್ಮ ಮಕ್ಕಳಿಗೆ ನೂರಕ್ಕೆ ನೂರರಷ್ಟು ಶಿಕ್ಷಣವನ್ನು ಕೊಡಿಸುವಲ್ಲಿ ಸಿದ್ಧರಾಗಿದ್ದು, ಶಿಕ್ಷಣವು ಸಮಾಜವನ್ನು ನಿರಂತರ ಪರಿವರ್ತನಶೀಲವನ್ನಾಗಿ ಮಾಡುವಲ್ಲಿ ಶಿಕ್ಷಣದ ಪಾತ್ರ ಅತ್ಯುತ್ತಮವಾದ ಪಾತ್ರವನ್ನು ವಹಿಸುತ್ತದೆ. ಯಾವುದೇ ಒಂದು ಸಮುದಾಯವು ಒಂದು ಕ್ರಮಬದ್ಧವಾದ ಚೌಕಟ್ಟಿನಲ್ಲಿ, ಕ್ರಿಯಾಶೀಲ ಹಾಗೂ ಕ್ರಿಯಾತ್ಮಕ ಸ್ಥಿತಿಯಲ್ಲಿ ಸಾಗಲು ಸಹಕಾರಿಯಾದ ಕ್ಷೇತ್ರವನ್ನು ಒದಗಿಸುತ್ತದೆ.

ಆದಕಾರಣ ಕೋಷ್ಟಕ ೩.೧೦ ನ್ನು ನೋಡಿದಾಗ, ಮಾಹಿತಿದಾರರು ಮುಂದುವರಿಯುತ್ತಿರುವ ಜಗತ್ತಿನ ಪರಿಸ್ಥಿತಿಗನುಗುಣವಾಗಿ ಈ ಸ್ಪರ್ಧಾತ್ಮಕ ಹಾಗೂ ಕಂಪ್ಯೂಟರ್ ಯುಗಕ್ಕನುಗುಣವಾಗಿ ತಮ್ಮ ಮಕ್ಕಳ ಭಾವೀ ಭವಿಷ್ಯವು ಯಾವ ರೀತಿಯಾಗಿರಬೇಕು ಎಂಬುದನ್ನು ಅವರು ಈಗಿನಿಂದಲೇ ಕ್ರಮಿಸುತ್ತಿರುವುದು ಮಾಹಿತಿದಾರರು ನೀಡಿರುವ ಮಾಹಿತಿಯಿಂದ ತಿಳಿದುಬರುತ್ತದೆ. ಪಾಲಕರು ತಿಳಿಸಿದಂತೆ ಪ್ರತಿಶತ ೩೨ ರಷ್ಟು ಜನರು ಪ್ರಾಥಮಿಕ ಮಟ್ಟದವರೆಗೆ ಓದಿಸುವದಾಗಿ ಹೇಳಿದರು. ೪೩ (ಪ್ರತಿಶತ ೧೪) ರಷ್ಟು ಜನರು ತಮ್ಮ ಮಕ್ಕಳನ್ನು ಪ್ರೌಢ ಶಿಕ್ಷಣ ಮಟ್ಟದವರೆಗೆ ಓದಿಸಲು ಪ್ರಾಶಸ್ತ್ಯ ಕೊಟ್ಟರು, ೩೮ (ಪ್ರತಿಶತ ೧೩) ರಷ್ಟು ಜನರು ತಮ್ಮ ಮಕ್ಕಳನ್ನು ಕಾಲೇಜು ಮಟ್ಟದವರೆಗೆ ಓದಿಸುವ ಮನಸ್ಸುಳ್ಳವರಾಗಿರುವದು ಉತ್ತೇಜನಕಾರಿ ವಿಷಯವಾಗಿದೆ. ಕೇವಲ ಕೆಲವೇ ಮಾಹಿತಿದಾರರು (ಪಾಲಕರು) ಅಂದರೆ ೧೮ (ಪ್ರತಿಶತ ೬) ರಷ್ಟು ಮಾತ್ರ ತಮ್ಮ ಮಕ್ಕಳನ್ನು Job Oriented Diploma ಅಥವಾ Certificate Technical Course ಗೆ ಹಾಕುವದಾಗಿ ತಿಳಿಸಿದರು. ಪಾಲಕರ ಆಶೋತ್ತರಗಳಿಗೆ ಸ್ಪಂದಿಸಿದಲ್ಲಿ ಕುಣಬಿ ಸಮುದಾಯದ ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿ ಉಂಟುಮಾಡುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಇದರಿಂದ ತಿಳಿದು ಬರುವ ಮಾಹಿತಿ ಎಂದರೆ ಕುಣಬಿಯರು ಕನಿಷ್ಠ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ.

ಕುಣಬಿ ಸಮುದಾಯದಲ್ಲಿ ಪ್ರಾಥಮಿಕ ಹಂತದ ಶಿಕ್ಷಣ ಪಡೆಯಲು ತಕ್ಕಮಟ್ಟಿಗೆ ಸಾಧ್ಯವಿದ್ದು, ಮಾಧ್ಯಮಿಕ ಹಂತದ ಶಿಕ್ಷಣವನ್ನು ಪಡೆಯಲು ಸುಮಾರು ೪ ರಿಂದ ೫ ಕಿ.ಮೀ. ದೂರದಲ್ಲಿ ಅಥವಾ ತಾಲೂಕು ಕೇಂದ್ರಗಳಿಗೆ ಹೋಗಬೇಕಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಹೆಣ್ಣು ಮಕ್ಕಳಿಗಂತೂ ಇದು ಅತೀ ತೊಂದರೆದಾಯಕವಾಗಿದ್ದು ಇವರಲ್ಲಿ ಶಿಕ್ಷಣ ಮಟ್ಟ ಕುಸಿಯಲು ಬಲವಾದ ಕಾರಣವಾಗಿದೆ. ತೆಲೊಲಿ, ಘಟ್ಟಾವ, ದೇವಸ, ಡಿಗ್ಗಿ, ಕುಂಡಲಗಳಲ್ಲಿ ಪ್ರಾಥಮಿಕ ಶಾಲೆ ಮಾತ್ರ ಇದೆ. ಈ ಗ್ರಾಮಗಳಲ್ಲಿ ೪ ರಿಂದ ೧೦ ಕುಣಬಿ ಕುಟುಂಬಗಳು ಮಾತ್ರ ಇವೆ. ಮುಂದಿನ ಶಿಕ್ಷಣ ಪಡೆಯಬೇಕೆಂದರೆ ದೂರದ ಕುಂಬಾರವಾಡ, ಜೋಯಿಡಾಕ್ಕೆ

ಹೋಗಬೇಕು. ಈ ಗ್ರಾಮಗಳು ತುಂಬಾ ಎತ್ತರ ಹಾಗೂ ದಟ್ಟ ಅರಣ್ಯದ ಮಡಿಲಲ್ಲಿವೆ. ನಿತ್ಯ ಮಕ್ಕಳು ಈ ದಾರಿ ಮೂಲಕ ಶಾಲೆಗೆ, ಕಾಲೇಜಿಗೆ ಬಂದು ಹೋಗಲು ತುಂಬಾ ಕಷ್ಟ ಪಡುತ್ತಾರೆ. ಆದರೆ ಇಲ್ಲಿ ಇರುವ ಪ್ರಾಥಮಿಕ ಶಾಲಾ ಶಿಕ್ಷಕರು ದಿನಾ ಈ ಶಾಲೆಗೆ ಬರುವುದಿಲ್ಲ. ತುಂಬಾ ಎತ್ತರದಲ್ಲಿರುವ ಹಾಗೂ ರಸ್ತೆ, ವಾಹನ ಸೌಲಭ್ಯ ಇಲ್ಲ. ನಿತ್ಯ ಕಾಲ್ನಡಿಗೆಯಲ್ಲಿಯೇ ಬಂದು ಹೋಗಬೇಕು, ಬಂದರೆ ವಾರಕ್ಕೆ ಒಂದೆರಡು ಸಾರಿ ಮಾತ್ರ ಬರುತ್ತಾರೆ. ಈ ಊರಿನ ಮಕ್ಕಳು ಪ್ರೌಢ ಮತ್ತು ಕಾಲೇಜು ಶಿಕ್ಷಣ ಪಡೆಯಲು ಆಗುತ್ತಿಲ್ಲ. ಹೆಣ್ಣುಮಕ್ಕಳು ಒಂಟಿಯಾಗಿ ನಿತ್ಯ ಕುಂಬಾರವಾಡ, ಜೋಯಿಡಾಕ್ಕೆ ಬಂದು ಹೋಗಲು ಸಾಧ್ಯವಾಗದೆ ಅರ್ಧದಲ್ಲಿಯೇ ಶಾಲೆ ಬಿಡುತ್ತಿದ್ದಾರೆ.

ತೆಲೋಲಿ, ಘಟ್ಟಾವ, ದೇವಸ, ಕುಂಡಲ, ಡಿಗ್ಗಿಗಳ ಸ್ಥಿತಿ ಹೀಗಿದ್ದರೆ, ಕುಣಬಿಗಳು ಹೆಚ್ಚಾಗಿ ವಾಸಿಸುವುದು ಅರಣ್ಯ ಪ್ರದೇಶದಲ್ಲಿ ಹಾಗೂ ಮಳೆಗಾಲದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಅತೀ ಹೆಚ್ಚು ಮಳೆ ಬೀಳುತ್ತದೆ. ಮಳೆಗಾಲದಲ್ಲಿ ಈ ಭಾಗದ ಹಳ್ಳ, ಕೊಳ್ಳ, ಕೆರೆ, ನದಿ ತುಂಬಿ ಹರಿಯುತ್ತವೆ. ಈ ಪ್ರದೇಶದ ಸುತ್ತಮುತ್ತಲು ವಾಸಿಸುವ ಕುಣಬಿ ಗ್ರಾಮಗಳು ಮುಳುಗಡೆಯಾಗಿರುತ್ತವೆ ಹಾಗೂ ಕುಂಡಲ, ಕುರಾವಲಿ, ತೆಲೋಲಿ, ಕಾರ್‌ಸಿಂಗಳ, ದೇವಸ, ಘಟ್ಟಾವ, ಗ್ರಾಮ ನಡುವಿನ ಸಂಪರ್ಕ ಕಡಿದುಹೋಗಿರುತ್ತವೆ. ಪ್ರತಿ ವರ್ಷ ಮಳೆಗಾಲದಲ್ಲಿ ಸಂಪೂರ್ಣವಾಗಿ ನೀರಿನಿಂದ ಜಲಾವೃತಗೊಂಡಿರುತ್ತದೆ. ಸಂಪರ್ಕಗಳ ಕಡಿದು ಹೋಗಿರುತ್ತದೆ, ಇಂತಹ ಸಂದರ್ಭದಲ್ಲಿ ಈ ಗ್ರಾಮಗಳಲ್ಲಿ ಒಂದು ಸೇತುವೆಯೂ ಕೂಡ ಇಲ್ಲ. ಎಷ್ಟು ಸಾರಿ ಈ ಗ್ರಾಮದವರು ತಮಗೆ ಸೇತುವೆಯನ್ನು ಕಟ್ಟಿಕೊಡಿ ಅಂತ ಕೇಳಿದರು, ಹೋರಾಟ ಮಾಡಿದರು, ಅಕ್ಷರ ರೂಪದಲ್ಲಿ ತಮ್ಮ ಅಹವಾಲನ್ನು ನೀಡಿದರು, ಇಂದಿನವರೆಗೂ ಸೇತುವೆಯನ್ನು ಕಟ್ಟಿಲ್ಲ. ಈ ಗ್ರಾಮಗಳಿಗೆ ಪರ್ಯಾಯ ಮಾರ್ಗಗಳಾಗಲಿ, ರಸ್ತೆಗಳಾಗಲಿ ಇಲ್ಲ. ಮಳೆಗಾಲದ ಸಂದರ್ಭದಲ್ಲಿ ಇಲ್ಲಿನ ಬಹುಪಾಲು ಮಕ್ಕಳು ಶಾಲೆಗೆ ಹೋಗಲು ಆಗದೆ ಮನೆಯಲ್ಲಿ ಉಳಿಯುತ್ತಾರೆ. ಅರ್ಧದಲ್ಲೇ ವಿದ್ಯಾಭ್ಯಾಸ ನಿಂತು ಹೋಗುತ್ತದೆ.

ಮತ್ತೊಂದೆಡೆ ಬಹುಪಾಲು ಕುಣಬಿಯರಿಗೆ ಜಮೀನಿಲ್ಲ. ಕೂಲಿ ಮಾಡಿ ಜೀವನ ನಡೆಸಬೇಕು. ಇವರಿಗೆ ದೊರೆಯುವ ಕೂಲಿ ೪೦-೫೦ ರೂ. ಮಾತ್ರ. ಇಂಥ ಸಂದರ್ಭದಲ್ಲಿ ಮಕ್ಕಳಿಗೆ ಶಾಲೆಗೆ ಕಳಿಸಲು ಸಾಧ್ಯವಾಗುತ್ತಿಲ್ಲ. ಕುಣಬಿಗಳಿಗೆ ಆರ್ಥಿಕವಾಗಿ ಮುನ್ನಡೆಸದಿದ್ದಲ್ಲಿ ಇವರನ್ನು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಸಬಲೀಕರಿಸಲು ಸಾಧ್ಯವಿಲ್ಲ. 'ಅದರಲ್ಲೂ ಶೈಕ್ಷಣಿಕವಾಗಿ ಸಬಲಗೊಳ್ಳದ ಯಾವ ಸಮುದಾಯವು ವರ್ತಮಾನವನ್ನು ಎದುರಿಸಿ ನಿಲ್ಲಲು ಸಾಧ್ಯವೂ ಇಲ್ಲ'.[೨೧] ಕುಣಬಿ ಸಮುದಾಯವನ್ನು ಆರ್ಥಿಕವಾಗಿ ಸಬಲಗೊಳಿಸಿದರೆ ಅದು

ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಸಬಲಗೊಳ್ಳಲು ಸಾಧ್ಯವಾಗುತ್ತದೆ. ಮೇಲೆ ತಿಳಿಸಿದ ಗ್ರಾಮಗಳಲ್ಲಿ ಸರಕಾರ ಮೊಬೈಲ್ ಶಾಲೆಯನ್ನು ತೆರೆಯಬೇಕು. ಮಳೆಗಾಲದಲ್ಲಿ ಸರಕಾರ ಊರಿಗೆ ಸೇತುವೆ ಕಟ್ಟಿಸಿ ವಾಹನ ಸೌಲಭ್ಯ ಕಲ್ಪಿಸಿಕೊಡಬೇಕು, ಇರುವ ಊರಿನಲ್ಲೇ ಶಾಲೆಗಳನ್ನು ತೆರೆಯಬೇಕು.

ಒಟ್ಟಿನಲ್ಲಿ ತಿಳಿದುಬರುವುದೇನೆಂದರೆ, ಶಿಕ್ಷಣವು ಕುಣಬಿ ಸಮುದಾಯದವರಲ್ಲಿ ಹಲವಾರು ರೀತಿಯ ತಿಳುವಳಿಕೆ, ಜ್ಞಾನ ಹಾಗೂ ಅವರು ಸ್ವಾವಲಂಬಿಗಳಾಗಿ ಬದುಕಲು, ಅವರಿಗೆ ಅನುಭವ ಮತ್ತು ಅವರ ಜೀವನ ಮಾರ್ಗ ಕಂಡುಕೊಳ್ಳಲು ಶಿಕ್ಷಣವು ಅವಶ್ಯಕವಾಗಿದೆ. ಆದರೂ ಮಕ್ಕಳಿಗೆ ಶಿಕ್ಷಣವನ್ನು ಒದಗಿಸಲು ಹಲವಾರು ತೊಂದರೆಗಳಿದ್ದರೂ ಮಾಹಿತಿದಾರರು ತಮ್ಮ ಮಕ್ಕಳನ್ನು ಸುಶಿಕ್ಷತರನ್ನಾಗಿ ಮಾಡಲು ಪರಿಶ್ರಮಪಡುತ್ತಿದ್ದೇವೆ ಎಂಬುದನ್ನು ಅಧ್ಯಯನ ಕ್ಷೇತ್ರದಲ್ಲಿ ಕ್ಷೇತ್ರಕಾರ್ಯ ಕೈಕೊಂಡಾಗ ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಆದರೆ ಹೆಚ್ಚಿನ ಕುಣಬಿ ಸಮುದಾಯದ ಜನರು ಸರಕಾರಿ ನೌಕರಿಗಾಗಿ ಕಾಯದೇ ತಮ್ಮದೇ ಆದ ಸ್ವಂತ ಉದ್ಯೋಗಗಳನ್ನು ಹೊಂದಿ, ಸಮಾಜದಲ್ಲಿ ಉತ್ತಮ ಜೀವನವನ್ನು ಸಾಗಿಸುತ್ತಿರುವುದು ಕಂಡುಬಂದಿದೆ. ಇವರು ತಮ್ಮ ಅತ್ಯಮೂಲ್ಯವಾದ ಸಮಯವನ್ನು ಹಾಳುಮಾಡದೆ, ಅದರ ಸದುಪಯೋಗವನ್ನು ಪಡೆದುಕೊಂಡು ಅವರು ಸಹ ಇತರರಂತೆ ಸಹಬಾಳ್ವೆ ನಡೆಸಲು ಹಾಗೂ ಪರಿವರ್ತನೆ ಹೊಂದುತ್ತಿರುವ ಸಮಾಜದಲ್ಲಿ ಕ್ರಿಯಾಶೀಲಾಗಿ, ತಮ್ಮಲ್ಲಿ ಕೀಳರಿಮೆಯನ್ನು ಬಿಟ್ಟು, ಇತರರಂತೆ ಬಾಳುವ ಉತ್ತಮವಾದ ಮನೋಭಾವವು ಅವರಲ್ಲಿ ಬೆಳೆದಿರುವುದನ್ನು ಕಾಣಬಹುದು.

ಶಿಕ್ಷಣ ಪ್ರತಿಯೊಬ್ಬರಿಗೂ ಅತೀ ಅವಶ್ಯಕವಾಗಿದ್ದು, ಅದರಿಂದ ಜೀವನವನ್ನು ಸುಗಮವಾಗಿ ಸಾಗಿಸಲು ಕಾರಣವಾಗಿದ್ದು, ಅದನ್ನು ಮಾಹಿತಿದಾರರು ತಮ್ಮ ಜೀವನದಲ್ಲಿ ಹೊಂದಿ ಪರಿವರ್ತಿತ ಸಮಾಜದೊಂದಿಗೆ ಸಾಗಿರುವುದು ಸಂತಸದ ಸಂಗತಿಯಾಗಿದೆ.

### ೩.೭ ಕುಣಬಿ ಉಡುಗೆ-ತೊಡಿಗೆ ಆಭರಣಗಳು

ಬಟ್ಟೆ ಸಾಮಾಜಿಕ ಅವಶ್ಯಕತೆಯಾಗಿದ್ದು, ವ್ಯಕ್ತಿಯೊಬ್ಬನ ಅಂತಸ್ತನ್ನು ನಿರ್ಣಯಿಸುತ್ತದೆ. ಅದು ವ್ಯಕ್ತಿಯ ವ್ಯಕ್ತಿತ್ವದ ಅಭಿವ್ಯಕ್ತಿ. ಆಧುನಿಕ ಸಮಾಜದಲ್ಲಿ ಉಡುಗೆ ವಿಷಯವಾಗಿ ಅನೇಕ ಬದಲಾವಣೆಗಳು ಉಂಟಾಗಿವೆ. ಕಾರಣವೇನೆಂದರೆ ಪಾಶ್ಚಾತ್ಯರ ಅನುಕರಣೆ ಮತ್ತು ಕೆಳವರ್ಗದ ಜನರು, ಬುಡಕಟ್ಟು ಜನರು ಮೇಲ್ವರ್ಗದವರ ಉಡುಗೆ ಮತ್ತು ಮೌಲ್ಯಗಳ ಅನುಕರಣೆ ಮಾಡುತ್ತಿರುವರು. ಎಂ.ಎನ್. ಶ್ರೀನಿವಾಸರು ಈ ಪ್ರಕ್ರಿಯೆಯನ್ನು ಪಾಶ್ಚಾತ್ಯಕರಣ ಮತ್ತು ಸಂಸ್ಕೃತೀಕರಣ ಎಂದು ಕರೆದಿದ್ದಾರೆ. ಬುಡಕಟ್ಟು ತೊಡುವ ಕಾಸ್ಟ್ಯೂಮ್ಸ್‌ನಲ್ಲಿ ಇಂದು

ಬದಲಾವಣೆಯಾಗಿದೆ. ಪಾಶ್ಚಾತ್ಯ ಡ್ರೆಸ್ಸಿನ ಅನುಕರಣೆ ಮತ್ತು ಆಧುನಿಕ ಶೈಲಿಯಲ್ಲಿ ಉಡುಪು, ಆಭರಣಗಳನ್ನು ಧರಿಸುವ ಪ್ರವೃತ್ತಿ ಇಂದು ಬುಡಕಟ್ಟುಗಳ ಸಂಸ್ಕೃತಿ, ಕಲೆ, ಸಂಗೀತ, ನೃತ್ಯ, ಕುಶಲ ಕಲೆಗಳಲ್ಲಿ ಬದಲಾವಣೆಗೆ ಎಡೆಮಾಡಿವೆ.

**ಮಹಿಳೆಯರ ಉಡುಗೆ**

ಕುಣಬಿ ಸ್ತ್ರೀಯರು ಹಾಲಕ್ಕಿ ಸ್ತ್ರೀಯರಂತೆ ಉಡುಗೆಯನ್ನು ತೊಡುತ್ತಾರೆ. ಇವರ ಉಡಿಗೆ ತೊಡಿಗೆಯು ವೈಶಿಷ್ಟ್ಯತೆಯಿಂದ ಕೂಡಿದ್ದು, ಬಹುತೇಕ ಕೃಷಿ ಕೂಲಿಗಳಾಗಿರುವ ಕುಣಬಿಗಳು ಕಾಡಿನ ನಡುವೆ ತಮ್ಮದೇ ಆದ ಬದುಕು ಕಟ್ಟಿಕೊಂಡಿರುವ ಕುಣಬಿ ಮಹಿಳೆಯರು ರವಿಕೆ ಧರಿಸದೆ ದೇಹದ ಸುತ್ತ ಕೇವಲ ಸೀರೆಯನ್ನು ಮಾತ್ರ ಸುತ್ತಿಕೊಳ್ಳುವ ಸಂಪ್ರದಾಯವೆಂದಿದ್ದಾರೆ ಇದಕ್ಕೆ 'ದೇಟ್ಲಿ' ಎಂಬ ಹೆಸರಿನಿಂದ ಕರೆಯುವರು. ಸೀರೆಯನ್ನು ಉಡುವಾಗ ಸೀರೆಯ ಮೇಲಿನ ಬಲಭಾಗಕ್ಕೆ ಗಂಟು ಕಟ್ಟುವುದಕ್ಕೆ ದೇಟ್ಲಿ ಎಂದು ಹೇಳುವರು.

ಕೆಲವು ಹೆಂಗಸರು ಮನೆಯಲ್ಲಿ ಮಾತ್ರ 'ದೇಟ್ಲಿ' ರೀತಿಯಲ್ಲಿ ಸೀರೆ ಉಡುತ್ತಾರೆ, ಹೊರಗೆ ಹೋಗುವಾಗ ಭಾರತೀಯ ಶೈಲಿಯಲ್ಲಿ ಸೀರೆ ಉಡುತ್ತಾರೆ. ಇತ್ತೀಚಿನವರೆಗೆ ರವಿಕೆಗಳ ಅರಿವೇ ಇರಲಿಲ್ಲ. ಇಂದಿಗೂ ಕೂಡ ಕೆಲವು ಸಂಪ್ರದಾಯಸ್ತ ಹಿರಿಯ ಹೆಂಗಸರು ರವಿಕೆ ಧರಿಸುವುದಿಲ್ಲ. ಅವರ ದೇವಿಯಾದ ಗೋವೆಯ 'ಅಂಬಾ' ಅಥವಾ 'ಆದಿಶಕ್ತಿ' ತನ್ನ ದೇಹದ ಮೇಲ್ಭಾಗದಲ್ಲಿ ರವಿಕೆ ಧರಿಸುತ್ತಾಳೆ; ಆದ್ದರಿಂದ ಕುಣಬಿ ಹೆಂಗಸರು ರವಿಕೆ ಧರಿಸುವುದನ್ನು ನಿಷೇಧಿಸಲಾಗಿದೆ. ಇದುವೆ ಕುಣಬಿ ಹೆಂಗಸರು ರವಿಕೆ ಧರಿಸದೆ ಇರಲು ಮುಖ್ಯ ಕಾರಣ. ಆದರೆ ಕುಣಬಿ ವಧು ಮದುವೆಯ ದಿನದಂದು ಮಾತ್ರ ರವಿಕೆ ಧರಿಸುತ್ತಾಳೆ ಏಕೆಂದರೆ ಅಂದು ಅವಳು ಮಾತೃದೇವತೆಯ ಸಂಕೇತವೆಂದು ನಂಬಲಾಗುತ್ತದೆ. ಆದರೆ ಹಿಂದೂ ಧರ್ಮದ ಪ್ರತೀಕವಾದ ಕುಂಕುಮ, ಬಳೆ, ತಲೆ ತುಂಬ ಹೂವು, ಕುಣಬಿ ಮಹಿಳೆಯರಿಗೆ ಇಷ್ಟವಾದವುಗಳಾಗಿವೆ. ಕಾಕಡೆ ಹೂವು, ಸೀತಾ ಹೂವು, ಸುರಗಿ ಹೂವು, ಅಬ್ಬಲಿಗೆ ಹೂವು ಪ್ರಮುಖವಾದವುಗಳಾಗಿವೆ.

'ನಾವು ಬದಲಾಗುತ್ತೇವೆ' ಎಂಬುದು ಜೋಯಿಡಾ ತಾಲೂಕಿನ ಕುಂಬಾರ ಸಮೀಪದ ಕುಂಡಲ ಹಳ್ಳಿಯ ಕುಣಬಿಗಳ ಆತ್ಮವಿಶ್ವಾಸದ ನುಡಿ. ಕುಂಡಲನ್ನು ಪ್ರವೇಶಿಸಿದರೆ ಅವರ ಮಾತು, ಅವರ ಮನೆಗಳು ಹಾಗೂ ಧರಿಸುವ ಬಟ್ಟೆಬರೆಗಳಿಂದಲೂ ಬದಲಾವಣೆಯನ್ನು ಕಾಣಬಹುದು.

ಬಹುತೇಕ ಕೃಷಿ ಕೂಲಿಗಳಾಗಿರುವ ಕುಣಬಿಗಳ ಮನೆಯಲ್ಲಿ ಇತ್ತೀಚೆಗಷ್ಟೆ ವಿದ್ಯುತ್ ದೀಪಗಳು ಅಲಂಕರಿಸುತ್ತಿವೆ. ಮೊದಲಿನ ಚಿಮಣಿ ಬುಡ್ಡೆಗಳು ತೀರಾ ಕಡಿಮೆ. ಸಾರ್ವಜನಿಕವಾಗಿ ತಮ್ಮ ಸೀರೆ ಧರಿಸುವ ರೀತಿ ರಿವಾಜುಗಳಿಂದ ಗಮನ ಸೆಳೆಯುತ್ತಿದ್ದ ಕುಣಬಿಗಳಲ್ಲಿ, ಇಂದಿನ ಸಮಾಜದಲ್ಲಿ ಯುವ ಜನತೆಯು ಕ್ರಮೇಣ ಹಳೆಯ ಕಾಲದ ಉಡುಗೆ ಪದ್ಧತಿಯನ್ನು

ಬಿಟ್ಟುಬಿಡುತ್ತಿದ್ದಾರೆ. ಎಲ್ಲ ಉಪ ಬುಡಕಟ್ಟುಗಳ ಹೆಂಗಸರು ಭಾರತೀಯ ಶೈಲಿಯಲ್ಲಿಯೇ ಸೀರೆ ಉಡುತ್ತಿದ್ದಾರೆ. ಸಾಂಪ್ರದಾಯಿಕ ಹೆಂಗಸರು ಸಾಮಾನ್ಯವಾಗಿ ತಿಳಿಬಣ್ಣದ ಹಳದಿ, ಕೆಂಪು, ಹಸಿರು ಚೌಕಡಿ ವಿನ್ಯಾಸದ ಸೀರೆಗಳನ್ನು ಇಷ್ಟಪಡುತ್ತಾರೆ. ಹುಡುಗಿಯರು ಮತ್ತು ಯುವ ಸ್ತ್ರೀಯರು ನೆರೆಯ ಸಮುದಾಯದ ಹೆಂಗಸರ ಪ್ರಭಾವದಿಂದಾಗಿ ಬಣ್ಣ ಬಣ್ಣದ ಸಿಂಥೆಟಿಕ್ ಸೀರೆಗಳನ್ನು ಉಡುತ್ತಾರೆ. ರವಿಕೆ ಧರಿಸುತ್ತಾರೆ, ಅಲ್ಲದೆ ಹಣೆಯ ಮೇಲೆ ಫ್ಯಾಶನಬಲ್ ಕೆಂಪು ಕುಂಕುಮ ಇಟ್ಟುಕೊಳ್ಳುತ್ತಾರೆ. ತಲೆಗೆ ಎಣ್ಣೆ ಹಚ್ಚಿ, ನಡುವೆ ಬೈತಲೆ ತೆಗೆದು, ಕೂದಲು ಬಾಚಿಕೊಳ್ಳುತ್ತಾರೆ.

**ಆಭರಣಗಳು**

ಹೆಂಗಸರು ವಿವಿಧ ವಿನ್ಯಾಸದ ಹಾಗೂ ಗಾತ್ರದ ಆಭರಣಗಳನ್ನು ಧರಿಸುತ್ತಾರೆ. ಅವರಿಗೆ ಬಂಗಾರ-ಬೆಳ್ಳಿಯ ಆಭರಣಗಳು ಬಹಳ ಪ್ರಮುಖವಾದವು. ಆದರೂ ಅಲ್ಯುಮಿನಿಯಂ, ಮಣಿಗಳು, ನಾಣ್ಯಗಳು, ತಾಮ್ರ ಮುಂತಾದವುಗಳಿಂದ ಮಾಡಿದ ಆಭರಣಗಳನ್ನು ಬಳಸುತ್ತಾರೆ. ದೇಹದ ವಿವಿಧ ಅಂಗಗಳಾದ ಕಿವಿ, ಮೂಗು, ತಲೆ, ಕೊರಳು, ಕೈ, ಕೈ ಬೆರಳು, ಮುಂತಾದವುಗಳ ಮೇಲೆ ಆಭರಣ ತೊಡುತ್ತಾರೆ. ಆಶ್ಚರ್ಯಕರವಾದ ಸಂಗತಿ ಎಂದರೆ ಹಿಂದೂ ಸಮಾಜದಲ್ಲಿ ಕೇವಲ ವಿವಾಹಿತ ಮಹಿಳೆ ಮಾತ್ರ ಧರಿಸುವಂತಹ ಮಂಗಳಸೂತ್ರ ಮತ್ತು ಕಾಲುಂಗರಗಳನ್ನು ಕುಣಬಿ ಅವಿವಾಹಿತ ಹುಡುಗಿ ಧರಿಸುತ್ತಾಳೆ. ಆದರೆ ಇತ್ತೀಚೆಗೆ ಈ ರೂಢಿ ಕ್ರಮೇಣ ಮರೆಯಾಗುತ್ತಿದೆ.

ಕಿವಿಯಲ್ಲಿ ಧರಿಸುವ ಸಾಮಾನ್ಯ ಆಭರಣ ಎಂದರೆ ಅರ್ಧವೃತ್ತಾಕಾರದ ಓಲೆ, ರಿಂಗು, ಟಾಪ್, ಮುಗುಳು (ಕಿವಿಯ ಮೇಲ್ಭಾಗದಲ್ಲಿ ಧರಿಸುವಂತದ್ದು) ಮತ್ತು ಗುಂಡಾಲ (ಕಿವಿಯ ನಡುಭಾಗದಲ್ಲಿ ಧರಿಸುವಂತದ್ದು). ಮೂಗಬಟ್ಟು, ನತ್ತು ಮೂಗಿನಲ್ಲಿ ಧರಿಸಬಹುದಾದ ಸಾಮಾನ್ಯ ಆಭರಣ. ಹಿಂದಿನ ಕಾಲದಲ್ಲಿ ನತ್ತು ಬಹಳ ಉದ್ದವಾಗಿರುತ್ತಿತ್ತು, ಆದರೆ ಈಗಿನದು ಚಿಕ್ಕ ಗಾತ್ರದ್ದಾಗಿದೆ. ಆದರೂ ಸಂಪ್ರದಾಯಸ್ತ ಹೆಂಗಸರು ಇಂದಿಗೂ ಕೂಡ ಉದ್ದವಾದ ನತ್ತನ್ನೇ ಧರಿಸುತ್ತಾರೆ. ಬೇರೆ ಬೇರೆ ಲೋಹದ ಹಾಗೂ ಅಲ್ಯುಮಿನಿಯಂದ ಬಳೆಗಳನ್ನು ಮುಂಗೈಯಲ್ಲಿ ಹಳೆಯ ತಲೆಮಾರಿನ ಹೆಂಗಸರು ಧರಿಸುತ್ತಾರೆ. ಇಂದಿನ ಯುವ ಜನಾಂಗದ ಹೆಣ್ಣು ಮಕ್ಕಳು, ಹಿಂದೂಕರಣದ ಪ್ರಭಾವಕ್ಕೊಳಗಾಗಿ ಕಾಜಿನ, ಪ್ಲಾಸ್ಟಿಕ್ ಬಳೆಗಳನ್ನು ಧರಿಸುತ್ತಾರೆ. ಕೈ ಬೆರಳಿಗೆ ಅಲ್ಯುಮಿನಿಯಂ ಅಥವಾ ಬಂಗಾರದ ಉಂಗುರ ತೊಡುತ್ತಾರೆ. ಕಾಲಿನಲ್ಲಿ ಚೈನ್, ಸುತ್ತುಂಗರಗಳನ್ನು ಧರಿಸುತ್ತಾರೆ. ಹಸಿರು ಬಣ್ಣದ ಬಳೆ ಇವರಲ್ಲಿಯೂ ಶುಭ ಸಂಕೇತವಾಗಿದೆ.

ಕುಣಬಿ ಹೆಂಗಸರು ವಿವಾಹಿತ ಮತ್ತು ಅವಿವಾಹಿತ – ಇಬ್ಬರೂ ಮಂಗಳಸೂತ್ರ ಧರಿಸುತ್ತಾರೆ. ಈ ಸರವನ್ನು ಚಿಕ್ಕ ಕರಿಮಣಿಗಳಿಂದ ಮಾಡುತ್ತಾರೆ. ತಾಳಿಮಣಿಯೊಂದಿಗೆ ಹವಳ

ಮತ್ತು ಬಂಗಾರದ ಗುಂಡು ಸೇರಿಸುತ್ತಾರೆ. ಅವರ ಉಪ ಭಾಷೆಯಲ್ಲಿ ಇದನ್ನು 'ಪಿರುಕ' ಎನ್ನುತ್ತಾರೆ. ಯುವ ಜನಾಂಗದ ಹೆಣ್ಣು ಮಕ್ಕಳು ಪುರಾತನ ಕಾಲದ ಮಂಗಳಸೂತ್ರವನ್ನು ಬಿಟ್ಟು ಬಿಟ್ಟಿದ್ದಾರೆ, ಈಗ ಹಿಂದೂ ಪದ್ಧತಿಯ ಮಂಗಳಸೂತ್ರವನ್ನು ಸ್ವೀಕರಿಸಿದ್ದಾರೆ.

**ಪುರುಷರ ಉಡುಗೆ**

ಕುಣಬಿ ಗಂಡಸರು ಸೊಂಟ ವಸ್ತ್ರವನ್ನು ತೊಡುತ್ತಿದ್ದರು. ಇದು ಅವರ ಸೊಂಟ ಮತ್ತು ತೊಡೆಯನ್ನು ಆವರಿಸಿ, ಉಳಿದ ದೇಹವನ್ನು ಬೆತ್ತಲೆಯಾಗಿ ಬಿಡುತ್ತಿದ್ದರು. ಕುಣಬಿ ಗಂಡಸಿನ ಸಾಂಪ್ರದಾಯಿಕ ಉಡುಗೆ ಎಂದರೆ ಧೋತಿ, ಚಡ್ಡಿ ಆಗಿದ್ದು, ವಿವಾಹದ ಸಮಯದಲ್ಲಿ ಧೋತಿಯನ್ನು ಕಡ್ಡಾಯವಾಗಿ ಧರಿಸುವರು. ಇನ್ನುಳಿದ ಸಮಯದಲ್ಲಿ ಅರ್ಧ ಚಡ್ಡಿ ಮತ್ತು ಅಂಗಿಯನ್ನು ಉಪಯೋಗಿಸುವುದು ಸಾಮಾನ್ಯ.

ಆದರೆ ಅತೀ ವಯಸ್ಸಾದ ಯಜಮಾನರು ಲಂಗೋಟಿಯನ್ನು ಹಾಕಿಕೊಂಡು ಹೆಗಲ ಬಲಭಾಗದ ಮೇಲೆ ಟವಲನ್ನು ಹಾಕಿಕೊಂಡಿರುವುದು ಸಾಮಾನ್ಯ ದೃಶ್ಯವಾಗಿದೆ. ಇತ್ತೀಚೆಗೆ ಇವರ ಮೇಲೂ ಫ್ಯಾಶನ್ ಗಾಳಿ ಬೀಸುತ್ತಿದ್ದು ಯುವಕರು, ಯುವತಿಯರು ಪ್ಯಾಂಟು, ಶರ್ಟ್, ಟಿ-ಶರ್ಟ್, ಚುಡಿದಾರ, ಉದ್ದನೆಯ ಲಂಗ, ಸ್ಕರ್ಟ್‌ಗಳನ್ನು ಧರಿಸಲು ಪ್ರಾರಂಭಿಸಿದ್ದಾರೆ.

ಕುಣಬಿ ಸಂಪ್ರದಾಯದಂತೆ ಗಂಡಸರು ತಲೆಯ ಹಿಂಬದಿಗೆ ನೀಳವಾದ ಕೂದಲು ಬೆಳೆಸುತ್ತಿದ್ದರು. ಅವನು ಯಾವುದೇ ಉಪ ವಿಭಾಗಕ್ಕೆ ಸೇರಿರಲಿ, ಪ್ರತಿಯೊಬ್ಬ ಕುಣಬಿಯೂ ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಈ ನೀಳಕೇಶ ರಾಶಿ ಅವರ ಬುಡಕಟ್ಟಿನ ಸಂಕೇತವೆಂದು ತಿಳಿಯಲಾಗುತ್ತಿತ್ತು. ಈ ಕೇಶ ರಾಶಿಯನ್ನು ಕತ್ತರಿಸುವುದನ್ನು ಸಂಪೂರ್ಣವಾಗಿ ಪ್ರತಿಬಂಧಿಸಲಾಗಿತ್ತು. ಯಾರಾದರೂ ನಿಯಮ ಉಲ್ಲಂಘಿಸಿದರೆ, ಅವರು ಬುಡಕಟ್ಟಿನ ಪಂಚಾಯತಿಗೆ ದಂಡ ಕಟ್ಟಬೇಕಾಗುತ್ತಿತ್ತು. ಚರ್ಮದ ಚಪ್ಪಲಿಗಳನ್ನು ಧರಿಸುವುದು ನಿರ್ಬಂಧಿಸಲಾಗಿತ್ತು. ಸೋಪು ಮತ್ತಿತರ ಸುಗಂಧ ದ್ರವ್ಯಗಳ ಬಳಕೆ ನಿಷೇಧಿತವಾಗಿತ್ತು. ಮದುವೆಗಿಂತ ಮುಂಚೆ ಕನ್ನಡಿ ನೋಡುವಂತಿರಲಿಲ್ಲ, ಇಂದು ಕೆಲವು ಪ್ರದೇಶಗಳಲ್ಲಿ ವರನ ಉಡುಗೆಯಲ್ಲಿ ಗಮನಾರ್ಹವಾದಂತ ಬದಲಾವಣೆಗಳಾಗಿವೆ. ಇಂದು ಅವರು ಜಿಲ್ಲೆಯ ಬ್ರಾಹ್ಮಣೇತರರ ಮದುವೆ ಉಡುಗೆಯನ್ನು ಅಂಗೀಕರಿಸಿದ್ದಾರೆ.

ಮಕ್ಕಳು ಪಾರಂಪರಿಕ ಶೈಲಿಯನ್ನು ಬಿಟ್ಟು, ಆಧುನಿಕ ವೇಷ-ಭೂಷಣಗಳನ್ನು ತೊಟ್ಟುಕೊಳ್ಳುವ ಬಗ್ಗೆ ಮಾಹಿತಿದಾರರ ಧೋರಣೀಯ ಮೌಲ್ಯಾಂಕನ ಮಾಡಲಾಯಿತು. ದೊರೆತ ಮಾಹಿತಿಯಿಂದ ಸ್ಪಷ್ಟವಾಗಿ ಕಂಡು ಬರುವುದೇನೆಂದರೆ, ೧೮೬ (೬೨ ಪ್ರತಿಶತ) ಮಾಹಿತಿದಾರರು ತಮ್ಮ ಮಕ್ಕಳು ಪಾರಂಪರಿಕ ಉಡುಗೆ-ತೊಡುಗೆಗೆ ಬದಲಾಗಿ ಆಧುನಿಕ ವೇಷ-ಭೂಷಣಗಳನ್ನು

ತೊಡುವುದರ ಪರವಾಗಿ ಇದ್ದಾರೆ. ಉಳಿದ ೧೧೪ (೩೮ ಪ್ರತಿಶತ) ಇದನ್ನು ಒಪ್ಪುವದಿಲ್ಲ. ಇದರಿಂದ ಸುಸ್ಪಷ್ಟವಾಗಿ ಗೊತ್ತಾಗುವುದೇನೆಂದರೆ ಕುಣಬಿಗಳು ಆಧುನಿಕ ವೇಷ-ಭೂಷಣಗಳ ಬಗ್ಗೆ ಪ್ರಗತಿಪರ ಧೋರಣೆ ಹೊಂದಿದ್ದಾರೆ.

ಈ ಹಿನ್ನಲೆಯಲ್ಲಿ ಅವರ ಅನುಮೋದನೆ ಅಥವಾ ಅನುಮೋದಿಸದೇ ಇರುವುದಕ್ಕೆ ಕಾರಣವಾದ ಅಂಶಗಳನ್ನು ವಿವೇಚಿಸುವುದು ಮಹತ್ವಪೂರ್ಣವಾಗಿದೆ. ಅರ್ಧಕ್ಕಿಂತಲೂ ಹೆಚ್ಚು (೬೨ ಪ್ರತಿಶತ) ಮಾಹಿತಿದಾರರು ವ್ಯಕ್ತಿಪಡಿಸಿದ ಅಭಿಪ್ರಾಯದ ಪ್ರಕಾರ ಆಧುನಿಕ ಉಡುಗೆ ಮತ್ತು ಆಭರಣಗಳು ಬದಲಾಗುತ್ತಿರುವ ಸನ್ನಿವೇಶಗಳಿಗೆ ಹೊಂದಿಕೊಳ್ಳಲು ಸಹಕಾರಿಯಾಗಿವೆ. ಅಲ್ಲದೆ ಆಧುನಿಕ ಉಡುಗೆ ಅವರ ಸಾಮಾಜಿಕ ಅಂತಸ್ತನ್ನು ಎತ್ತರಿಸುವಲ್ಲಿ ಸಹಕಾರಿಯಾಗಿದೆ ಎಂದು ನಂಬುತ್ತಾರೆ. ಅವರಲ್ಲಿ ಸುಮಾರು ೩೮ ಪ್ರತಿಶತರಷ್ಟು ಜನರು ಆಧುನಿಕ ಉಡುಗೆ-ತೊಡುಗೆಗಳಿಗೆ ನಿರಾಕರಿಸಿದ್ದಾರೆ. ಈ ಅಂಶವನ್ನು ಹೆಚ್ಚು ಮಾಹಿತಿದಾರರು ಗಮನಿಸಿದಾಗ ಕುಣಬಿ ಸಮುದಾಯದಲ್ಲಿ ಆಧುನಿಕ ವೇಷ-ಭೂಷಣಗಳ ಬಗ್ಗೆ ಪ್ರಗತಿಪರ ಮನೋಭಾವ ಹೊಂದಿದ್ದಾರೆ.

**೩.೮ ಕೌಟುಂಬಿಕ ರಚನೆ**

ಯಾವುದೇ ಸಮಾಜವಿರಲಿ – ಅದಕ್ಕೆ ಕುಟುಂಬವೇ ಅದರ ಮೂಲ ಸಂಸ್ಥೆ. ಕುಟುಂಬವು ಬೇರೆ ಬೇರೆ ಸಂಸ್ಕೃತಿ ಮತ್ತು ಗುಂಪುಗಳಲ್ಲಿ ವಿಭಿನ್ನ ರೂಪ ಮತ್ತು ಕಾರ್ಯಗಳನ್ನು ವಿಭಿನ್ನವಾಗಿ ಹೊಂದಿದ್ದರೂ ಅದು 'ಮೂಲ' (Basic Group) ಗುಂಪಾಗಿರುತ್ತದೆ. ಆದಿವಾಸಿಗಳ ಸಾಮಾಜಿಕ ಸಂರಚನೆಯು ಅದರ ಕುಟುಂಬವನ್ನು ಅವಲಂಭಿಸಿರುತ್ತದೆ. ಅಂದರೆ ಕುಟುಂಬವು ಯಾವುದೇ ಆದಿವಾಸಿ ಸಾಮಾಜಿಕ ರಚನೆಗೆ ಅತಿಮುಖ್ಯ ಅಂಶವಾಗಿದೆ.

ವಿದ್ಯಾರ್ಥಿ ಮತ್ತು ರೈ ಇವರ ಪ್ರಕಾರ 'Clan and Family' ಇವು ದಕ್ಷಿಣ ಭಾರತದ ಆದಿವಾಸಿಗಳಲ್ಲಿರುವ ಅತಿ ಜನಪ್ರಿಯ ಸಾಮಾಜಿಕ ಘಟಕಗಳಾಗಿವೆ.

ವಿದ್ಯಾರ್ಥಿ ಮತ್ತು ರೈ ಅವರು ನಿರೀಕ್ಷಿಸಿರುವಂತೆ 'Monogomous Family with a Nuclear Structure is the Main Feature of the Indian Tribes' ಅಂದರೆ ಏಕ ಪತಿತ್ವವು ಭಾರತೀಯ ಆದಿವಾಸಿ ಕುಟುಂಬದ ಪ್ರಮುಖ ಲಕ್ಷಣವಾಗಿದ್ದು, ನ್ಯೂಕ್ಲಿಯರ್ ರಚನೆಯನ್ನು ಹೊಂದಿದೆ. ಆದರೂ ಬಹು ಸಂಖ್ಯಾತ ಆದಿವಾಸಿಗಳು ಯಾವ ಆಶಾ ಭಾವನೆಯನ್ನು ಹೊಂದಿದ್ದಾರೆಂದರೆ – ಅವರ ಆರ್ಥಿಕತೆಯು ಅವಿಭಕ್ತ ಕುಟುಂಬ ಅಥವಾ ವಿಸ್ತೃತ ಕುಟುಂಬಗಳನ್ನು ಹೊಂದಲು ಅನುಮತಿಸಿದೆ. ಅಲ್ಲದೆ ದಕ್ಷಿಣ ಭಾರತದಲ್ಲಿ ಮಾತೃ ಪ್ರಧಾನ ಮತ್ತು ಪಿತೃ ಪ್ರಧಾನ ರೂಪದ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿವೆ.

'ಕುಣಬಿ' ಆದಿವಾಸಿಗಳಲ್ಲಿ ಕುಟುಂಬವೇ ಸಾಮಾಜಿಕ ಸಂಘಟನೆಯ ಘಟಕವಾಗಿದೆ. ಆದ್ದರಿಂದ ಪ್ರತಿ ವ್ಯಕ್ತಿಯೂ ತನ್ನ ಕುಟುಂಬಕ್ಕೆ ಜವಾಬ್ದಾರನಾಗಿರುತ್ತಾನೆ. ವ್ಯಕ್ತಿಯ ಜನ್ಮದಿಂದ ಹಿಡಿದು ಮರಣದವರೆಗೆ ಪ್ರತಿ ಸಂಗತಿಯಲ್ಲೂ ಕುಟುಂಬದ ಜವಾಬ್ದಾರಿಯು ಮಹತ್ವದ ಪಾತ್ರವಹಿಸುತ್ತದೆ. ಕುಣಬಿ ಸಮುದಾಯದಲ್ಲಿ ಅವಿಭಕ್ತ ಕುಟುಂಬವು ಪ್ರಧಾನ ಪಾತ್ರವಹಿಸುತ್ತವೆ. ಆದಾಗ್ಯೂ ಇತ್ತೀಚೆಗೆ ಅಂದರೆ ವರ್ತಮಾನ ಸಮಾಜದಲ್ಲಿ ಅದು ಪರಮಾಣು ರೀತಿಯ ಬದಲಾವಣೆ – ಪರಿವರ್ತನೆಯನ್ನು ಹೊಂದುತ್ತದೆ.

ಪ್ರಾಚೀನ ಕಾಲದಲ್ಲಿ ಒಂದೇ ಕುಟುಂಬದಲ್ಲಿ ಈ ಸಮುದಾಯದವರು ೨೦ ರಿಂದ ೧೦೦ ಜನ ಸದಸ್ಯರು ಒಟ್ಟಿಗೆ ಕೂಡಿ ವಾಸಿಸುತ್ತಿದ್ದರು. ಇವು ಪಿತೃಪ್ರಧಾನ ಕುಟುಂಬಗಳಾಗಿದ್ದವು. ಕುಟುಂಬ ಬಂಧನ ಬಿಗಿಬಂದ ಇದ್ದುದರಿಂದ ಒಟ್ಟಾರೆ ಕುಟುಂಬದ ಆಸ್ತಿಯನ್ನು ವಿಭಜಿಸುವಂತಿರಲಿಲ್ಲ. ಹಣಕಾಸಿನ ಖರ್ಚುವೆಚ್ಚ, ಹಬ್ಬ ಹರಿದಿನಗಳ ಆಚರಣೆ, ಮದುವೆ–ಮುಂಜಿ ವ್ಯವಸ್ಥೆ ಮತ್ತು ಕುಟುಂಬದಲ್ಲಿ ಇತರ ಸಂಬಂಧಗಳಿದ್ದರೆ, ಅಲ್ಲಿ ಪುರುಷನೆ ಪ್ರಧಾನ ಪಾತ್ರ ವಹಿಸುತ್ತಿದ್ದ.

ಕುಣಬಿಗಳಲ್ಲಿ ಕೂಡು ಕುಟುಂಬಗಳು ಇತ್ತೀಚೆಗೆ ಕಡಿಮೆಯಾಗುತ್ತಿವೆ. ಆದಿವಾಸಿ ಸಮುದಾಯವೊಂದು ಎಲ್ಲಿಯವರೆಗೆ ಪಾರಂಪರಿಕ ಕಸುಬುಗಳಲ್ಲಿ ತೊಡಗಿಕೊಂಡಿರುತ್ತದೊ, ಎಲ್ಲಿಯವರೆಗೆ ಸಮುದಾಯದ ಒಪ್ಪಂದದ ಸಾಮಾಜಿಕ ಸಂಬಂಧಗಳನ್ನು ಸಾಂಪ್ರದಾಯಿಕ ಕುಲಮೂಲದ ವೃತ್ತಿಗಳು ನಿಯಂತ್ರಿಸುತ್ತವೆಯೇ ಅಲ್ಲಿಯವರೆಗೆ ಕುಟುಂಬಗಳು ಅವಿಭಕ್ತವಾಗಿರುತ್ತದೆ. ಕುಟುಂಬದ ಸದಸ್ಯರು ಹೊಸ ಉತ್ಪಾದನಾ ವ್ಯವಸ್ಥೆಯನ್ನು ಕಂಡುಕೊಂಡಾಕ್ಷಣ, ಆ ಉತ್ಪಾದನಾ ವ್ಯವಸ್ಥೆಯು ಕುಟುಂಬದ ಸ್ವರೂಪವನ್ನು ಮತ್ತು ಸಾಮಾಜಿಕ ಸಂಬಂಧಗಳನ್ನು ರೂಪಿಸುತ್ತ ಹೋಗುತ್ತದೆ. ಕುಣಬಿ ಸಮುದಾಯದ ಜನ ತಮ್ಮ ಪಾರಂಪರಿಕ ಕೃಷಿ ಚಟುವಟಿಕೆಗಳ ಜೊತೆಯಲ್ಲಿಯೇ ಆಧುನಿಕ ಉದ್ಯೋಗಗಳನ್ನು ಹೊಂದಲಾರಂಭಿಸಿದ್ದಾರೆ. ಇದರಿಂದಾಗಿ ಕುಣಬಿ ಕುಟುಂಬಗಳ ಸ್ವರೂಪವೂ ಬದಲಾಗುತ್ತಿದೆ. ಈಗ ಪಟ್ಟಣಗಳಿಂದ ದೂರ ಇರುವ ಮತ್ತು ಅರಣ್ಯಗಳ ಅಂಚಿನಲ್ಲಿರುವ ಮತ್ತು ಪಾರಂಪರಿಕ ಕೃಷಿ ಉತ್ಪಾದನೆಯಲ್ಲಿ ತೊಡಗಿರುವ ಕುಣಬಿ ಗ್ರಾಮಗಳಲ್ಲಿ ಹಲವು ಕಡೆ ಕೂಡು ಕುಟುಂಬಗಳಿವೆ.

ಆದರೆ ಸದ್ಯಕ್ಕೆ ಹತ್ತಿರವಿರುವ ಮತ್ತು ಪಟ್ಟಣಗಳೊಳಗೆ ಸೇರಿಕೊಂಡಿರುವ ಮತ್ತು ಆಧುನಿಕವಾದ ವಿವಿಧ ಉದ್ಯೋಗಗಳಲ್ಲಿ ತೊಡಗಿಕೊಂಡಿರುವ ಕುಣಬಿ ಗ್ರಾಮಗಳಲ್ಲಿ ಅಥವಾ ಊರುಗಳಲ್ಲಿ ವಿಭಕ್ತ ಕುಟುಂಬಗಳು ಕಂಡು ಬರುತ್ತಿವೆ. ಅಂತಹ ಮನೆಗಳಲ್ಲಿ ವಿಭಕ್ತ (Nuclear) ಕುಟುಂಬಗಳು ಕೆಲವು ಭಾಗ ಭೂಪ್ರದೇಶವನ್ನು (ಹೊಲ) ಪ್ರತ್ಯೇಕವಾಗಿ, ಕೃಷಿ

ಚಟುವಟಿಕೆಗಳಿಗಾಗಿ ಬಳಸುತ್ತಿದ್ದಾರೆ. ಆಹಾರವನ್ನು ಪ್ರತ್ಯೇಕವಾಗಿ ತಯಾರಿಸಿ, ಪ್ರತ್ಯೇಕವಾಗಿಯೇ ಆಹಾರ ಸೇವಿಸುತ್ತಾರೆ. ಆದರೆ ಅವರು ಉಳುವ ಭೂಮಿಯನ್ನು ಮಾತ್ರ ಅಧಿಕೃತವಾಗಿ ವಿಭಜನೆ ಮಾಡಿಲ್ಲ. ಸಹೋದರರರಲ್ಲಿ ಈ ಭೂಮಿಯನ್ನು ಮೌಖಿಕವಾಗಿ ವಿಭಜನೆ ಮಾಡಿ – ಅವರವರು ತಮ್ಮ ಜಮೀನನ್ನು ಪ್ರತ್ಯೇಕವಾಗಿ ಉಳುವೆ ಮಾಡಲಾಗುತ್ತದೆ. ಆದರೆ ಅನಕ್ಷರತೆ ಮತ್ತು ಅಜ್ಞಾನ ಹಿಂದುಳಿದಿರುವಿಕೆಯಿಂದ ಕುಟುಂಬ ಬಿಟ್ಟು ಹೊರಗೆ ಹೋಗಿ ಪ್ರತ್ಯೇಕ ಮನೆ ನಿರ್ಮಿಸಿಕೊಂಡು ಬದುಕಲಾಗುತ್ತಿಲ್ಲ. ಆದ್ದರಿಂದ ಅಂತಹ ಕುಟುಂಬಗಳಲ್ಲಿ ಸಹೋದರರು ಮದುವೆಯಾದ ಮೇಲೆ ಅಲ್ಲಿಯೆ ಪ್ರತ್ಯೇಕ ಮನೆ ಮಾಡಿಕೊಂಡು ವಾಸಿಸುತ್ತಾರೆ. ಮನೆ ಚಿಕ್ಕದಾಗಿದ್ದಲ್ಲಿ ಮಾತ್ರ ಕೆಲ ಸಹೋದರರು ಹೊರಗೆ ಮನೆ ಮಾಡುತ್ತಾರೆ. ಪೂರ್ವಜರ ಮನೆಯ ಸುತ್ತಮುತ್ತ ಈ ತರಹದ ನ್ಯೂಕ್ಲಿಯರ್ ಕುಟುಂಬಗಳು ಹುಟ್ಟಿಕೊಂಡಿವೆ.

ಈ ಎಲ್ಲ ಕುಟುಂಬಗಳು ಸಾಮಾನ್ಯವಾಗಿ ಪುರುಷ ಪ್ರಧಾನ ಕುಟುಂಬಗಳೇ ಆಗಿವೆ. ನನ್ನ ಅಧ್ಯಯನಕ್ಕಾಗಿ ನಡೆಸಿದ ೩೦೦ ವ್ಯಕ್ತಿ ಅಧ್ಯಯನ ಸಮೀಕ್ಷೆಯಲ್ಲಿ ೨೪೩ ಬಿಡಿ ಕುಟುಂಬ (ವಿಭಕ್ತ)ಗಳಿದ್ದರೆ ಕೇವಲ ೫೭ ಮಾತ್ರ ಅವಿಭಕ್ತ ಕೂಡು ಕುಟುಂಬಗಳು ಕಂಡುಬಂದವು. ಈಗಾಗಲೇ ಕುಣಬಿಗಳಲ್ಲಿ ಪ್ರತಿಶತ ೮೧ ರಷ್ಟು ಕುಟುಂಬಗಳು ವಿಭಕ್ತ ಕುಟುಂಬಗಳೇ ಆಗಿವೆ. ಈ ಎಲ್ಲಾ ಕುಟುಂಬಗಳಲ್ಲಿ ಪುರುಷನೆ ಮನೆಯ ಯಜಮಾನ. ಕುಟುಂಬದ ಮುಖ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವವನು ಪುರುಷನೆ. ನಾನು ಸಂದರ್ಶಿಸಿದ ಕುಟುಂಬಗಳನ್ನು, ಈ ಹಿಂದೆ ಕುಟುಂಬದ ಮುಖ್ಯ ತೀರ್ಮಾನಗಳನ್ನು ಯಾರು ತೆಗೆದುಕೊಳ್ಳುತ್ತಿದ್ದರು? ಎಂದು ಪ್ರಶ್ನಿಸಲಾಗಿತ್ತು. ಬಹುಪಾಲು ಸಂದರ್ಶಿತ ಕುಟುಂಬಗಳು, ಈ ಹಿಂದೆ ಮನೆಯ ಹಿರಿಯರು, ತಂದೆ–ತಾಯಿ ಎಲ್ಲರೂ ಸೇರಿ ಚರ್ಚಿಸುತ್ತಿದ್ದೆವು. ನಿರ್ಣಯಗಳನ್ನು ತೆಗೆದುಕೊಳ್ಳುವುದು ತೀರ್ಮಾನ ಅಂತಿಮವಾಗಿ ಮನೆಯ ಯಜಮಾನಿಕೆ ಹೊಂದಿರುವ ಪುರುಷನದೇ ಆಗಿರುತ್ತಿತ್ತು ಎಂದು ಉತ್ತರಿಸಿದರು.

ಕುಣಬಿ ಕುಟುಂಬಗಳಲ್ಲಿ ಕುಟುಂಬದ ಮುಖ್ಯಸ್ಥನೇ ಮನೆಯ ಸದಸ್ಯರಿಗೆ ಬೇಕಾದ ವಸ್ತು ಕೊಳ್ಳುತ್ತಾನೆ. ಸೊಸೆಗೆ ಸೀರೆ ತರುವುದೂ ಸೇರಿ. ತಂದೆ ಬದುಕಿರುವಾಗ ಮಗ ಹಿರೇತನ ಮಾಡುವಂತಿಲ್ಲ, ಆದರೆ ಮೊದಲೆ ತಂದೆಯ ಅನುಮತಿ ಪಡೆದು ಮಗ ಕೆಲವು ಕಾರ್ಯ ನಿರ್ವಹಿಸಬಹುದು. ಕೃಷಿಗೆ ಸಂಬಂಧಿಸಿದ ಕೆಲಸದಲ್ಲೂ ತಂದೆಯದೆ ಅಂತಿಮ ತೀರ್ಮಾನ. ಕುಟುಂಬದ ಮುಖ್ಯಸ್ಥನೆ ಪ್ರತಿವರ್ಷ ಪ್ರಥಮವಾಗಿ ಭೂಮಿಗೆ ಬೀಜ ಬಿತ್ತುವ ಕಾರ್ಯ ಮಾಡುತ್ತಾನೆ. ಈ ರೀತಿ ಮುಖ್ಯಸ್ಥನು ಮಾಡದಿದ್ದರೆ, ಇತರ ಸದಸ್ಯರು ಕೃಷಿ ಚಟುವಟಿಕೆ ಮಾಡುವಂತಿಲ್ಲ. ಕುಟುಂಬದಲ್ಲಿ ಜನನ, ಮರಣ, ಪೂಜೆ, ಪುನಸ್ಕಾರ ಮುಂತಾದ ಕಾರ್ಯಗಳಲ್ಲಿ

ಕುಟುಂಬದ ಮುಖ್ಯಸ್ಥನೆ ಉಚ್ಚ ಸ್ಥಾನಮಾನ ಹೊಂದಿರುತ್ತಾನೆ. ಒಂದು ವೇಳೆ ತನ್ನ ಅಸಮರ್ಥತೆಯಿಂದ ಅಥವಾ ನಿರುದ್ಯೋಗದಿಂದ ತನ್ನ ಜವಾಬ್ದಾರಿ ಸರಿಯಾಗಿ ನಿರ್ವಹಿಸದಿದ್ದಲ್ಲಿ, ಆ ಮನೆಯ ಸ್ತ್ರೀಯು ತನ್ನ ಕುಟುಂಬದ ಏಳಿಗೆಗಾಗಿ ಮತ್ತು ರಕ್ಷಣೆಗಾಗಿ ಜವಾಬ್ದಾರಿಯನ್ನು ನಿಭಾಯಿಸಬೇಕಾಗುತ್ತದೆ. ಹಾಗೆಯೇ ಒಂದು ವೇಳೆ ಪುರುಷ ಕೆಲಸದ ಮೇಲೆ ಬಹಳ ದಿನ ಹೊರಗೆ ಹೋಗಬೇಕಾಗಿ ಬಂದಲ್ಲಿ ಸ್ತ್ರೀಯೇ ಜವಾಬ್ದಾರಿ ಹೊರುತ್ತಾಳೆ.

ಆದರೆ ಇಂದು ಮನೆಯ ಯಜಮಾನ ಕುಟುಂಬದ ಮುಖ್ಯ ಸಂಗತಿಗಳ ಕುರಿತು ನಿರ್ಣಯ ತೆಗೆದುಕೊಳ್ಳುವಾಗ ಮನೆಯ ಹೆಣ್ಣು ಮಕ್ಕಳ ಅಭಿಪ್ರಾಯವನ್ನು ಪಡೆಯುತ್ತಾರಾ? ಎಂದು ಪ್ರಶ್ನಿಸಲಾಗಿತ್ತು. ಪ್ರತಿಶತ ೬೦ ರಷ್ಟು ಜನ ಹೆಣ್ಣು ಮಕ್ಕಳು ಮನೆಯ ಯಜಮಾನ ಅಭಿಪ್ರಾಯವನ್ನು ಕೇಳುವುದಿಲ್ಲ ಅಂದರೆ, ४೦ ಪ್ರತಿಶತ ರಷ್ಟು ಹೆಂಗಸರು ತಮ್ಮ ಮನೆಯ ಯಜಮಾನ ಮುಖ್ಯ ನಿರ್ಣಯಗಳನ್ನು ತೆಗೆದುಕೊಳ್ಳುವಾಗ ಹೆಣ್ಣು ಮಕ್ಕಳ ಅಭಿಪ್ರಾಯವನ್ನು ಕೇಳುತ್ತಾರೆ ಎಂದು ಉತ್ತರಿಸುತ್ತಾರೆ. ಆದರೆ ಹೀಗೆ ಹೆಣ್ಣು ಮಕ್ಕಳ ಅಭಿಪ್ರಾಯಗಳನ್ನು ಕೇಳುವ ಮನೆಯ ಯಜಮಾನರು ಅಂತಿಮವಾಗಿ ತಮಗೆ ತಿಳಿದ ನಿರ್ಣಯಗಳನ್ನೆ ತೆಗೆದುಕೊಳ್ಳುತ್ತಾರೆ ಎಂದು ಪ್ರತಿಶತ ४೦ ರಷ್ಟು ಮಹಿಳೆಯರು ಉತ್ತರಿಸಿದ್ದಾರೆ, ಆದರೆ ಪ್ರತಿಶತ ೬೦ ರಷ್ಟು ಕುಟುಂಬಗಳಲ್ಲಿ ಮಹಿಳೆಯ ಅಭಿಪ್ರಾಯಗಳನ್ನು ನಿರ್ಲಕ್ಷಿಸಲಾಗುತ್ತಿದೆ. ಹೀಗೆ ನಿರ್ಲಕ್ಷಿಸಲು ಕಾರಣಗಳೇನು ಎಂದು ಕೇಳಿದಾಗ ಆ ಹೆಣ್ಣು ಮಕ್ಕಳು ಹೇಳಿದ ಉತ್ತರಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

೧. ಪುರುಷರು, ತಾವು ಗಂಡಸರಾಗಿರುವ ಕಾರಣಕ್ಕೆ ಕುಟುಂಬ ತಮ್ಮ ಶಕ್ತಿ ಮತ್ತು ಜವಾಬ್ದಾರಿಗಳನ್ನು ಬಯಸುತ್ತದೆ ಎಂದು ಭಾವಿಸುತ್ತಾರೆ.
೨. ಹೆಣ್ಣು ಮಕ್ಕಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕುಟುಂಬವನ್ನು ಮುನ್ನಡೆಸಲಾರರು.
೩. ಹೆಣ್ಣು ಮಕ್ಕಳು ದುಡಿದರೂ ಸಹ ಕುಟುಂಬ ನಿರ್ವಹಿಸುವವರು ಗಂಡಸರೇ ಎಂಬುದು ಸಮುದಾಯದ ಅಭಿಪ್ರಾಯವಾಗಿದೆ.

ನಾನು ಸಂದರ್ಶಿಸಿದ ಪ್ರತಿಶತ ೬೦ ರಷ್ಟು ಕುಟುಂಬದ ಮಹಿಳೆಯರು ಈ ಮೇಲಿನಂತೆ ಕುಟುಂಬದ ಯಜಮಾನನ ನಿರ್ಣಯಾಧಿಕಾರದ ಕುರಿತು ಪ್ರತಿಕ್ರಿಯಿಸಿದರು. ಕೂಡು ಕುಟುಂಬಗಳಲ್ಲಿಯೂ ಸಹ ಮುಖ್ಯ ನಿರ್ಣಯಗಳನ್ನು ತೆಗೆದುಕೊಳ್ಳುವ ಕುಟುಂಬದ ಗಂಡಸರೇ ಹೊರತು ಹೆಂಗಸರಲ್ಲ. ಪ್ರತಿಶತ ೧೯ ರಷ್ಟು ಕೂಡು ಕುಟುಂಬಗಳ ಹೆಂಗಸರು ಸಹ ವಿಭಕ್ತ ಕುಟುಂಬದ ಹೆಂಗಸರ ಅಭಿಪ್ರಾಯಗಳನ್ನೇ ಪುನರಾವರ್ತಿಸಿದ್ದಾರೆ. ಅಕಸ್ಮಾತ್ ಹೆಂಗಸರು ಮನೆಯ ಯಜಮಾನ ತೆಗೆದುಕೊಳ್ಳುವ ತೀರ್ಮಾನಗಳನ್ನು ಅಪೇಕ್ಷಿಸಿದಲ್ಲಿ ಯಜಮಾನ ಆ

ಅಪೇಕ್ಷೆಯನ್ನು ಕ್ಷುದ್ರವಾಗಿ ಕಾಣುತ್ತಾರೆ, ಅಲ್ಲದೆ ತನ್ನ ತೀರ್ಮಾನಗಳನ್ನು ಕುಟುಂಬದ ಸದಸ್ಯರು ತಮ್ಮ ಜವಾಬ್ದಾರಿಗಳನ್ನು ನಿರ್ವಹಿಸುವ ಮೂಲಕ ಜಾರಿಗೆ ತರುವ ಅನಿವಾರ್ಯತೆಯನ್ನು ಸೃಷ್ಟಿಸುತ್ತಾನೆ. ಈ ಕಾರಣದಿಂದ ಕುಟುಂಬದ ಮುಖ್ಯ ನಿರ್ಣಯಗಳನ್ನು ತೆಗೆದುಕೊಳ್ಳುವಾಗ ಯಜಮಾನ ಮನೆಯ ಹೆಂಗಸರ ಅಭಿಪ್ರಾಯ ಕೇಳಬೇಕೆಂಬುದು ಮಹಿಳೆಯರ ಅಪೇಕ್ಷೆಯಾದರೂ ಸಹ ಪುರುಷರ ಅಧಿಕಾರದ ಕಾರಣಕ್ಕಾಗಿ ಔಪಚಾರಿಕ ಚರ್ಚೆಗಳು ಉಪಯುಕ್ತವಲ್ಲ ಎಂದು ಸಂದರ್ಶಿತ ಮಹಿಳೆಯರು ಅಭಿಪ್ರಾಯಪಟ್ಟಿದ್ದಾರೆ.

**೩.೯ ವಯಸ್ಸು-ಲಿಂಗ ಆಧಾರಿತ ಕಾರ್ಯ ವಿಭಜನೆ**

ಪಾರಂಪರಿಕವಾಗಿ ಕೃಷಿಕರಾದ ಕುಣಬಿಗಳು ಬಹುಪಾಲು ಕೃಷಿ ಕಾರ್ಮಿಕರಾಗಿ ಬದುಕುತ್ತಿದ್ದಾರೆ. ಬೆರಳೆಣಿಕೆಯ ಜನ ಮಾತ್ರ ಅತಿ ಚಿಕ್ಕ ಹಿಡುವಳಿದಾರರಾಗಿ ಕಾಣುತ್ತಾರೆ. ಬಹುಸಂಖ್ಯಾತ ಕುಣಬಿಗಳು ಭೂ ರಹಿತರು. ಹೆಣ್ಣು ಗಂಡುಗಳೆಲ್ಲ ತಮ್ಮ ದಣಿಗಳ ಗದ್ದೆ ಮತ್ತು ತೋಟಗಳಲ್ಲಿ ಕೃಷಿ ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ಪುರುಷರಿಗೆ ಸಾಮಾನ್ಯವಾಗಿ ಮನೆಯ ಹೊರಗಿನ ಕೆಲಸ/ಚಟುವಟಿಕೆಗಳನ್ನು ವಹಿಸಿಕೊಡಲಾಗುತ್ತಿದೆ. ಪುರುಷರು, ಕೃಷಿ ಕೆಲಸ, ಬೇಟೆಯಾಡುವುದು ಇವುಗಳನ್ನು ಮಾಡುತ್ತಾರೆ. ಕೃಷಿ ಭೂಮಿಯಲ್ಲಿ ಕೂಲಿ ಕೆಲಸವನ್ನು / ಕಾರ್ಮಿಕರಾಗಿ ಮಾಡುತ್ತಾರೆ.

ಇಲ್ಲಿ ಗಂಡಸರಿಗಿಂತ ಹೆಣ್ಣಿನ ದುಡಿಮೆಯ ಸಮಯವೆ ಹೆಚ್ಚು. ಬೆಳಗಿನ ಒಂದ್ಹೊತ್ತಿನ ಜಾವದಿಂದ ಹಿಡಿದು ಮಲಗುವ ಮಧ್ಯರಾತ್ರಿಯವರೆಗೆ ಈ ಸಮುದಾಯದ ಮಹಿಳೆ ನಿರಂತರವಾಗಿ ದುಡಿಯುತ್ತಾಳೆ. ಬೆಳಗಿನ ಹೊತ್ತು ಮನೆಗೆಲಸ, ಅದು ದೈನಂದಿನ ಗೃಹಕೃತ್ಯದ ಭಾಗ. ಇದರ ನಂತರ ಕುಟುಂಬದ ನಿರ್ವಹಣೆಗಾಗಿ ಮಾಡುವ ಕೂಲಿ ಕೆಲಸ. ಅದು ಕೂಲಿ ಸಂಪಾದನೆಗಾಗಿ ಅಥವಾ ವಸ್ತು ರೂಪದ ಸಂಬಳದ ಕಾರಣಕ್ಕಾಗಿ ಮಾಡುವ ದಿನಗೂಲಿ, ಆನಂತರ ಮತ್ತೆ ಸಂಜೆಯ ವೇಳೆ ಗೃಹಕೃತ್ಯದ ದಿನವಿಡಿ ಕೆಲಸಕಾರ್ಯಗಳು. ದೈಹಿಕವಾಗಿ ಮತ್ತು ಮಾನಸಿಕವಾಗಿ ಮಹಿಳೆ ಪುರುಷರಿಗಿಂತ ಹೆಚ್ಚಾಗಿ ದಿನನಿತ್ಯ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ದುಡಿತದ ಇವಳ ಎಲ್ಲಾ ಪ್ರತಿಫಲವು ಕುಟುಂಬ ನಿರ್ವಹಣೆಗೆ ಮತ್ತು ಮನೆಯ ಯಜಮಾನನ ಹೆಚ್ಚುವರಿ ಖರ್ಚುಗಳಿಗೆ ವ್ಯಯವಾಗುತ್ತದೆ. ಇಷ್ಟಿದ್ದರೂ ಸಹ ಕುಣಬಿ ಕುಟುಂಬಗಳಲ್ಲಿ ಹೆಣ್ಣಿಗೆ ಯಾವ ಬಗೆಯ ನಿರ್ಣಯಾಧಿಕಾರಗಳಿಲ್ಲ. ಆರ್ಥಿಕ ಸಬಲೀಕರಣವು ಮಹಿಳೆಗೆ ಸಾಮಾಜಿಕ ಮತ್ತು ರಾಜಕೀಯ ಅಧಿಕಾರಗಳನ್ನು ನೀಡುತ್ತದೆ ಎಂಬ ಸಾಂಪ್ರದಾಯಿಕ ಸಮೀಕರಣವು ಇಲ್ಲಿ ತಲೆಕೆಳಗಾಗುತ್ತದೆ.

ಬೆಳಗಿನ ಜಾವ ಹೊತ್ತು ಹುಟ್ಟುವ ಮುನ್ನ ಪ್ರಾರಂಭವಾಗುವ ಹೆಣ್ಣಿನ ದುಡಿಮೆ ರಾತ್ರಿ ಮಲಗುವ ತನಕ ನಿರಂತರವಾಗಿರುತ್ತದೆ, ಆದರೆ ಗಂಡಸರ ದುಡಿಮೆ ಇಷ್ಟು ಸುದೀರ್ಘವಾಗಿರುವುದಿಲ್ಲ. ದಣಿದರೆ ಸಂಜೆಯ ವೇಳೆ ಗೆಳೆಯರ ಜೊತೆ ಆಯಾಸದ ಪರಿಹಾರಕ್ಕೆ ಅನೇಕ ಮಾರ್ಗಗಳನ್ನು ಕಂಡುಕೊಳ್ಳುವ ಅವಕಾಶ ಪುರುಷರಿಗಿದೆ. ಆದರೆ ಮನೆಗೆ ಬಂದ ತಕ್ಷಣ ಅಡುಗೆ, ಮಕ್ಕಳ ಪಾಲನೆ, ದನ ಕರು ಸಾಕಾಣಿಗೆ, ಭತ್ತದ ಸುಗ್ಗಿಯಲ್ಲಿ ರಾಶಿ ಮಾಡುವುದು, ಕಟ್ಟಿಗೆ ತರುವುದು, ತರಕಾರಿ ಬೆಳೆಯುವುದು, ಚಾಪೆ ತಯಾರಿಕೆ, ಕೆಲವು ಮಹಿಳೆಯರು ಪುರುಷರಿಗೆ ಕೃಷಿ ಕೆಲಸಗಳಲ್ಲಿ ಸಹಾಯಕರಾಗುತ್ತಾರೆ. ಮನೆಯಲ್ಲಿ ವಯಸ್ಸಾದ ಹಿರಿಯರ ಪೋಷಣೆಗಳೆಲ್ಲ ಇತ್ಯಾದಿ ಮಹಿಳೆಯರ ಹೆಗಲೇರುತ್ತವೆ. ಇದು ಪುರುಷ ಮತ್ತು ಮಹಿಳೆಯರ ನಡುವೆ ಅಸಮಾನವಾಗಿ ಹಂಚಿಕೆಯಾದ ಶ್ರಮ ವಿಭಜನೆ. ಜೊತೆಗೆ ಮಹಿಳೆ ಪುರುಷನಿಗಿಂತ ದೈಹಿಕವಾಗಿ ಸಬಲಳು ಎಂದು ಸಾಬೀತಾದಂತಾಗುತ್ತದೆ. ಗಂಡ ಬೇಕೆಂದಾಗ ಮಕ್ಕಳಿಗೆ ಜನ್ಮ ನೀಡುವದು ಮತ್ತು ಅವನ ಸಂತಾನದ ಮುಂದುವರೆಕೆಗೆ ಕಾರಣವಾಗುವಳು. ಯಾವ ಬಗೆಯ ಅಧಿಕಾರವೂ ಇಲ್ಲದಂತೆ ಬದುಕುವುದು ಕುಣಬಿ ಮಹಿಳೆಯರ ಸ್ಥಿತಿಗತಿಯಾಗಿದೆ. ದೈಹಿಕವಾಗಿ, ಕೌಟುಂಬಿಕವಾಗಿ ಮತ್ತು ಆರ್ಥಿಕವಾಗಿ ಮಹಿಳೆ ಗಂಡಸಿಗೂ ಹೆಚ್ಚು ಸಬಲಳಾಗಿದ್ದಾಳೆ ಎಂಬುದು ಮೇಲ್ನೋಟಕ್ಕೆ ಗೊತ್ತಾಗುತ್ತದೆ, ಆದರೆ ಕುಟುಂಬದ ಒಳಗೆ ಮಹಿಳೆ ಲಿಂಗಸಂಬಂಧಿ ಅಸಮಾನತೆಯನ್ನು ತೀವ್ರವಾಗಿ ಅನುಭವಿಸುತ್ತಿದ್ದಾಳೆ. ಶಿಕ್ಷಣ, ಆಸ್ತಿಯಲ್ಲಿನ ಪಾಲಿನ ಅಧಿಕಾರಕ್ಕೆ ಸಂಬಂಧಿಸಿದಂತೆ ಮಹಿಳೆ ಯಾವತ್ತೂ ಅಸಮಾನತೆಯನ್ನು ಅನುಭವಿಸುತ್ತ ಬಂದಿದ್ದಾಳೆ.

ಕುಣಬಿಗಳ ಕುಟುಂಬದಲ್ಲಿ ಹೆಚ್ಚಿನ ದುಡಿಮೆಯ ಪಾಲು ಮಹಿಳೆಯದೆ ಆಗಿದ್ದರೂ ಸಹ ಕುಟುಂಬದ ಮೇಲಿನ ಅಧಿಕಾರ ಮತ್ತು ಕುಟುಂಬವನ್ನು ಸಾಮುದಾಯಿಕವಾಗಿ ಪ್ರತಿನಿಧಿಸುವ ಅಧಿಕಾರ ಇರುವುದು ಗಂಡಿಗೆ. ಅವಳಿಗೆ ನಿತ್ಯದ ಬದುಕಿನಲ್ಲಿ ಯಾವ ಬಗೆಯ ಅಧಿಕಾರವಿಲ್ಲ, ಏಕೆಂದರೆ ಅವಳು ಹೆಣ್ಣು. ಇಷ್ಟಾದರೂ ಸಮಾಜ ಗಂಡು ಮಕ್ಕಳನ್ನು ಬಯಸುತ್ತದೆ. ಎಲ್ಲ ತಂದೆ-ತಾಯಿಗಳು ಗಂಡು ಮಗುವನ್ನು ಬಯಸುತ್ತಾರೆ. 'ಒಂದು ಕಾಲದಲ್ಲಿ ಇದು ಕೇವಲ ಜನರ ಅಭಿಪ್ರಾಯವಾಗಿತ್ತು, ಆದರೆ ಇಂದು ಭ್ರೂಣದ ಹಂತದಲ್ಲಿ ಲಿಂಗವನ್ನು ಪತ್ತೆ ಮಾಡುವ ತಂತ್ರಜ್ಞಾನ ಲಭ್ಯವಿರುವುದರಿಂದ ಹೆಣ್ಣು ಮಗುವಿಗೆ ಪ್ರತಿಯಾಗಿ ಗಂಡು ಮಗುವನ್ನು ಪಡೆಯಬೇಕೆಂಬ ಅಭಿಲಾಷೆ ಅಕ್ಷರಶಃ ವಾಸ್ತವವಾಗಿ ಪರಿಣಮಿಸಿಬಿಟ್ಟಿದೆ.

ಇದರ ಪರಿಣಾಮವಾಗಿ ಆರು ವರ್ಷದೊಳಗಿನ ವಯೋಮಾನದಲ್ಲಿ ಲಿಂಗ ಪರಿಣಾಮವು ೧೯೯೧ ರಲ್ಲಿ ೯೪೫ ಇದ್ದುದು ೨೦೦೧ ರಲ್ಲಿ ೯೨೭ ಕ್ಕೆ ಕುಸಿದಿದೆ. ಅಂದರೆ ಆರು ವರ್ಷದೊಳಗಿನ ವಯೋಮಾನದಲ್ಲಿ ಪ್ರತಿ ೧೦೦೦ ಗಂಡು ಮಕ್ಕಳಿಗೆ ಇದಿರಾಗಿ ೧೯೯೧

ರಲ್ಲಿ ೯೪೫ ಹೆಣ್ಣು ಮಕ್ಕಳು ಇರುತ್ತಿದ್ದರು. ಆದರೆ ೨೦೦೧ ರಲ್ಲಿ ಇದರ ಪ್ರಮಾಣ ೯೨೭ ಆಗಿದೆ. ಇಂಥ ಅಸಮಾನತೆ, ತಾರತಮ್ಯಗಳು ತುಂಬಿರುವ ಜಗತ್ತಿನೊಳಗೆ ಹೆಣ್ಣು ಮಗು ಜನ್ಮ ತಳೆಯಬೇಕಿದೆ. ಕುಣಬಿಗಳಲ್ಲಿ ನಾಲ್ಕು ವರ್ಷದ ವಯೋಮಾನದ ಮಕ್ಕಳಲ್ಲಿ ಲಿಂಗ ಪರಿಣಾಮವು ಅಸಮಾನವಾಗಿದೆ.

**ಕೋಷ್ಟಕ ೩.೧೧**
**ಕುಣಬಿಯರ ಲಿಂಗವಾರು, ವಯೋ ಗುಂಪುವಾರು ಪ್ರಮಾಣ**

| ಕ್ರಸಂ. | ವಯಸ್ಸು | ಗಂಡು | ಪ್ರತಿಶತ | ಹೆಣ್ಣು | ಪ್ರತಿಶತ |
|---|---|---|---|---|---|
| ೧ | ೦ ರಿಂದ ೫ | ೨೯೯ | ೯.೭ | ೨೩೪ | ೮.೪ |
| ೨ | ೬ ರಿಂದ ೧೭ | ೭೯೩ | ೨೫.೭ | ೬೯೧ | ೨೪.೭ |
| ೩ | ೧೮ ರಿಂದ ೪೦ | ೧೨೭೪ | ೪೧.೨ | ೧೨೫೧ | ೪೪.೭ |
| ೪ | ೪೧ ರಿಂದ ೬೦ | ೫೨೯ | ೧೭.೦ | ೪೬೨ | ೧೬.೬ |
| ೫ | ೬೧ ಮೇಲ್ಪಟ್ಟವರು | ೧೯೯ | ೬.೪ | ೧೫೮ | ೫.೬ |
| | ಒಟ್ಟಾರೆ | ೩೦೯೪ | ೧೦೦ | ೨೭೯೬ | ೧೦೦ |

ಕೋಷ್ಟಕ ೩.೧೧ ರಲ್ಲಿ ನಾನು ಈ ಅಧ್ಯಯನದ ಸಲುವಾಗಿ ಒಂದು ಸಾವಿರ ಕುಟುಂಬಗಳ (Household Survey) ಮಾಡಿದ್ದೇನೆ, ಈ ಸರ್ವೆಯಿಂದ ಬಂದ ಅಂಕಿಅಂಶಗಳಿಂದ ನಾನು ಪಡೆದ ಕುಣಬಿ ಸಮುದಾಯದ ಲಿಂಗ ಪರಿಮಾಣವನ್ನು ಈ ಮೇಲೆ ನೀಡಿದ್ದೇನೆ. ಒಂದು ಸಾವಿರ ಕುಟುಂಬದ ಒಟ್ಟು ಜನಸಂಖ್ಯೆ ೫೮೯೦, ಅದರಲ್ಲಿ ಪುರುಷರ ಸಂಖ್ಯೆ ೩೦೯೪ ಇದ್ದರೆ ಮಹಿಳೆಯರ ಸಂಖ್ಯೆ ೨೭೯೬ ರಷ್ಟಿದೆ.

೦ ರಿಂದ ೫ ವರ್ಷ ವಯೋಮಾನದ ಮತ್ತು ೬ ರಿಂದ ೧೭ ವರ್ಷದ ವಯೋಮಾನದವರ ಲಿಂಗ ಪ್ರಮಾಣದಲ್ಲಿ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಅಂದರೆ ಕುಣಬಿಗಳಲ್ಲಿ ಗಂಡು ಶಿಶುಗಳ ಪ್ರಮಾಣ ಹಾಗೂ ಹೆಣ್ಣು ಶಿಶುಗಳ ಪ್ರಮಾಣದಲ್ಲಿ ವ್ಯತ್ಯಾಸವು ಅಧಿಕವಾಗಿರುವುದಿಲ್ಲದಿರುವದು ಕಂಡುಬರುತ್ತದೆ. ಅಂದರೆ ಕುಣಬಿಯರ ಒಟ್ಟಾರೆ ಜನಸಂಖ್ಯೆಯಲ್ಲಿ ಮಹಿಳೆಯರ ಸಂಖ್ಯೆ ಕಡಿಮೆ ಇರುವುದು ಮೇಲ್ನೋಟಕ್ಕೆ ಗೊತ್ತಾಗುತ್ತದೆ. ಇದು ಕರ್ನಾಟಕದ ಜನಸಂಖ್ಯೆಯ ಒಟ್ಟಾರೆಯ ಲಿಂಗ ಪರಿಮಾಣವನ್ನು ಹೋಲುತ್ತದೆ. '೧೯೫೧ ರಲ್ಲಿ ಕರ್ನಾಟಕದ ಒಟ್ಟು ಜನಸಂಖ್ಯೆ ೧೯೪.೦೧ ಲಕ್ಷ, ಇದರಲ್ಲಿ ಪುರುಷರ ಸಂಖ್ಯೆ ೯೮.೬೬ ಲಕ್ಷಗಳಿದ್ದರೆ. ಸ್ತ್ರೀಯರ ಸಂಖ್ಯೆ ೯೫.೩೫ ಲಕ್ಷ. ೧೯೫೧ ರಲ್ಲಿ ಕರ್ನಾಟಕದಲ್ಲಿ ಪ್ರತಿ ಸಾವಿರ ಪುರುಷರಿಗೆ ಪ್ರತಿಯಾಗಿ ೯೬೬ ಸ್ತ್ರೀಯರಿದ್ದರು, ಆದರೆ ೧೯೯೧ ರಲ್ಲಿ ರಾಜ್ಯದ ಜನಸಂಖ್ಯೆ ೪೪.೨೨ ಲಕ್ಷ, ಇದರಲ್ಲಿ ಸ್ತ್ರೀಯರ ಸಂಖ್ಯೆ ೨೨೫.೨೫ ಲಕ್ಷ ಮತ್ತು ಪುರುಷರ ಸಂಖ್ಯೆ

೨೯.೫೨ ಲಕ್ಷ. ಇದರ ಪ್ರಕಾರ ೧೯೯೧ ರಲ್ಲಿ ಕರ್ನಾಟಕದಲ್ಲಿ ಲಿಂಗ ಪರಿಮಾಣ ೯೬೦. ಒಟ್ಟಾರೆ ೧೯೫೧ ರಿಂದ ೧೯೯೧ ರ ಕಾಲಾವಧಿಯಲ್ಲಿ ಕರ್ನಾಟಕದಲ್ಲಿ ಲಿಂಗ ಪ್ರಮಾಣದಲ್ಲಿ ಕಡಿತ ಉಂಟಾಗಿದೆ. ಲಿಂಗ ಪ್ರಮಾಣದಲ್ಲಿ ೯೬೬ ರಿಂದ ೯೬೦ ಕ್ಕೆ ಇಳಿದಿದೆ. ೧೯೫೧ ರಲ್ಲಿ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಸ್ತ್ರೀಯರ ಪ್ರಮಾಣ ಶೇಕಡ ೪೯.೧೪ ರಷ್ಟಿದ್ದುದು. ೧೯೯೧ ರಲ್ಲಿ ಶೇಕಡ ೪೭.೯೭ ಕ್ಕೆ ಇಳಿದಿದೆ. ಇದರ ಅರ್ಥವೆಂದರೆ ಜನಸಂಖ್ಯೆಯಲ್ಲಿ ಸ್ತ್ರೀಯರ ಪ್ರಮಾಣವು ಸಾಪೇಕ್ಷವಾಗಿ ಕಡಿಮೆಯಾಗುತ್ತ ನಡೆದಿದೆ. ಈ ಬಗೆಯ ಬೆಳವಣಿಗೆ ರಾಷ್ಟ್ರಮಟ್ಟದಲ್ಲಿ ಕಂಡುಬಂದಿದೆ. ಅಖಿಲ ಭಾರತ ಮಟ್ಟದಲ್ಲಿ ೧೯೦೧ ರಿಂದಲೂ ಲಿಂಗ ಪ್ರಮಾಣವು ಕಡಿಮೆಯಾಗುತ್ತಾ ಬಂದಿದೆ. ೧೯೦೧ ರಲ್ಲಿ ಪ್ರತಿ ಸಾವಿರ ಪುರುಷರಿಗೆ ೯೫೦ ಸ್ತ್ರೀಯರಿದ್ದರೆ, ೧೯೯೧ ರಲ್ಲಿ ಅವರ ಸಂಖ್ಯೆ ೯೨೯ ಕ್ಕೆ ಇಳದಿದೆ'.[೨] ಮಹಿಳೆಯರ ಜನಸಂಖ್ಯೆ ಗಣನೀಯವಾಗಿ ಕಡಿಮೆಯಾಗಿರುವುದನ್ನು ಅಮೃತ ಸೇನ ಅವರು 'ಕಳೆದು ಹೋದ ಸ್ತ್ರೀಯರು' ಎಂದು ಪರಿಕಲ್ಪಿಸಿದ್ದಾರೆ. ಕರ್ನಾಟಕದಲ್ಲಿ ಕಳೆದ ೬೦ ವರ್ಷದ ಅವಧಿಯಲ್ಲಿ ಲಿಂಗ ಪ್ರಮಾಣದ ಗಣನೀಯ ಕುಸಿತವು ನಮ್ಮ ಸಮಾಜದಲ್ಲಿನ ಮಹಿಳೆಯರ ಕುರಿತು ಇರುವ ಕೀಳರಿಮೆ ಮತ್ತು ಅಜ್ಞಾನವನ್ನು ತೋರಿಸುತ್ತದೆ. ಮನುಷ್ಯನ ಬದುಕಿನ ಸರ್ವಾಂಗೀಣ ಶ್ರೇಯಸ್ಸಿಗೆ ಮತ್ತು ಮಾನವ ಸಂತತಿಯ ಮುಂದುವರಿಕೆಗೆ ಕಾರಣವಾಗುವ ಮಹಿಳೆಯ ಅಸ್ತಿತ್ವವು ದಶಕಗಳಿಂದ ದಶಕಗಳಿಗೆ ಕಡಿಮೆಯಾಗುತ್ತಾ ಹೋಗುತ್ತಿರುವುದು ಆರೋಗ್ಯಕರ ಸಮಾಜದ ಲಕ್ಷಣವಲ್ಲ.

ಇಲ್ಲಿ ಕುಣಬಿ ಮಹಿಳೆಯ ವರ್ತಮಾನದ ಸಾಮಾಜಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಕುಣಬಿ ಮಹಿಳೆ ಕುಟುಂಬದ ಪ್ರಾತಿನಿಧ್ಯ, ಸಾಮಾಜಿಕ ಅಧಿಕಾರ ಮತ್ತು ಸಾಮಾಜಿಕ ಸ್ಥಾನಮಾನಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಈ ಭಾಗದ ಬರಹಕ್ಕೆ ಮುಖ್ಯವಾಗಿ ನನ್ನ Case Study ಯ ಹಲವು ಸಂದರ್ಶನಗಳನ್ನು ಕ್ರೋಢೀಕರಿಸಿ ಬಳಸಿಕೊಂಡಿದ್ದೇನೆ. ಜೊತೆಗೆ ನಾನು ಮಾಡಿದ ನಾಲ್ಕು ತಾಲೂಕುಗಳ ೪೨ ಹಳ್ಳಿಗಳ ಕುಣಬಿ ಸಮುದಾಯದ Household Data ವನ್ನು ಬಳಸಿಕೊಳ್ಳಲಾಗಿದೆ. ಸಾಮಾಜಿಕವಾಗಿ ಕುಣಬಿ ಮಹಿಳೆಗೆ ಇರುವ ಸ್ಥಾನಮಾನಗಳ ವರ್ತಮಾನದ ಸ್ವರೂಪವನ್ನು ಈ ಎಲ್ಲ ಅಂಕಿಅಂಶಗಳ ಮೂಲಕ ವಿವರಿಸಲು ಪ್ರಯತ್ನಿಸಲಾಗಿದೆ. ಕುಣಬಿ ಸಮುದಾಯದ ಒಳಗೆ ಮಹಿಳೆಯ ಸ್ಥಾನಮಾನಗಳೇನು? ಕುಣಬಿಯಂತಹ ಆದಿವಾಸಿ ಸಮುದಾಯದಲ್ಲಿ ಪುರುಷನಂತೆ ಮಹಿಳೆಯೂ ದುಡಿಯುತ್ತಾಳೆ. ದುಡಿಮೆಗೆ ಅನ್ವಯವಾಗುವ ದೈಹಿಕ ಶ್ರಮ ಗಂಡಸಿಗಿಂತ ಮಹಿಳೆಯದೇ ಅಧಿಕವಾಗಿದ್ದರೂ ಸಹ ಕುಣಬಿ ಕುಟುಂಬಗಳಲ್ಲಿ ಮಹಿಳೆಗೆ ಯಾವ ಬಗೆಯ

ಹಕ್ಕುಗಳಾಗಲಿ ಅಥವಾ ಅಧಿಕಾರಗಳಾಗಲಿ ಇರುವುದಿಲ್ಲ. ಈ ಬಗೆಯ ಲಿಂಗಬೇಧ ಆದಿವಾಸಿ ಮತ್ತು ದುಡಿಯುವ ವರ್ಗಗಳಲ್ಲೂ ಇದೆ.

ಇಲ್ಲಿಯವರೆಗೆ ನಡೆದ ಅಧ್ಯಯನಗಳು ಆದಿವಾಸಿ ಮತ್ತು ಕೆಳ ಜಾತಿಗಳಲ್ಲಿ ಸಂಕೇತದ ಮಟ್ಟದಲ್ಲಾದರೂ ಮಹಿಳೆಗೆ ಸಾಮಾಜಿಕ ಅಧಿಕಾರಗಳು ಉಳಿದುಕೊಂಡಿವೆ ಎಂದು ಭಾವಿಸಿವೆ. ಆದರೆ ಈ ಸಮುದಾಯಗಳ ಚರಿತ್ರೆಯಲ್ಲಿ ಮಹಿಳೆಯ ಅನೇಕ ಬಂಡಾಯದ ಆಶಯಗಳು ವ್ಯಕ್ತವಾಗಿದ್ದರೂ ಸಹ ವರ್ತಮಾನದಲ್ಲಿ ಈ ಸಮುದಾಯಗಳ ಮಹಿಳೆಯ ಮುಖ್ಯ ವಾಹಿನಿಯು ಸಮಾಜಕ್ಕಿಂತ ಭಿನ್ನವಾಗೇನೂ ಇಲ್ಲ. ಕುಣಬಿಗಳಂತಹ ಆದಿವಾಸಿಗಳಲ್ಲಿ ಮಹಿಳೆ ಕುಟುಂಬದ ಮುಖ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಕನಿಷ್ಟ ಪರಿಗಣನೆಗೂ ಅರ್ಹವೆಂದು ಭಾವಿಸಲ್ಪಟ್ಟಿಲ್ಲ. ಅಲ್ಲದೆ ಸ್ತ್ರೀ ದಮನದ ಅನೇಕ ಸಾಂಸ್ಕೃತಿಕ ಆಚರಣೆಗಳು ನಿಷೇಧದ ರೂಪದಲ್ಲಿ ಇಂದಿಗೂ ಈ ಸಮುದಾಯದಲ್ಲಿ ಜೀವಂತವಾಗಿರುವದು ಅತ್ಯಂತ ಆತಂಕದ ಸಂಗತಿಯಾಗಿದೆ.

**೩.೧೦ ಮದುವೆ**

'ಮಾನವ ಇತರ ಪ್ರಾಣಿಗಳಂತೆ ಲೈಂಗಿಕ ಪ್ರಚೋದನೆಯನ್ನು ಹೊಂದಿರುವವನಾದರೂ ಯುಕ್ತಾಯುಕ್ತ ವಿವೇಚನೆಯಲ್ಲಿ ಪ್ರಾಣಿಗಳಿಗಿಂತ ಭಿನ್ನನಾಗಿರುತ್ತಾನೆ, ಆದುದರಿಂದಲೆ ಮಾನವ ಸಮಾಜ ಲೈಂಗಿಕ ಸಂಯೋಗವನ್ನು ವೈಯಕ್ತಿಕ ಅಥವಾ ಜೈವಿಕವೆಂದು ಮಾತ್ರ ಭಾವಿಸದೆ, ಸಾಮಾಜಿಕ ಮತ್ತು ನೈತಿಕ ವಿಷಯವೆಂದು ಪರಿಗಣಿಸುತ್ತವೆ. ಅಲ್ಲದೆ ಪ್ರತಿ ಮಾನವ ಸಮುದಾಯವು ಅಂಗೀಕಾರ್ಯ ಸಂಗಾತಿಗಳ ನಡುವೆ ಉನ್ನತ ಸ್ತರದ ಹಾಗೂ ಸ್ಥಿರವಾದ ಬಂಧನವೊಂದನ್ನು ಆಪೇಕ್ಷಿಸುತ್ತವೆ. ಅದನ್ನೆ ಮದುವೆ ಎಂದು ಕರೆದು ಗಂಡು-ಹೆಣ್ಣುಗಳನ್ನು ಒಂದು ವ್ಯವಸ್ಥಿತ ಕುಟುಂಬ ಜೀವನಕ್ಕೆ ಒಳಪಡಿಸುತ್ತವೆ'.

ಕುಣಬಿಯರಲ್ಲಿ ಮದುವೆಯನ್ನು ಕಡ್ಡಾಯವೆಂದು ಪರಿಗಣಿಸಲಾಗುತ್ತದೆ. ಒಂದು ಕಾಲಕ್ಕೆ ಮಾತೃಮೂಲ ಕುಟುಂಬವಾಗಿದ್ದಿರಬಹುದಾದ ಕುಣಬಿ ಸಮುದಾಯ ಈಗ ಪೂರಕವಾಗಿ ಪಿತೃಪ್ರಧಾನ ಕುಟುಂಬ ಮೂಲ ವ್ಯವಸ್ಥೆ ಹೊಂದಿದೆ. ಹಾಗಾಗಿ ಮದುವೆ ಗಂಡಿನ ಮನೆಯಲ್ಲಿಯೇ ನಡೆಯುತ್ತದೆ. ಬುಡಕಟ್ಟು ಸಮುದಾಯಗಳು ತಂದೆಯ ಕುಲ ಗೋತ್ರ ಅಥವಾ ಬಳಿಗೆ ಸಂಬಂಧಿಸಿದಂತೆ ವೈವಾಹಿಕ ಸಂಬಂಧಗಳನ್ನು ಏರ್ಪಡಿಸುವುದಿಲ್ಲ. ಇಲ್ಲಿ ಮೊದಲು ಹೆಣ್ಣು ನೋಡಲು ಹೋಗುವವನು ಗಂಡಿನ ತಂದೆಯಲ್ಲ. ಕುಣಬಿಯರಲ್ಲಿ ಹಿರಿಯನೊಬ್ಬ ಹೆಣ್ಣಿನ ಮನೆಗೆ ರಾಯಭಾರಿಯಂತೆ ಹೋಗುತ್ತಾನೆ, ಅವನು ಹೋಗಿ ಗಂಡು ಮತ್ತು ಹೆಣ್ಣಿನ ಬಳಿಗಳು ಬೇರೆ ಬೇರೆ ಎಂದು ಖಚಿತಪಡಿಸಿಕೊಂಡ ನಂತರ ಗಂಡಿನ ಕಡೆಯವರಿಗೆ ಹಸಿರು ನಿಶಾನೆ ತೋರುತ್ತಾನೆ. ಒಂದೇ ಬಳಿಯಲ್ಲಿ ಮದುವೆ ನಿಷಿದ್ದ. ತಂದೆಯ ಸಹೋದರಿ ಅಥವಾ

ಸೋದರತ್ತೆಯ ಮಕ್ಕಳಲ್ಲಿ, ತಾಯಿಯ ಸಹೋದರರ ಮಕ್ಕಳಲ್ಲಿ ವಿವಾಹಕ್ಕೆ ಸಂಬಂಧಿಸಿದ ಕೊಡುಕೊಳ್ಳುವಿಕೆ ನಡೆಯುವುದು ಸಾಮಾನ್ಯ. ಒಂದೇ ಕುಲದವರು, ಒಳಪಂಗಡ ಅಥವಾ ಉಪಜಾತಿಗಳಲ್ಲಿ ವಿವಾಹ ಸಂಬಂಧ ಬೆಳೆಸುವುದನ್ನು ನಿಷೇಧಿಸಿದ್ದಾರೆ.

ವಿದ್ಯಾರ್ಥಿ ಮತ್ತು ರೈ ಅವರು 'ಕುಣಬಿ ಸಮುದಾಯದವರು ತಮ್ಮ ಸಾಂಪ್ರದಾಯಿಕ ಮದುವೆ ಸಂಪ್ರದಾಯಗಳನ್ನು ಹಿಂದು ಧರ್ಮದ ಧಾರ್ಮಿಕ ಪದ್ಧತಿಗಳ ಲೇಪನದೊಂದಿಗೆ ನಡೆಸುತ್ತಿರುವರು'.

**ಮದುವೆ ಪದ್ಧತಿ**

ಮದುವೆಯ ಮೊದಲು ಎರಡು ಕುಟುಂಬಗಳ ಬಗ್ಗೆ ವಿವರಗಳನ್ನು ತಿಳಿದುಕೊಳ್ಳುತ್ತಾರೆ. ಯಾವುದೆ ಎರಡು ಕುಟುಂಬಗಳ ಪೂರ್ವಜರು ಒಬ್ಬರೆಯಾಗಿದ್ದರೆ, ಅಂತಹ ಕುಟುಂಬಗಳ ಮಧ್ಯ ಮದುವೆಗಳು ನಡೆಯುವುದಿಲ್ಲ. ಸಾಮಾನ್ಯವಾಗಿ ಬುಡಕಟ್ಟುಗಳು ದೂರದ ಸಂಬಂಧ ಬೆಳೆಸುವಲ್ಲಿ ಆಸಕ್ತಿ ತೋರಿಸುವುದಿಲ್ಲ. ಕುಣಬಿಯರು ಹೆಣ್ಣನ್ನು ಸೋದರಮಾವನಿಗೆ ಕೊಡುವುದು ಹೆಚ್ಚಾಗಿ ಕಂಡುಬರುವುದು. ಕುಣಬಿಯರಲ್ಲಿ ಮದುವೆಯನ್ನು ಸಾಧಾರಣವಾಗಿ ಹಿರಿಯರೇ ನಿಶ್ಚಯಿಸುತ್ತಾರೆ ಮತ್ತು ನಿಯಂತ್ರಿಸುತ್ತಾರೆ. ತಮ್ಮ ಸಂಬಂಧಿಕರು ಒಬ್ಬ ಹಿರಿಯನನ್ನು ಮನೆ ದೇವರಿಗೆ ಅರ್ಪಿಸಿರುವ ಅರೆಕಾ ಗಿಡದ ಪವಿತ್ರ ಹೂವುಗಳನ್ನು ಆರಿಸಿಕೊಳ್ಳಲು ಹೇಳಲಾಗುತ್ತದೆ. ಆರಿಸಿದ ಹೂವುಗಳು ಸರಿ ಸಂಖ್ಯೆಯಲ್ಲಿದ್ದರೆ ಮದುವೆ ಸಂಬಂಧಗಳನ್ನು ನಿಶ್ಚಯಿಸುತ್ತಾರೆ. ಹೂವುಗಳು ಬೆಸ ಸಂಖ್ಯೆಯಲ್ಲಿದ್ದರೆ ಸಂಬಂಧಗಳನ್ನು ಕೈ ಬಿಡಲಾಗುತ್ತದೆ. ಇಂದಿನ ದಿನಗಳಲ್ಲಿ ಕುಣಬಿಯರು ಬ್ರಾಹ್ಮಣ ಜೋತಿಷಿಗಳನ್ನು ಪರಾಮರ್ಶಿಸಿ ಪರಸ್ಪರ ವಧು-ವರರನ್ನು ನಿಶ್ಚಯಿಸುತ್ತಾರೆ.

**ಸಂಗಾತಿಗಳ ಆಯ್ಕೆ**

ವಧು-ವರರ ತಂದೆ-ತಾಯಿಗಳ ಇಷ್ಟಕ್ಕನುಸಾರವಾಗಿ ಕುಣಬಿಯರಲ್ಲಿ ಮದುವೆಗಳು 'ನಿಶ್ಚಿತಾರ್ಥ'ವಾಗುತ್ತವೆ. ಹೊರ ಹಾಕಿದವರ ಜೊತೆ ಮದುವೆ ಸಂಬಂಧಗಳನ್ನು ಮಾಡುವುದಿಲ್ಲ. ಮದುವೆ ನಿಶ್ಚಯಿಸುವ ಮೊದಲು ವಧುವಿನ ನಡತೆಗಳನ್ನು ಗಮನದಲ್ಲಿಟ್ಟುಕೊಳ್ಳುತ್ತಾರೆ.

ಮತ್ತೊಂದು ಕಡೆ ವಧುವಿನ ತಂದೆ-ತಾಯಿಗಳು ತಮ್ಮ ಸಮುದಾಯದ ನೃತ್ಯ ಮತ್ತಿತರ ಕಲೆಗಳನ್ನು ಬಲ್ಲಂತಹ ವರನನ್ನೆ ಬಯಸುತ್ತಾರೆ. ಮದುವೆ ಮಾತುಕತೆಗಳು ನಡೆಯುವಾಗ ವಧು-ವರರ ಪರಸ್ಪರ ಭೇಟಿಯನ್ನು ನಿಷೇಧಿಸುತ್ತಾರೆ. ಒಂದು ವೇಳೆ ಭೇಟಿಯಾದರೆ ಮದುವೆಯನ್ನು ರದ್ದುಗೊಳಿಸಲಾಗುತ್ತದೆ. ಇದು ಕುಣಬಿಯರು ಸಾಂಪ್ರದಾಯಿಕವಾಗಿ ಅನುಸರಿಸಿಕೊಂಡು ಬಂದ ಪದ್ಧತಿಯಾಗಿದೆ. ವಿಶೇಷವಾಗಿ 'ಗೋನ್' (Goan) ಕುಣಬಿಯರಲ್ಲಿ ವರನು ತನ್ನ ಧೈರ್ಯ ಮತ್ತು ಸಾಹಸಗಳನ್ನು ಮದುವೆಗೆ ಮೊದಲು ಸಾಬೀತುಪಡಿಸಬೇಕಾಗುತ್ತದೆ. ಮದುವೆ ವಯಸ್ಸಿಗೆ

ಬಂದ ಯುವ ಕುಣಬಿಗರು ತಮ್ಮ ಧೈರ್ಯ ಸಾಹಸಗಳನ್ನು ತೋರಿಸಿದ ಮೇಲೆಯೇ ಅವನನ್ನು ಮದುವೆಯಾಗಲು ಬಿಡುತ್ತಿದ್ದರು. ಕುಣಬಿಯರ ಈ ಮದುವೆ ಪದ್ಧತಿಯನ್ನು ಪರೀಕ್ಷಾ ಪದ್ಧತಿಯೆಂದು ಕರೆಯುತ್ತಾರೆ. 'ಭೀಲ್' ಆದಿವಾಸಿ ಗುಂಪಿನಲ್ಲಿ 'ಗೋಲ್ ಗಾಂಧೆಡೊ' (Goal Gandhedo) ಎನ್ನುವ ಈ ಪದ್ಧತಿಯ ಉದಾಹರಣೆಯನ್ನು ನಾವು ಕಾಣಬಹುದು.

ಹುಡುಗಿಯನ್ನು ಆರಿಸಿದ ನಂತರ ನಿಶ್ಚಿತಾರ್ಥದ ದಿನವನ್ನು ಗೊತ್ತುಪಡಿಸಿ ಹುಡುಗಿಯ ಪಾಲಕರಿಗೆ ತಿಳಿಸುವರು. ನಿಶ್ಚಿತಾರ್ಥದ ಮುಂಚಿನ ದಿನ ಮದುಮಗಳ ಹಿರಿಯ ಬಂಧುಗಳು ಮದುಮಗನ ಮನೆಗೆ ಭೇಟ್ಟಿ ಕೊಡುವರು. ಹೀಗೆ ಒಪ್ಪಿಗೆ ಶಾಸ್ತ್ರವಾದ ನಂತರ ಹೆಣ್ಣಿನ ಕಡೆಯವರು ಎಲ್ಲರಿಗೆ ಎಲೆ ಅಡಿಕೆ ಕೊಟ್ಟು, ಎಲೆ ಅಡಿಕೆಯನ್ನು ಮನೆ ದೇವರ ಮುಂದೆ ಹಿಡಿದು 'ನಾವು ಈ ಮದುವೆಗೆ ಒಪ್ಪಿಗೆಯನ್ನು ಕೊಟ್ಟಿದ್ದೇವೆ ಮತ್ತು ನಿಶ್ಚಿತಾರ್ಥದ ದಿನ ತಮ್ಮ ಒಪ್ಪಿಗೆಯನ್ನು ಸೂಚಿಸುತ್ತಾರೆ'. ವೀಳ್ಯದೆಲೆ, ತೆಂಗಿನಕಾಯಿ, ಬಾಳೆಹಣ್ಣು ಇತ್ಯಾದಿಗಳನ್ನು ತಟ್ಟೆಯಲ್ಲಿಟ್ಟು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. 'ಹೀಗೆ ಎರಡು ಕುಟುಂಬಗಳು ಮದುವೆಗೆ ಒಪ್ಪಿಗೆ ಸೂಚಿಸುವ ಕ್ರಮವನ್ನು 'ಹಸಿರು ವೀಳ್ಯ' ಎಂದು ಕರೆಯುತ್ತಾರೆ. ಕೆಲವರು ಇದೇ ದಿನ ಲಗ್ನ ಪತ್ರಿಕೆಯನ್ನು ಬರೆಸುತ್ತಾರೆ'.[೨೩]

**ಬಳಿಶಾಸ್ತ್ರ**

ಆಯಾ ಬಳಿಯವರ ಪದ್ಧತಿಯಂತೆ ಬೇರೆ ಬೇರೆ ವಸ್ತುಗಳನ್ನು ತಂದು ಮದುವೆಯ ಸಾಮಗ್ರಿಗಳೊಂದಿಗೆ ಪೂಜಿಸಿ ಪಿತೃಗಳಿಗೆ ಎಡೆ ಹಾಕುವ ವಿಶಿಷ್ಟ ಆಚರಣೆ ಮಾಡುತ್ತಾರೆ. ಗಂಡಿನ ಮನೆಯವರು ನಾಗರಬಳಿಯವರಾದರೆ ಹುತ್ತದ ಮಣ್ಣು ತರುತ್ತಾರೆ. ಹಿಟ್ಟಿನ ನಾಗನನ್ನು ಮಾಡಿ ಹುತ್ತದ ಮೇಲಿಟ್ಟು ಹುತ್ತದ ಕೊಂಬನ್ನು ಮುರಿದು ತಂದು ಕಳಸ ಇಟ್ಟಿರುವ ಕಡೆ ಮದುವೆ, ಜವಳಿ, ಬಂಗಾರ, ಬಾಸಿಂಗ ಮುಂತಾದವುಗಳನ್ನು ಸೇರಿಸಿ ಪೂಜೆ ಮಾಡುತ್ತಾರೆ.

ಕಳಸದ ಎದುರು ದೀಪ ಹಚ್ಚಿರುತ್ತಾರೆ. ಈ ದೀಪ ಮೂರನೆ ದಿನ ಮದುವೆ ದಿಬ್ಬಣ ಹೋಗಿ ಬರುವವರೆಗೂ ಆರಬಾರದು, ಅದನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾರೆ ಇದುವೆ 'ಬಳಿ ತರುವ ಶಾಸ್ತ್ರ'.

- ಆಡ್ನೋಕರ್, ಕಡಾಲ್ ಬಳಿ – ಕಡಾಲ್ ಮರದ ಕೊಂಬೆ, ಚಿಗುರು ಇವರು ಈ ಮರವನ್ನು ಕಡೆಯುವುದಿಲ್ಲ.
- ಊಂಬರಟ್‌ಕರ್, ಮಲ್ಲಿಗೆ ಬಳಿ – ಮಲ್ಲಿಗೆ ಹೂವು, ಮಲ್ಲಿಗೆ ಮುಡಿಯುವುದಿಲ್ಲ.
- ಮಂಜರೆಕರ್, ಸಂಕಿನ ಬಳಿ – ಶಂಖ, ಇವರು ಶಂಖವನ್ನು ಊದುವುದಿಲ್ಲ.

- ರಾಣೆ, ಈಚಲು ಬಳಿ – ಈಚಲು ಗರಿ, ಇವರು ಈಚಲು ಚಾಪೆ ವಸ್ತುಗಳನ್ನು ಬಳಸುವದಿಲ್ಲ.
- ಎರ್‌ಮೋರ್, ನಾಗರಬಳಿ – ಹುತ್ತದ ಕೊಂಬೆ, ನಾಗರ ಹಾವನ್ನು ಹಿಂಸಿಸುವುದಿಲ್ಲ.

ಅಂದರೆ ಪ್ರತಿ ಬಳಿಯವರು ಆಯಾ ಸಸ್ಯ ವಸ್ತುಗಳನ್ನು ಪೂಜಿಸುತ್ತಾರೆ. ಭೋಗವಸ್ತುಗಳನ್ನಾಗಿ ಬಳಸುವುದಿಲ್ಲ, ಅವುಗಳನ್ನು ರಕ್ಷಣೆ ಮಾಡುತ್ತಾರೆ.

ಈ ಬಳಿಗಳು ಕುಲವನ್ನು ಆಧರಿಸಿಕೊಂಡು ಬಳಿಗಳಾಗಿವೆ. ಇದರಿಂದ ತಿಳಿಯುವುದೇನೆಂದರೆ ಒಂದೇ ಬಳಿಯಲ್ಲಿ ಮದುವೆಯಾಗದೆ ವಿರುದ್ಧ ಬಳಿಗಳಲ್ಲಿ ಮದುವೆಗಳು ನಡೆಯುತ್ತವೆ. ಮದುವೆ ದಿನ ಗೊತ್ತಾದ ಬಳಿಕ ರಾಯಬಾರಿ ಮತ್ತು ಅವರ ಜೊತೆ ಹೋದ ಗಂಡಸರು, ಹೆಂಗಸರು ಹೆಣ್ಣಿನ ಮನೆಗೆ ಹೋಗಿ ಹೂವು, ಸೀರೆ, ಹೊಸ ಬಳೆಗಳನ್ನು ಹೆಣ್ಣಿನ ದೇವರ ಮನೆಯಲ್ಲಿಟ್ಟು ದಿಬ್ಬಣ ಬರುವಂತೆ ಹೇಳುತ್ತಾರೆ. ಮದುಮಗಳನ್ನು ಕರೆದುಕೊಂಡು ಮಾರನೆ ಬೆಳಿಗ್ಗೆ ಸೂರ್ಯ ಹುಟ್ಟುವ ಮೊದಲೆ ಗಂಡಿನ ಮನೆಗೆ ಹೊರಡಬೇಕು, ಅಷ್ಟರಲ್ಲಾಗಲೆ ಗಂಡಿನ ಮನೆಯಲ್ಲಿ ಮದುವೆ ಸಿದ್ಧತೆ ನಡೆದಿರುತ್ತದೆ. ಈಗಾಗಲೆ ಬಂಧು–ಬಳಗದವರಿಗೆಲ್ಲ ವರ್ತಮಾನ ಕೊಟ್ಟಿರುತ್ತಾರಾದ್ದರಿಂದ ಹಿಂದಿನ ಸಂಜೆಯಿಂದಲೆ ಅವರೆಲ್ಲ ನೆರೆದಿರುತ್ತಾರೆ. ಗಂಡಿನ ಮನೆಯ ಮುಂದಿನ ವಿಶಾಲ ಅಂಗಳವೆ ಮದುವೆ ಮಂಟಪ. ಮೇಲೆ ಮಾವಿನ ಸೊಪ್ಪಿನ ಹಸಿರು ಚಪ್ಪರ, ಚಪ್ಪರದ ಕೆಳಗೆ ವಿಶಾಲ ಅಂಗಳದಲ್ಲಿ ಅದೇ ಲಕ್ಕಿ ಸೊಪ್ಪಿನ ಹಸಿರು ಆವರಣ ನಿರ್ಮಿಸಿರುತ್ತಾರೆ. ಆಚರಣೆಗಳು ಈ ಹಸಿರು ಆವರಣದೊಳಗೆ ನಡೆಯಬೇಕು.

ಕುಣಬಿ ಸಮುದಾಯದವರು ಮದುವೆಗೆ ಅತಿ ಅವಶ್ಯಕವಾಗಿ ಬೇಕಾಗಿರುವ ಬುರುಗ ಮರದ ಕಾಂಡವನ್ನು ಮದುವೆಯ ಹಿಂದಿನ ಸಂಜೆ ಪೂಜೆ ಮಾಡುತ್ತಾರೆ. ಅದರ ಒಂದು ಕೊಂಬೆಯನ್ನು ಕತ್ತರಿಸಿ ತಂದು ಚಪ್ಪರದ ಮಧ್ಯ ಮುಹೂರ್ತ ಕಂಬವಾಗಿ ನಿಲ್ಲಿಸುತ್ತಾರೆ. ಈ ಕೊಂಬೆಗೆ ಪೂಜೆ ಮಾಡಿದ ನಂತರವೆ ಮದುವೆ ಕಾರ್ಯಾಚರಣೆ ನಡೆಯುತ್ತವೆ. ಈ ಕೊಂಬೆಯನ್ನು ಬುಡಕಟ್ಟಿನ ಮುಖಂಡ, ಮನೆಯ ಯಜಮಾನ ಹಾಗೂ ಹಿರಿಯರೆಲ್ಲ ಸೇರಿಕೊಂಡು ತರುತ್ತಾರೆ. ಚಪ್ಪರದ ಅಡಿಯಲ್ಲಿ ಕುಲ ದೇವರ ಹೆಸರಿನಲ್ಲಿ ಮತ್ತು ಪ್ರದೇಶದ ಮುಖ್ಯ ದೈವದ ದೇವರ ಹೆಸರಿನಲ್ಲಿ ತೆಂಗಿನಕಾಯಿ ಕಳಸ ಮಾಡಿ ಪೂಜಿಸುತ್ತಾರೆ. ಹೆಣ್ಣು ಮತ್ತು ಗಂಡು ಇಬ್ಬರನ್ನು ಅವರವರ ಸೋದರ ಮಾವಂದಿರು ಎತ್ತಿಕೊಂಡು ಬಂದು ಹಸೆಯ ಮೇಲೆ ನಿಲ್ಲಿಸುತ್ತಾರೆ. ನಂತರ ಗಂಡು ಹೆಣ್ಣಿಗೆ ಮತ್ತು ಹೆಣ್ಣು–ಗಂಡಿಗೆ ಬಕುಳದ ಹೂವಿನ ಮಾಲೆಯನ್ನು ಹಾಕಿ ಬದಲಾಯಿಸಿಕೊಳ್ಳುವ ಮೂಲಕ ವಿವಾಹ ಬಂಧನವಾಗುತ್ತದೆ. ಮಾತಾವಳಿ ಜಾಣ ಎಂಬ ಕುಣಬಿ ಸಮುದಾಯದ ಹಿರಿಯ ಪೂಜಾರಿ ಮದುವೆಯ ಪೂಜಾ ವಿಧಿಗಳನ್ನು ನೆರವೇರಿಸುತ್ತಾನೆ. ಇತ್ತೀಚೆಗೆ ಬ್ರಾಹ್ಮಣ ಭಟ್ಟರು ಮಾತಾವಳಿ ಜಾಣನ ಸ್ಥಾನವನ್ನು ಆಕ್ರಮಿಸಿರುವುದು ಕಂಡುಬಂದಿದೆ.

ಮದುವೆಯ ಸಂಪ್ರದಾಯದಲ್ಲಿ ಮದುಮಕ್ಕಳಿಗೆ ಫಲ ನೀಡುವ ಮರಗಳಾದ ಮಾವು, ಹಲಸು, ತೆಂಗು ಮುಂತಾದ ಮರಗಳಿಗೆ ಮುಟ್ಟಿ ನಮಸ್ಕರಿಸುವಂತೆ ಹೇಳುತ್ತಾರೆ. ಕುಣಬಿಯರಲ್ಲಿ ಪ್ರಕೃತಿಯನ್ನೆ ಸಾಕ್ಷಿಯನ್ನಾಗಿಸಿಕೊಂಡು ಮದುವೆ ಮಾಡುವ ಪದ್ಧತಿ ಒಂದು ವಿಶಿಷ್ಟ ಪದ್ಧತಿಯಾಗಿದೆ. ಕುಣಬಿಯರ ಮದುವೆ ಎಷ್ಟು ಸರಳವೊ ಅವರ ಮದುವೆ ಊಟವು ಅಷ್ಟೇ ಸರಳ. ಮದುವೆಯ ದಿನ ತಾವೆ ಬೆಳೆಯುವ ವಿವಿಧ ಗಡ್ಡೆ ಗೆಣಸುಗಳ ಪಲ್ಲೆ, ಸಾರು, ಅನ್ನ ಹಾಗೂ ಗುಳ್ಳಾಣಿ ಪಾಯಸ, ಇದಿಷ್ಟೇ ಅಂದಿನ ಊಟ.

'ಕುಣಬಿಯವರ ಮದುವೆಯಲ್ಲಿ ವಿಶೇಷತೆಯನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಅದು ಏನೆಂದರೆ ಮದುವೆಯ ಸಂದರ್ಭದಲ್ಲಿ ಮದುಮಗಳಿಗೆ ತಾಯಿ ಮನೆಯಿಂದ ಒಂದು ಮಂಗಳಸೂತ್ರ ಕೊಡುತ್ತಾರೆ, ಅದರಲ್ಲಿ ಕರಿಮಣಿ ಹಾಕಿದ ಬಂಗಾರದ ಮಣಿ ಒಂದು ಇರುತ್ತದೆ, ನಂತರ ಗಂಡನ ಮನೆಗೆ ಮದುಮಗಳು ಬಂದಾಗ ಅಲ್ಲಿ ಮುಹೂರ್ತದ ಸಮಯದಲ್ಲಿ 'ಮುಹೂರ್ತ ಮಂಗಳಸೂತ್ರ' ಎಂದು ಅದನ್ನು ಕೊರಳಿಗೆ ಹಾಕುತ್ತಾರೆ. ಹೀಗೆ ಅವರ ಮದುವೆ ಪದ್ಧತಿಯನ್ನು ನೋಡಿದಾಗ ಪ್ರತಿಯೊಂದು ಮದುವೆಯಾದ ಹೆಂಗಸರ ಕೊರಳಲ್ಲಿ ಎರಡು ಮಂಗಳಸೂತ್ರವನ್ನು ಕಾಣುವುದು ಒಂದು ವಿಶೇಷ'.[೨೪]

ಆದರೆ ಆದಿವಾಸಿಗಳಲ್ಲಿ ವಿವಾಹವನ್ನು ಒಂದು ಒಪ್ಪಂದವೆಂದು ಪರಿಗಣಿಸಲಾಗಿದೆ. ಅದು ಕೇವಲ ಇಬ್ಬರ ಲೈಂಗಿಕ ಸಂಬಂಧ ಮಾತ್ರವಾಗಿರದೆ ಎರಡು ಕುಟುಂಬದ ನಡುವೆ ಏರ್ಪಡುವ ಸಂಬಂಧವಾಗಿರುತ್ತದೆ. 'ಮಜೂಮ್‌ದಾರ್ ಮತ್ತು ಮದನ್‌ರವರು ಭಾರತದಲ್ಲಿನ ಆದಿವಾಸಿಗಳಲ್ಲಿ ರೂಢಿಯಲ್ಲಿರುವ ವಧುವರರ ಆಯ್ಕೆ ವಿಧಾನದ ಎಂಟು ಕ್ರಮಗಳನ್ನು ಈ ಕೆಳಗಿನಂತೆ ತೋರಿಸಿದ್ದಾರೆ.

೧. ಪರೀಕ್ಷಾರ್ಥ ವಿವಾಹ

೨. ಅಪಹರಣ ವಿವಾಹ

೩. ಅರ್ಹತಾ ಪರೀಕ್ಷೆ ನಂತರ ವಿವಾಹ

೪. ಕೊಂಡ ವಿವಾಹ

೫. ಸೇವಾ ವಿವಾಹ

೬. ಒಪ್ಪಿಗೆ ವಿವಾಹ

೭. ವಿನಿಮಯ ವಿವಾಹ

೮. ಆಕ್ರಮ ಪ್ರವೇಶ ವಿವಾಹ

ಆದರೆ ಕುಣಬಿಯರಲ್ಲಿ, ಒಪ್ಪಿಗೆ ವಿವಾಹವನ್ನು ಮಾತ್ರ ಕಾಣುತ್ತೇವೆ.

ಈ ರೀತಿಯಾಗಿ ಕುಣಬಿ ಸಮುದಾಯದವರ ವೈವಾಹಿಕ ಸ್ಥಿತಿಗತಿಗಳನ್ನು ಹಾಗೂ ವಿವಾಹ ಪದ್ಧತಿಯನ್ನು ಅರಿತಾಗ, ಅವರ ವಿವಾಹ ಪದ್ಧತಿಯಲ್ಲಿ ಬದಲಾವಣೆಯಾಗಿರುವುದು ತಿಳಿದುಬರುವುದು. ಇವರು ಬಾಲ್ಯ ವಿವಾಹವನ್ನು ಕೈಬಿಟ್ಟು ವಯಸ್ಕ ವಿವಾಹ ಪದ್ಧತಿಯನ್ನು ಹೊಂದಿರುವರು. ಇವರ ವಿವಾಹದ ಬಗ್ಗೆ ನಿರ್ಣಯವನ್ನು ಯಾರು ತೆಗೆದುಕೊಳ್ಳುತ್ತಾರೆ ಎಂದು ಕೇಳಿದಾಗ ಮಾಹಿತಿದಾರರು ನೀಡಿದ ವಿಚಾರಗಳನ್ನು ಕೋಷ್ಟಕ ೩.೧೨ ರಿಂದ ತಿಳಿದು ಕೊಳ್ಳಬಹುದು.

**ಕೋಷ್ಟಕ-೩.೧೨**
**ವಿವಾಹದ ಬಗ್ಗೆ ನಿರ್ಣಯ ತೆಗೆದುಕೊಳ್ಳುವವರ ಪ್ರಮಾಣ**

| ಕ್ರ.ಸಂ. | ನಿರ್ಣಯ ತೆಗೆದುಕೊಳ್ಳುವವರು | ಗಂಡು | ಹೆಣ್ಣು | ಒಟ್ಟು | ಪ್ರತಿಶತ |
|---|---|---|---|---|---|
| ೧ | ತಂದೆ | ೧೪೪ | ೯೦ | ೨೩೪ | ೭೮ |
| ೨ | ತಾಯಿ | ೨೦ | ೧೮ | ೩೮ | ೧೩ |
| ೩ | ಸ್ವಂತ | – | – | – | – |
| ೪ | ಕುಟುಂಬದ ಸದಸ್ಯರು | ೧೦ | ೮ | ೧೮ | ೬ |
| ೫ | ಸಂಬಂಧಿಕರು | ೫ | ೫ | ೧೦ | ೩ |
| | ಒಟ್ಟಾರೆ | ೧೭೯ | ೧೨೧ | ೩೦೦ | ೧೦೦ |

ಮೇಲಿನ ಕೋಷ್ಟಕ-೩.೧೨ ರಲ್ಲಿ ಮಾಹಿತಿದಾರರ ವಿವಾಹದ ಬಗ್ಗೆ ತೆಗೆದುಕೊಳ್ಳುವವರ ಪ್ರಮಾಣವನ್ನು ಕೊಡಲಾಗಿದೆ. ಕುಣಬಿ ಸಮಾಜದವರಲ್ಲಿ ಪ್ರತಿಶತ ೭೮ ರಷ್ಟು ವಿವಾಹಗಳು ತಂದೆ ನಿರ್ಣಯದ ಮೇಲೆ ನಡೆದರೆ, ಪ್ರತಿಶತ ೧೩ ರಷ್ಟು ತಾಯಿ ನಿರ್ಣಯಕ್ಕೆ ಅವಕಾಶವಿರುವುದನ್ನು ಕಾಣುತ್ತೇವೆ. ಪ್ರತಿಶತ ೬ ರಷ್ಟು ಕುಟುಂಬದ ಸದಸ್ಯರು ಹಾಗೂ ಪ್ರತಿಶತ ೩ ರಷ್ಟು ಸಂಬಂಧಿಕರು ವಿವಾಹ ಕುರಿತಾಗಿ ನಿರ್ಣಯವನ್ನು ತೆಗೆದುಕೊಂಡ ಮೇಲೆಯೇ ವಿವಾಹ ಕಾರ್ಯ ಜರುಗುವುದು.

ಇದನ್ನು ಗಮನಿಸಿದಾಗ ವಿವಾಹ ಸಂದರ್ಭದಲ್ಲಿ ಗಂಡು ಹೆಣ್ಣಿಗೆ ಸ್ವತಃ ನಿರ್ಣಯವನ್ನು ಕೈಗೊಳ್ಳಲು ಕಟ್ಟಳೆಗಳು ಇರುವುದನ್ನು ಇದರಿಂದ ಕಂಡುಕೊಳ್ಳಲಾಗಿದೆ. ಆದರೂ ಇಂದು ಹೆಚ್ಚಾಗಿ ಗಂಡು ಹೆಣ್ಣಿನ ಒಪ್ಪಿಗೆಯನ್ನು ಪಡೆದು ವಿವಾಹ ನಿರ್ಣಯವನ್ನು ಕೈಗೊಳ್ಳುತ್ತಿದ್ದಾರೆ. ಕುಣಬಿ ಸಮುದಾಯದವರಲ್ಲಿ ವಿವಾಹದ ಬಗ್ಗೆ ತಂದೆ, ತಾಯಿಯ ಪಾತ್ರ ಮುಖ್ಯವಾಗಿರುತ್ತದೆ.

ಕುಣಬಿ ಸಮುದಾಯದವರು ಕಾಲ ಬದಲಾದಂತೆ ತಮ್ಮ ಒಂದು ಬುಡಕಟ್ಟಿನ ಸಾಂಪ್ರದಾಯಿಕ ವಿವಾಹ ಪದ್ಧತಿಯಲ್ಲಿ ಬದಲಾವಣೆಯನ್ನು ಹೊಂದಲು ಇಚ್ಛಿಸುತ್ತಿದ್ದು, ಹಿಂದೂ ವಿವಾಹ ಪದ್ಧತಿಯನ್ನು ಅನುಸರಿಸಲು ಪ್ರಾರಂಭಿಸಿದ್ದಾರೆ. ಸಾಂಪ್ರದಾಯಿಕ ವಿವಾಹವನ್ನು ಏಕೆ ಅನುಸರಿಸುವುದಿಲ್ಲ ಎಂದು ಕೇಳಲಾದ ಪ್ರಶ್ನೆಗೆ ಅವರು ನೀಡಿದ ಕಾರಣಗಳನ್ನು ಕೋಷ್ಟಕ-೩.೨ ರಲ್ಲಿ ನೀಡಲಾಗಿದೆ.

**ಕೋಷ್ಟಕ-೩.೧೩**
**ಸಾಂಪ್ರದಾಯಿಕ ಕುಣಬಿ ವಿವಾಹ ಪದ್ಧತಿಯನ್ನು ಅನುಸರಿಸದೇ ಇರಲು ಕಾರಣ**

| ಕ್ರಸಂ. | ಕಾರಣಗಳು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಸರಳತೆಯು ಇಲ್ಲದಾಗಿದೆ | ೧೧ | ೪.೦೦ |
| ೨ | ಹೆಚ್ಚು ದಿನಗಳವರೆಗೆ ಇರುವುದು | ೪೯ | ೧೬.೦೦ |
| ೩ | ಆಧುನಿಕರಣ/ಸಂಸ್ಕೃತೀಕರಣದ ಪ್ರಭಾವ | ೪೦ | ೧೪.೦೦ |
| ೪ | ಸಮಯದ ಆಭಾವ | ೫೫ | ೧೮.೦೦ |
| ೫ | ಮೇಲಿನ ಎಲ್ಲವುಗಳು | ೧೪೫ | ೪೮.೦೦ |
| | ಒಟ್ಟಾರೆ | ೩೦೦ | ೧೦೦.೦೦ |

ಇದರಲ್ಲಿ ಪ್ರತಿಶತ ೪ ರಷ್ಟು ವಿವಾಹದಲ್ಲಿ ಸರಳತೆ ಇಲ್ಲದಿರುವುದರಿಂದ ನಾವು ಅದನ್ನು ಅನುಸರಿಸುವುದಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅಲ್ಲದೆ ವಿವಾಹವು ಹೆಚ್ಚು ದಿನಗಳ ವರೆಗೆ ನಡೆಯುವುದರಿಂದ ಪ್ರತಿಶತ ೧೬ ರಷ್ಟು ಈ ವಿವಾಹವನ್ನು ಅನುಸರಿಸುವುದಿಲ್ಲ. ಉದ್ಯೋಗದಲ್ಲಿದ್ದವರು ಹಾಗೂ ಬೇರೆ ಬೇರೆ ಕಡೆಗಳಲ್ಲಿ ಅನಿವಾರ್ಯವಾಗಿ ನೆಲೆಸಬೇಕಾಗಿರುವವರು ಬಹಳ ದಿನಗಳವರೆಗೆ ನಡೆಯುವ ಈ ವಿವಾಹ ಪದ್ಧತಿಯನ್ನು ಅನುಸರಿಸುವುದಿಲ್ಲ. ಪ್ರತಿಶತ ೧೪ ರಷ್ಟು ಆಧುನೀಕರಣ ಹಾಗೂ ಸಂಸ್ಕೃತೀಕರಣದ ಪ್ರಭಾವದಿಂದ ಅನುಸರಿಸುವುದಿಲ್ಲ ಎಂದಿದ್ದಾರೆ. ಈ ದೃಷ್ಟಿಯಲ್ಲಿ 'ಸಾಂಸ್ಕೃತಿಕ ಆಧುನೀಕರಣ ಶಕ್ತಿಗಳು ಬೆಳೆಯುತ್ತ ಹೋದಂತೆಲ್ಲ ಭಾರತದ ಗತ ಪರಂಪರೆಯ ಬಗ್ಗೆ ಹೆಚ್ಚು ಹೆಚ್ಚಾಗಿ ತಾದ್ಯಾತ್ಮಕ (Indentification)ಯನ್ನು ಪಡೆದುಕೊಳ್ಳುವ ಮನೋಭಾವ ಬೆಳೆದುಬರುವುದು ಮಾತ್ರವಲ್ಲದೆ, ಸಾಂಸ್ಕೃತಿಕ ಆಧುನೀಕರಣವು ಇಂತಹ ಪ್ರಕ್ರಿಯೆಯಲ್ಲಿ ಸಮಸ್ಯಾತ್ಮಕ ರೂಪವನ್ನು ತಳೆಯುವುದಲ್ಲದೆ, ಪರಂಪರಾಗತೆಯನ್ನು

ಸಂಪೂರ್ಣವಾಗಿ ದುರಾಕ್ರಮಣ ಮಾಡುವುದು' ಎಂಬ ಅಭಿಪ್ರಾಯವನ್ನು Singh Yogendra ರವರು 'Modernization of Indian Tradition', ಗ್ರಂಥದಲ್ಲಿ ಹೇಳಿರುತ್ತಾರೆ.

ಆದ್ದರಿಂದ ಆಧುನೀಕರಣ ಹಾಗೂ ಸಂಸ್ಕೃತಿ ಬೆಳೆದಂತೆ ಪ್ರಾಚೀನ ಸಂಪ್ರದಾಯ, ಬುಡಕಟ್ಟಿನ ಸಂಪ್ರದಾಯಗಳು ಬದಲಾಗುತ್ತದೆ ಎಂದು ಹೇಳಿದ್ದಾರೆ ಹಾಗೂ ಪ್ರತಿಶತ ೪೮ ರಷ್ಟು ಜನ ಮೇಲಿನ ಎಲ್ಲ ಕಾರಣಗಳಿಂದ ನಾವು ಸಾಂಪ್ರದಾಯಿಕ ಕುಣಬಿ ವಿವಾಹ ಪದ್ಧತಿಯನ್ನು ಅನುಸರಿಸುವುದಿಲ್ಲ ಎಂದು ಹೇಳಿದ್ದಾರೆ. ಈ ಕೋಷ್ಟಕವನ್ನು ನೋಡಿದಾಗ ಕುಣಬಿಗಳು ತಮ್ಮ ಪರಂಪರಾಗತೆಯನ್ನು ಬಿಟ್ಟು ಆಧುನಿಕತೆ ಹಾಗೂ ಸಾಂಸ್ಕೃತೀಕರಣ, ಜಾಗತೀಕರಣವಾಗುತ್ತ ಸಾಗುತ್ತಿರುವುದು ಕಂಡುಬರುತ್ತದೆ. ಅಲ್ಲದೆ ೩೦೦ ಜನ ಮಾಹಿತಿದಾರರು ನೀಡಿರುವ ಅಭಿಪ್ರಾಯದಲ್ಲಿ ಪ್ರಾಚೀನ ಕಾಲದ ತಮ್ಮ ವಿವಾಹ ಪದ್ಧತಿಯಲ್ಲಿ ಪ್ರತಿಶತ ೫೮ ರಷ್ಟು ಬದಲಾವಣೆಯಾಗಿದೆ ಎಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಒಟ್ಟಿನಲ್ಲಿ ಕುಣಬಿ ಸಮುದಾಯದವರು ತಮ್ಮದೆ ಆದ ವಿವಾಹ ಪದ್ಧತಿಯನ್ನು ಹೊಂದಿದ್ದು, ಅದರ ಅಧ್ಯಯನದಲ್ಲಿ ವಿವಾಹ ಆಚರಣೆ ಮತ್ತು ಪದ್ಧತಿಯ ಪರಿವರ್ತನೆಯಾಗಿರುವುದು ಕಂಡುಬರುತ್ತದೆ. ಸಂಪ್ರದಾಯಿಕ ವಿವಾಹ ಪದ್ಧತಿಯನ್ನು ಹೊಂದಿದ್ದರೂ ಅದರಲ್ಲಿಯೂ ಸಹ ಬದಲಾವಣೆಯಾಗಿದೆ. ಇವರು ಪರಸ್ಪರರಲ್ಲಿ ಬೆರೆಯುವಿಕೆಯಿಂದ ಅನ್ಯರಲ್ಲಿ ಇರುವ ಕೆಲವು ಉತ್ತಮ ಸಂಪ್ರದಾಯಗಳು, ನಂಬಿಕೆಗಳು, ರೀತಿ-ನೀತಿಗಳು, ಆಚಾರ-ವಿಚಾರಗಳನ್ನು ತಾವು ಕೂಡ ಅಳವಡಿಸಿಕೊಳ್ಳಲು ಇದು ಒಂದು ಉತ್ತಮ ಮಾರ್ಗವಾಗಿದೆ. ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ಭಾಗಿಯಾಗಿದ್ದು, ತಂತ್ರಜ್ಞಾನ, ಸಮೂಹ ಸಂಪರ್ಕ ಮಾಧ್ಯಮ, ಇತರರೊಂದಿಗೆ ಇವರ ಸಂಬಂಧಗಳು, ಮುಕ್ತ ವ್ಯಾಪಾರ, ಉದಾರೀಕರಣ, ಪಾಶ್ಚ್ಯಾತೀಕರಣ ಹಾಗೂ ಜಾಗತೀಕರಣಗಳ ಪ್ರಭಾವಕ್ಕೊಳಗಾಗಿ ಕುಣಬಿ ಮದುವೆಗಳು ಬಹಳಷ್ಟು ಬದಲಾವಣೆಗಳನ್ನು ಕಂಡಿವೆ. ಇತ್ತೀಚೆಗೆ ವರದಕ್ಷಿಣೆಯನ್ನು ಸಹ ಕುಣಬಿಯರು ಕೊಡುತ್ತಿರುವರು, ತೆಗೆದುಕೊಳ್ಳುತ್ತಿರುವರು. ಪಾಶ್ಚ್ಯಾತೀಕರಣ ಹಾಗೂ ಜಾಗತೀಕರಣಗಳ ಪ್ರಭಾವವು ಇವರನ್ನು ಸಾಂಪ್ರದಾಯಿಕತೆಯಿಂದ ಆಧುನಿಕತೆಯಡೆಗೆ ಸಾಗುವಂತೆ ಮಾಡಿರುವುದು ಸುಸಂಗತವಾದ ವಿಷಯವಾಗಿರುವುದನ್ನು ಈ ಸಂಶೋಧನೆಯಿಂದ ತಿಳಿದುಕೊಳ್ಳಲಾಗಿದೆ.

**೩.೧೧ ಧಾರ್ಮಿಕ ಪದ್ಧತಿ**

'ಧರ್ಮವು ಭಾರತೀಯ ಸಮಾಜದಲ್ಲಿ ಅತ್ಯಂತ ಮಹತ್ತರವಾದ ಪಾತ್ರ ವಹಿಸುತ್ತದೆ. ಇದು ಹಿಂದು ಸಮಾಜದ ತಳಹದಿಯಷ್ಟೆ ಆಗಿರದೆ, ಭಾರತವನ್ನು ಸುಮಾರು ೭೦೦ ವರ್ಷಗಳಿಗಿಂತಲೂ ಹೆಚ್ಚು ಕಾಲ ಆಳಿದ ಮುಸ್ಲಿಮರ ನಂತರವೂ ಇದು ಭಾರತೀಯ

ಜೀವನವನ್ನು ನಿಯಂತ್ರಿಸುತ್ತದೆ'. ಮಾನವ ಕೇವಲ ಸಾಮಾಜಿಕ ಜೀವಿಯಾಗಿರದೆ ಧಾರ್ಮಿಕ ಅಥವಾ ಆಧ್ಯಾತ್ಮಿಕ ಜೀವಿಯೂ ಆಗಿರವನು. 'ಧರ್ಮ' ಎನ್ನುವುದು ಮಾನವನ ಜೀವನದ ವಿಶಿಷ್ಟವಾದ ಅನುಭವವಾಗಿದೆ. 'ಮನುಷ್ಯ ಕೇವಲ ಆಹಾರದಿಂದ ಬದುಕಲಾರ' ಎನ್ನುವ ಬೈಬಲ್ ವಾಕ್ಯವು ಧಾರ್ಮಿಕ ಅಗತ್ಯದ ಪ್ರಾಮುಖ್ಯತೆಯನ್ನು ವ್ಯಕ್ತಪಡಿಸುತ್ತದೆ. 'ಧರ್ಮದ ಪ್ರಾಮುಖ್ಯತೆಯನ್ನು ಕಡೆಗಣಿಸುವುದೆಂದರೆ ಜೀವತಂತುವೊಂದನ್ನು ಕಡೆಗಣಿಸಿದಂತಾಗುತ್ತದೆ' ಎಂಬ ಅಭಿಪ್ರಾಯವನ್ನು ಡಾ. ಬಿ.ಆರ್. ಅಂಬೇಡ್ಕರ್‌ರವರು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಧರ್ಮವು ಸಾಂಸ್ಥಿಕ ರಚನೆ ಅಥವಾ ಪ್ರಭಾವ, ಸಾಮಾಜಿಕವಾದ ಎಲ್ಲ ಪ್ರಭಾವಗಳು ಮತ್ತು ಸಾಂಸ್ಥಿಕ ರಚನೆಗಳಂತೆಯೆ ಇದು ಕೂಡ ತನ್ನ ಹಿಡಿತದಲ್ಲಿರುವ ಸಮಾಜಕ್ಕೆ ಒಳಿತನ್ನು ಮಾಡಲೂ ಬಹುದು ಮತ್ತು ಕೆಡುಕನ್ನೂ ಮಾಡಬಹುದು ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ.

ಮನುಷ್ಯನ ಮತ್ತು ಅಲೌಕಿಕ ಶಕ್ತಿಗಳ ಸಂಬಂಧವನ್ನು ಧರ್ಮವು ಪ್ರತಿನಿಧಿಸುತ್ತದೆ. ಮನುಷ್ಯನ ಪುರಾತನ ಕರ್ತವ್ಯಗಳಲ್ಲಿ ಧರ್ಮವೂ ಒಂದು. ಧರ್ಮದ ಮೂಲಭೂತಗಳಾದ ನಂಬಿಕೆಗಳು, ಧಾರ್ಮಿಕ ಆಚರಣೆಗಳು ಮತ್ತು ಪೂಜೆಗಳ ಮೂಲಕ ಧರ್ಮವನ್ನು ಪ್ರಚಾರಪಡಿಸಲಾಗಿದೆ. 'ಪವಿತ್ರ ವಸ್ತುಗಳಿಗಾಗಿಯೇ ಇರುವ ಕೆಲವು ನಂಬಿಕೆಗಳ ಮತ್ತು ಆಚರಣೆಗಳ ಸಮುಚ್ಚಯವೇ ಧರ್ಮ'. ಮನುಷ್ಯನ ಧಾರ್ಮಿಕ ಜವಾಬ್ದಾರಿಗಳಿಗನುಗುಣವಾಗಿ ಧಾರ್ಮಿಕ ಗುಂಪುಗಳು, ಸಂಸ್ಥೆಗಳು, ಭಾವನೆಗಳು ಬೆಳೆದು ಎಲ್ಲರಲ್ಲೂ ಮನೆಮಾಡುತ್ತವೆ. ಧರ್ಮದ ಬಗ್ಗೆ ಬರೆದ ಮೊದಲ ಬರಹಗಾರನೆ 'ಡರ್ಖೇಮ್'.

ಬುಡಕಟ್ಟು ಧರ್ಮವು ಬಹಳ ಪುರಾತನ ಧರ್ಮವೆಂದು ಪರಿಗಣಿಸಲಾಗಿದೆ. ಇಲ್ಲಿ ಪ್ರಾಣಿ ಪೂಜೆ, ಮರಗಳ ಪೂಜೆ, ಸೂರ್ಯ, ಚಂದ್ರ ಮತ್ತು ನದಿ ಪೂಜೆ, ದುಷ್ಟ ಶಕ್ತಿಗಳ ಪೂಜೆ ಮುಂತಾದವುಗಳನ್ನು ಕಾಣಬಹುದು. ಜೀವನದ ಎಲ್ಲಾ ಹಂತಗಳಲ್ಲೂ ಬುಡಕಟ್ಟು ಧರ್ಮವು ಹಾಸುಹೊಕ್ಕಾಗಿದೆ. ಭಾರತದಲ್ಲಿ ಹಲವಾರು ಜನಸಮುದಾಯಗಳು ತಮ್ಮದೇ ಆದ ವಿಶಿಷ್ಟ ಧಾರ್ಮಿಕತೆಯನ್ನು ಬೆಳೆಸಿಕೊಂಡು ಬಂದಿವೆ. ಹಾಗೆಯೇ ಕುಣಬಿ ಸಮುದಾಯದವರಲ್ಲಿ ಯಾವ ರೀತಿ ಧಾರ್ಮಿಕತೆ ಬೆಳೆದುಬಂದಿದೆ ಎಂಬುದನ್ನು ತಿಳಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

ಕುಣಬಿ ಸಮುದಾಯದವರಲ್ಲಿ ಹಲವಾರು ಧಾರ್ಮಿಕ ಪದ್ಧತಿಗಳಿದ್ದು, ಅವರು ತಮ್ಮ ಪೂರ್ವಜರ ಆರಾಧನೆಯನ್ನು ಕೂಡ ಮಾಡುತ್ತಾರೆ. ಪೂರ್ವಜರು ಹೊಂದಿರುವ ರೀತಿ-ನೀತಿ, ಸಂಸ್ಕೃತಿ, ರೂಢಿ, ಸಂಪ್ರದಾಯ, ಆಚರಣೆಗಳಲ್ಲಿ ತಮ್ಮದೇ ಆದ ವಿಶಿಷ್ಟ ಪದ್ಧತಿಯನ್ನು ಹೊಂದಿದ್ದಾರೆ. ಇವರು ಹಲವಾರು ದೇವಾನುದೇವತೆಗಳನ್ನು ಪೂಜಿಸುವವರಾಗಿದ್ದು, ದೇವ-

ದೇವತೆಗಳ ಬಗ್ಗೆ ವಿಶಿಷ್ಟವಾದ ನಂಬಿಕೆಯುಳ್ಳವರಾಗಿದ್ದಾರೆ. ಆದರೂ ಸಹ ಪರಿವರ್ತನೆಯನ್ನು ಹೊಂದುತ್ತಿರುವ ಆಧುನಿಕ ಸಮಾಜದಲ್ಲಿಯ ಅನೇಕ ಕಾರಣಗಳಾದ ನಗರೀಕರಣ, ಕೈಗಾರೀಕರಣ, ಸಾರಿಗೆ ಸಂಪರ್ಕಗಳ ಸುಧಾರಣೆ, ಉದಾರೀಕರಣ, ಪಾಶ್ಚಿಮಾತ್ಯೀಕರಣ, ಹಾಗೂ ಜಾಗತೀಕರಣಗಳ ಪ್ರಭಾವದಿಂದ ತಮ್ಮ ಮೂಲ ಸ್ಥಳಗಳಿಂದ ಉದ್ಯೋಗವನ್ನರಸಿ ಬೇರೆ ಬೇರೆಡೆಗೆ ಹೋಗುವುದರಿಂದ ತಮ್ಮ ಕುಲದೇವತೆ, ಆರಾಧ್ಯ ದೇವತೆಗಳನ್ನು ಪೂಜಿಸುವುದನ್ನು ಕಡಿಮೆ ಮಾಡಿದ್ದಾರೆ. ತಮ್ಮ ಅನುಕೂಲಕ್ಕೆ ತಕ್ಕಂತೆ ಪೂಜಾ ವಿಧಿವಿಧಾನಗಳನ್ನು ಬದಲಿಸಿಕೊಂಡಿದ್ದಾರೆ. ಇಂತಹ ಸ್ಥಿತಿಯಲ್ಲಿ ಧಾರ್ಮಿಕ ವಿಚಾರ/ದೇವರ ಬಗ್ಗೆ ನಂಬಿಕೆ ಇದೆಯೇ? ಎಂದು ಕೇಳಲಾದ ಪ್ರಶ್ನೆಗೆ ಅವರು ಕೊಟ್ಟ ಉತ್ತರಗಳನ್ನು ಕೆಳಗಿನ ಕೋಷ್ಟಕ-೩.೧೪ ರಲ್ಲಿ ನೀಡಲಾಗಿದೆ.

**ಕೋಷ್ಟಕ-೩.೧೪**
**ಧಾರ್ಮಿಕ ವಿಚಾರ ಹಾಗೂ ದೇವರ ಬಗ್ಗೆ ನಂಬಿಕೆ ಇರುವವರ ವಿವರ**

| ಕ್ರಸಂ. | ನಂಬಿಕೆಯಿದ್ದವರು | ಪೂರ್ವಜರ ಕಾಲದಲ್ಲಿ | | ಮಾಹಿತಿದಾರರಲ್ಲಿ | |
|---|---|---|---|---|---|
| | | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ೧ | ಇರುವವರು | ೨೫೮ | ೮೬.೦೦ | ೨೪೩ | ೮೧.೦೦ |
| ೨ | ಇಲ್ಲದವರು | ೧೨ | ೪.೦೦ | ೫೭ | ೧೯.೦೦ |
| ೩ | ಗೊತ್ತಿಲ್ಲ | ೩೦ | ೧೦.೦೦ | ೦ | ೦.೦೦ |
| | ಒಟ್ಟಾರೆ | ೩೦೦ | ೧೦೦.೦೦ | ೩೦೦ | ೧೦೦.೦೦ |

ಈ ಕೋಷ್ಟಕದಿಂದ ಮಾಹಿತಿದಾರರಿಗೂ ಹಾಗೂ ಅವರ ಪೂರ್ವಜರಲ್ಲಿಯ ದೇವರ ಅಥವಾ ಧರ್ಮದ ಬಗ್ಗೆ ನೋಡಿದಾಗ, ಪೂರ್ವಜರಿಗಿಂತ ಮಾಹಿತಿದಾರರಲ್ಲಿ ನಂಬಿಕೆಯು ಕಡಿಮೆಯಾಗಿರುವುದು ಕಂಡುಬಂದಿದೆ. ಪ್ರತಿಶತ ೮೧ ರಷ್ಟು ಮಾಹಿತಿದಾರರು ನಂಬಿಕೆಯನ್ನು ಹೊಂದಿದ್ದರೆ, ಅವರ ಪೂರ್ವಜರು ಪ್ರತಿಶತ ೮೬ ರಷ್ಟು ನಂಬಿಕೆಯನ್ನು ಧರ್ಮದ ಕುರಿತು ಹೊಂದಿರುವ ಅಭಿಪ್ರಾಯವನ್ನು ತಿಳಿಸಿದ್ದಾರೆ. ಆದರೆ ನಂಬಿಕೆ ಇಲ್ಲದವರನ್ನು ನೋಡಿದಾಗ ಪೂರ್ವಜರು ಪ್ರತಿಶತ ೪ ರಷ್ಟು ಹಾಗೂ ಮಾಹಿತಿದಾರರು ಪ್ರತಿಶತ ೧೯ ರಷ್ಟು ದೇವರ ಅಥವಾ ಧರ್ಮದ ಬಗ್ಗೆ ನಂಬಿಕೆಯೇ ಇಲ್ಲದಾಗಿದೆ. ಕಾರಣ ಶಿಕ್ಷಣ ಪಡೆದಿರುವುದು, ಆರ್ಥಿಕ ಪರಿಸ್ಥಿತಿ ಸುಧಾರಣೆ, ಪ್ರಮುಖವಾಗಿ ವೈಜ್ಞಾನಿಕ ಸತ್ಯತೆಯನ್ನು ತಿಳಿದಿರುವುದು ಮುಂತಾದ

ಕಾರಣಗಳಿಂದಾಗಿ ಅವರು ಸುಧಾರಣೆಯತ್ತ ತಮ್ಮ ದಿಕ್ಕನ್ನು ಬದಲಿಸಿಕೊಂಡಿದ್ದಾರೆ ಎಂಬ ಅಭಿಪ್ರಾಯವನ್ನು ನೀಡಿದ್ದಾರೆ.

**ಮೂರ್ತಿ ಪೂಜೆ ಮತ್ತು ಆಚರಣೆ**

ಮನೆಯಲ್ಲೇ ಇಟ್ಟಿರುವ ದೇವರ ಮೂರ್ತಿಯ ಪೂಜೆಯನ್ನು ಕುಟುಂಬದ ಯಜಮಾನನು ಮಾಡುವನು. ಕುಣಬಿಯರು ಬೇರೆ ಬೇರೆ ಹೆಣ್ಣು ಮತ್ತು ಗಂಡು ದೇವರುಗಳನ್ನು ಪೂಜಿಸುವರು. ದೇವರನ್ನು ಅಲಕ್ಷಿಸಿದರೆ ನಮಗೆ ಕಷ್ಟಗಳು ಬರುತ್ತವೆ ಎಂದು ಕುಣಬಿಯರು ನಂಬಿರುವರು. ಕುಣಬಿಯರಿಗೆ ಅನೇಕ ದೈವಗಳಿವೆ, ಅವುಗಳಲ್ಲಿ ಮಲ್ಲಿಕಾರ್ಜುನ, ಸಿದ್ಧನಾಥ, ಸಿದ್ಧೇಶ್ವರ, ಕಾಫ್ರಿ, ಸೋಮನಾಥ, ಕಲ್ಲಿನಾಥ, ಮಹಾದೇವ, ಮಾಬಳೇಶ್ವರ, ಇವು ಶಿವರೂಪಿಯಾದ ದೈವಗಳು, ಆದರೆ ನಾಡಿನ ಇತರೆಡೆಗಳಲ್ಲಿ ಇರುವಂತೆ ಇವಕ್ಕೆ ನಿರ್ಧಿಷ್ಟ ಭೌತಿಕ ರೂಪಗಳೇನು ಇಲ್ಲ. ಒಂದು ಉರುಟುಕಲ್ಲು, ಅದರ ಪಕ್ಕದಲ್ಲೊಂದು ತ್ರಿಶೂಲ ಇದ್ದರೆ ಅದು ಸಿದ್ಧನಾಥ ಅಥವಾ ಕಾಲಭೈರವ. ಕೆಲವು ಭಾಗಗಳಿಗೆ ನೆಟ್ಟಗೆ ಭೂಮಿಯಿಂದ ಮೇಲೆದ್ದು ಬರುವಂತೆ ಕಾಣುವ ಆರು ಕಲ್ಲಿನ ಸಮೂಹವಿರುತ್ತದೆ. ಅದಕ್ಕೆ 'ಸಾತ್ಪುರುಷ' ಎಂದು ಕರೆಯಲಾಗುತ್ತದೆ. ಅವು ತೀರಿಹೋದ ಹಿರಿಯರ ಆತ್ಮಗಳನ್ನು ಸಂಕೇತಿಸುವ ದೇವರು. ಇತರೆ ವಿವಿಧ ಕಲ್ಲಿನ ರೂಪಗಳನ್ನೆ 'ಕಾಫ್ರಿ' ದೇವರು ಎಂದು ಕರೆಯುತ್ತಾರೆ. ಇವು ಗಡಿಗಳನ್ನು ಕಾಯುವ ದೇವರುಗಳಾದುದರಿಂದ ಗಡಿಯಲ್ಲಿ ಇರುತ್ತವಷ್ಟೆ. ಸೋಮನಾಥ ಒಂದು ರೀತಿಯಲ್ಲಿ ಇವರ ಸೂಪರ್ ನ್ಯಾಚುರಲ್ ದೈವ.

ಸ್ತ್ರೀ ದೇವರುಗಳಾದ ಚಾಪಲಾದೇವಿ, ಸಾತೇರಿ, ಗೌಳಾದೇವಿ, ಮಹಾಮಾಯೆ, ದುರ್ಗಾ, ಎಂಬ ಹೆಸರಿನ ಸ್ತ್ರೀಶಕ್ತಿ ದೇವತೆಗಳನ್ನು ಆರಾಧಿಸುತ್ತಾರೆ. ಕುಣಬಿಯರು ಸ್ಥಳೀಯ ಗುಡ್ಡಬೆಟ್ಟಗಳನ್ನು ಇವರ ದೈವಗಳೆಂದು ಪೂಜಿಸುತ್ತಾರೆ. ದುರ್ಗಾ, ಆಗಡೊ, ದರೊ, ಗುರುತಿಂಜ್ ಎಂಬ ಗುಡ್ಡಗಳನ್ನು ಇವರ ರಕ್ಷಕ ದೈವಗಳಿರುವ ಪವಿತ್ರ ಜಾಗವೆಂದು ನಂಬಿ ಪೂಜಿಸುತ್ತಾರೆ. ರಾಮಲಿಂಗಕೊಂಡ, ಸಾಕಳಕೊಂಡ ಹಾಗೂ ನಾಗಿನದಿಕೊಂಡ ಎಂಬ ಕಾಳಿ ನದಿಯ ಉಪ ನದಿಯ ನೀರಿನ ತಾಣಗಳನ್ನು ಅವರು ಪವಿತ್ರ ಸ್ಥಳಗಳೆಂದು ನಂಬುತ್ತಾರೆ.

ಕುಣಬಿಯರು ವೃಕ್ಷಗಳನ್ನು ಮತ್ತು ಪ್ರಾಣಿಗಳನ್ನು ಪೂಜಿಸುವವರು. ಅತ್ತಿ, ಆಲ, ಬನ್ನಿ, ಮತ್ತು ಮಾವು ಇವರ ಪವಿತ್ರ ಮರಗಳು–ಮದುವೆ ಮಂಟಪಕ್ಕೆ ಬೂರಗದ ಮರ ಇರಲೇಬೇಕು. ಗೋನ್ ಕುಣಬಿಯರು ಪ್ರತಿದಿನ ರಾತ್ರಿ ತುಳಸಿ ಗಿಡದ ಹತ್ತಿರ ದೀಪ ಹಚ್ಚುವರು ಮತ್ತು ನಿತ್ಯ ತುಳಸಿ ಪೂಜೆ ಮಾಡುವರು. ಉಗ್ರ ಪ್ರಾಣಿಗಳಾದ ಆನೆ, ಒಂಟೆ, ಹುಲಿ, ಸಿಂಹ, ಹಾವು, ಕಾಡು ಹಂದಿ, ಇವುಗಳನ್ನು ಅಕ್ಕಿ ಹಿಟ್ಟಿನಿಂದ ಗೊಂಬೆಗಳನ್ನು ಮಾಡಿ ಮದುವೆ ಸಮಯದಲ್ಲಿ

ಪೂಜಿಸುವರು. ಪ್ರಾಣಿಗಳ ಜೊತೆ ಇವರ ಸಂಪರ್ಕವನ್ನು ಸೂಚಿಸುವ ಚಿಹ್ನೆಯನ್ನು ಪ್ರಾಣಿಗಳ ರೂಪದಲ್ಲಿ ಪೂಜಿಸುವರು. ತಮ್ಮ ವಿವಿಧ ಗುಂಪುಗಳಿಗೆ ಪ್ರಾಣಿಗಳ ಮತ್ತು ವೃಕ್ಷಗಳ ಹೆಸರುಗಳನ್ನಿಡುವರು. ಒಲೆಯನ್ನು ತಮ್ಮ ಪುರಾತನ ದೇವರುಗಳೊಂದಿಗೆ ಗುರುತಿಸಿಕೊಂಡಿರುವರು. ಮಾರುಕಟ್ಟೆಯಿಂದ ತಂದ ಮಾಂಸವನ್ನು ಅಡುಗೆಮನೆಯ ಒಲೆಯಲ್ಲಿ ಬೇಯಿಸುವುದಿಲ್ಲ.

ಬೇಟೆಗಾರಿಕೆಯನ್ನು ದೇವರಿಗೆ ಅರ್ಪಿಸುವ ಪವಿತ್ರ ಕಾರ್ಯವೆಂದು ತಿಳಿದು ಮಾಡುವರು. ಬೇಟೆಗಾಗಿ ಉಪಯೋಗಿಸುವ ಭಲ್ಲೆ, ಬಲೆ, ಭರ್ಚಿ ಮುಂತಾದವುಗಳನ್ನು ಪೂಜ್ಯ ದೃಷ್ಟಿಯಿಂದ ಕಾಣುವರು. ಮುಟ್ಟಾದ ಹೆಂಗಸರು ಬೇಟೆಯ ಉಪಕರಣಗಳನ್ನು ಮುಟ್ಟುವ ಹಾಗಿಲ್ಲ. ಕಾಡು ಹಂದಿಯ ಬೇಟೆಯನ್ನು ಕೆಂಪಣ್ಣ ದೇವರಿಗೆ ಅರ್ಪಿಸುವ ಕಾಣಿಕೆಯೆಂದು ಮಾಡುವರು. ಬೇಟೆಯ ಸಮಯದಲ್ಲಿ ಮಾಂಸ ಮತ್ತು ಜೇನನ್ನು ಹಂಚುವ ಮೊದಲು ಅದರ ಒಂದು ಭಾಗವನ್ನು ಬೇಟೆ ದೇವರಿಗೆ ತಮ್ಮನ್ನು ರಕ್ಷಿಸಲೆಂದು ಕೋರಿ ಅರ್ಪಿಸುವರು.

ಪೂರ್ವಜರ ಪೂಜೆಗಳು ಕುಣಬಿಯರ ಜೀವನದ ಮತ್ತು ಅವರ ಧಾರ್ಮಿಕ ನಂಬಿಕೆಗಳ ಮುಖ್ಯ ಅಂಗಗಳು. ಸತ್ತವರ ಆತ್ಮಗಳಿಂದ ಮುಕ್ತಿ ಪಡೆಯಲು ಕುಣಬಿಯರು ಕಂಡಿ (Kandi), ಕುಲೆ (Kule) ಮತ್ತು ಜಕ್ಕಣಿ (Jakkani) ಎನ್ನುವ ಭೂತಗಳನ್ನು ವರ್ಷಕ್ಕೊಮ್ಮೆಯಾದರು ಪೂಜಿಸುವರು. ಸತ್ತ ದಿನವನ್ನು 'ಮಲಕಾರ್ಯ' ಎಂದು ಆಚರಿಸುವರು. ಸ್ನಾನ ಮಾಡಿ, ಮನೆ ತೊಳೆದು, ಅನ್ನದೊಂದಿಗೆ ವಿವಿಧ ಅಡುಗೆಯನ್ನು ತಯಾರಿಸಿ ಪೂರ್ವಜರಿಗೆ ಅರ್ಪಿಸುವರು. ಸತ್ತ ಮೂರು ತಿಂಗಳ ನಂತರ ಎರಡು ತೆಂಗಿನಕಾಯಿಗಳನ್ನು ಅರ್ಪಿಸುವ ಮೂಲಕ ಗತಿಸಿದವರನ್ನು ಪುನಃ ಮರಳಿ ಆಹ್ವಾನ ಮಾಡುವರು.

**ನಂಬಿಕೆಗಳು**

ನಾವು ಕಾಣಿಕೆಗಳನ್ನು ಅರ್ಪಿಸದಿದ್ದರೆ ದುಷ್ಟ ಶಕ್ತಿಗಳು ತಮಗೆ ಕೇಡು ಮಾಡುವರೆಂದು ನಂಬಿರುವರು. ಇಂತಹ ಪ್ರಸಂಗಗಳಲ್ಲಿ ಮಾಂತ್ರಿಕ ಡಾಕ್ಟರ್, ಮಾಯವಾದಿ ಎಂದು ಪರಿಗಣಿಸಿ 'ಗದಾಸ'ರನ್ನು (Gadas) ಕುಣಬಿಯರು ಸಂಪರ್ಕಿಸುವರು.

ಬುಡಕಟ್ಟು ಸಮುದಾಯಗಳಲ್ಲಿ ಮಾಂತ್ರಿಕ ಆಚರಣೆಗಳಲ್ಲಿ ನಂಬಿಕೆ ಒಂದು ಸಾಮಾನ್ಯ ಗುಣ ಎಂದು ವಿದ್ಯಾರ್ಥಿ ಮತ್ತು ರೈರವರು 'ಪ್ರಕೃತಿಯ ನೈಜ ಗುಣಗಳ ಬಗ್ಗೆ ಅವರಿಗೆ ತಿಳುವಳಿಕೆ ಇಲ್ಲ'. ಬುಡಕಟ್ಟು ಜನರು ಮಾಂತ್ರಿಕ ಜಗತ್ತಿನಲ್ಲಿ ಹೆಚ್ಚಿನ ವಿಶ್ವಾಸವನ್ನಿಟ್ಟಿರುವರು. ಇಡಿ ಜಗತ್ತು ಮತ್ತು ಪ್ರತಿ ಮನುಷ್ಯನು ಅತಿಮಾನುಷ ಶಕ್ತಿಗಳ ಅಡಿಯಾಳುಗಳೆಂದು ನಂಬಿರುವರು. ಬುಡಕಟ್ಟು ಜನರಲ್ಲಿ ದುಷ್ಟ ಶಕ್ತಿಗಳಿಗೆ ತಮ್ಮದೆಯಾದ ಸ್ಥಾನವಿದೆ. ರೋಗಗಳಿಂದ ಮುಕ್ತಿ

ಪಡೆಯಲು ದುಷ್ಟ ಶಕ್ತಿಗಳನ್ನು ಮತ್ತು ಸಸ್ಯ ಔಷಧಿಯನ್ನು ನಂಬಿರುವರು. ಯಾರಾದರು ಅಪಘಾತಕ್ಕೀಡಾದರೆ, ರೋಗ ಪೀಡಿತರಾದರೆ, ಸತ್ತರೆ, ಕುಣಬಿಯರು ದುಷ್ಟ ಶಕ್ತಿಗಳನ್ನು ದೂರವಿಡಲು 'ಗದ್ಯರನ್ನು' ಸಂಪರ್ಕಿಸುವರು.

ಎಲ್ಲ ಕಷ್ಟಗಳು, ಕೆಟ್ಟ ಗ್ರಹಗತಿಗಳು, ರೋಗರುಜಿನಗಳು, ಮಾಟಮಂತ್ರಗಳಿಂದ ಉಂಟಾಗುವವು ಎಂದು ಕುಣಬಿಯರು ತಿಳಿದಿರುವರು. ಕುಣಬಿ ಭಾಷೆಯಲ್ಲಿ ಈ ಎಲ್ಲಾ ಮಾಂತ್ರಿಕ ಪದ್ಧತಿಗಳನ್ನು 'ನ್ಯಾಟ್' (Nat) ಎಂದು ಕರೆಯುವರು.

ಪೂರ್ವ ಕಾಲದಿಂದಲೂ ನಡೆದುಕೊಂಡು ಬಂದಂತಹ ಕುಣಬಿಯರ ನಂಬಿಕೆಗಳಿಂದ ಕೂಡಿದ ಬದುಕನ್ನು, ಇಂದಿನ ಕುಣಬಿಯರ ನಡೆನುಡಿಗಳಿಂದ ನಾವು ಕಾಣಬಹುದು. ಉದಾಹರಣೆಗೆ: ಆತ್ಮ ಹಾಗೂ ದೆವ್ವಗಳ ಪೂಜೆಯನ್ನು ಸಾಮಾನ್ಯವಾಗಿ ನಾವು ಕಾಣುತ್ತೇವೆ. ರೋಗರುಜಿನಗಳು ದೆವ್ವಗಳಿಂದ ಉಂಟಾಗುತ್ತವೆ, ಬೇಟೆ ಮಾಡಿದ ಮಾಂಸವನ್ನು ಮಾರಬಾರದು, ಇಲ್ಲದಿದ್ದರೆ ನಮ್ಮ ಕೆಲಸಗಳಲ್ಲಿ ಹಿನ್ನಡೆಯಾಗುತ್ತದೆ ಎಂದು ನಂಬಿರುವರು. ಪದೇ ಪದೇ ಮನೆಯಲ್ಲಿ ಜಗಳವಾಡುವದು ದುಷ್ಟ ಶಕ್ತಿಗಳನ್ನು ಮನೆಗೆ ಆಹ್ವಾನಿಸಿದಂತೆ ಎಂದು ನಂಬಿರುವರು.

**ಕೋಷ್ಟಕ–೩.೧೫**
**ದೇವರನ್ನು ಆರಾಧಿಸಲು ಅನುಸರಿಸುವ ಮಾರ್ಗದ ಪ್ರಮಾಣ**

| ಕ್ರ.ಸಂ. | ಅನುಸರಿಸುವ ಮಾರ್ಗ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಪೂಜಾ ವಿಧಾನ | ೧೬೮ | ೫೬.೦೦ |
| ೨ | ಪ್ರಾರ್ಥನೆ | ೬೦ | ೨೦.೦೦ |
| ೩ | ಹರಕೆ | ೨೪ | ೮.೦೦ |
| ೪ | ಪ್ರಾಣಿಬಲಿ | ೬ | ೨.೦೦ |
| ೫ | ಎಲ್ಲವೂ | ೨೧ | ೭.೦೦ |
| ೬ | ೧ ಮತ್ತು ೨ನ್ನು | ೨೧ | ೭.೦೦ |
| | ಒಟ್ಟಾರೆ | ೩೦೦ | ೧೦೦.೦೦ |

ಈ ಮೇಲಿನ ಕೋಷ್ಟಕದಲ್ಲಿ ಮಾಹಿತಿದಾರರು ದೇವರನ್ನು ಆರಾಧಿಸಲು ಅನುಸರಿಸಿರುವ ಮಾರ್ಗಗಳ ಬಗ್ಗೆ ವಿವರ ನೀಡಲಾಗಿದ್ದು, ಹಿಂದೆ ಕುಣಬಿಗರು ತಮ್ಮ ದೇವಾನು ದೇವತೆಗಳನ್ನು ಆರಾಧಿಸಲು ತಮ್ಮದೇಯಾದ ಪದ್ಧತಿಗಳನ್ನು ಹೊಂದಿದ್ದವರಾಗಿದ್ದರು. ಕೆಲವರು ದೇವರಿಗೆ ಬಲಿ

ಕೊಡುವುದರ ಮುಖಾಂತರ ತಮ್ಮ ಹರಕೆಗಳನ್ನು ಮುಟ್ಟಿಸುತ್ತಿದ್ದರು. ಮತ್ತೆ ಕೆಲವರು ದೇವ ದೇವತೆಗಳಿಗೆ ಪೂಜೆ ಸಲ್ಲಿಸುವವರಾಗಿದ್ದರು. ಆದರೆ ಇತ್ತೀಚಿನ ದಶಕಗಳಲ್ಲಿ ಕುಣಬಿಗಳು ತಮ್ಮದೇ ಆದ ಪೂಜಾ ವಿಧಾನಗಳನ್ನು ತಮ್ಮ ವಾಸಿಸುವ ಪ್ರದೇಶಗಳಿಗೆ ಅನುಗುಣವಾಗಿ ಪರಿವರ್ತನೆಯನ್ನು ಮಾಡಿಕೊಂಡಿದ್ದಾರೆ. ಈಗ ಮಾಹಿತಿದಾರರು ಅನುಸರಿಸಿರುವ ಮಾರ್ಗಗಳಲ್ಲಿ ಅತಿ ಹೆಚ್ಚೆಂದರೆ ಪ್ರತಿಶತ ೫೬ ರಷ್ಟು ಜನ ಪೂಜಾ ವಿಧಾನಗಳನ್ನು ಮಾತ್ರ ಅನುಸರಿಸುವವರಾಗಿದ್ದಾರೆ, ಅಲ್ಲದೆ ಪ್ರಾರ್ಥನೆಯನ್ನು ಪ್ರತಿಶತ ೨೦ ರಷ್ಟು ಜನ ಅನುಸರಿಸುವ ಮೂಲಕ ಆರಾಧನೆಯನ್ನು ಕೈಗೊಳ್ಳುತ್ತಾರೆ. ಜೊತೆಗೆ ಪ್ರತಿಶತ ೮ ರಷ್ಟು ಜನ ಹರಕೆ ತೀರಿಸುವುದರ ಮುಖಾಂತರ, ಪ್ರತಿಶತ ೨ ರಷ್ಟು ಜನ ಪ್ರಾಣಿ ಬಲಿಯನ್ನು ಕೊಡುವುದರ ಮೂಲಕ ದೇವರನ್ನು ಆರಾಧಿಸುವವರಾಗಿದ್ದಾರೆ. ಆದರೆ ಒಟ್ಟಾರೆಯಾಗಿ ಪೂಜಾ ವಿಧಾನ, ಪ್ರಾರ್ಥನೆ, ಹರಕೆ ಹಾಗೂ ಪ್ರಾಣಿ ಬಲಿ ಮುಂತಾದ ಮಾರ್ಗಗಳನ್ನು ಪ್ರತಿಶತ ೭ ರಷ್ಟು ಹಾಗೂ ಪೂಜಾ ವಿಧಾನ ಮತ್ತು ಪ್ರಾರ್ಥನೆ ಎರಡನ್ನೂ ಪ್ರತಿಶತ ೭ ರಷ್ಟು ಜನರು ದೇವರನ್ನು ಆರಾಧಿಸಲು ಬಳಸುವ ಮಾರ್ಗಗಳಾಗಿವೆ. ಒಟ್ಟಾರೆಯಾಗಿ ಕುಣಬಿಯರು ಪ್ರಾಣಿ ಬಲಿಯನ್ನು ನಿಗದಿಸಿದ್ದು, ಪೂಜಾ ವಿಧಾನವನ್ನು ಅನುಸರಿಸುತ್ತಿದ್ದು, ಆಧುನಿಕ ಯುಗದತ್ತ ಪಯಣಿಸುತ್ತಿದ್ದಾರೆ ಎಂಬುದು ತಿಳಿದು ಬರುತ್ತದೆ.

**ಧಾರ್ಮಿಕ ಆಚರಣೆಗಳು ಮತ್ತು ಹಬ್ಬಗಳು**

'ಹಬ್ಬ ಹರಿದಿನಗಳು, ಭಕ್ತಿ, ಧರ್ಮ ಮತ್ತು ವ್ರತಾಚರಣೆಗೆ ಸಂಬಂಧಿಸಿದ ಶುಭ ದಿನಗಳು ಹಾಗೂ ಸಂಸ್ಕೃತಿ, ಸಂವರ್ಧಕ ದಿನಗಳು ಆಗಿವೆ. ಇವುಗಳ ಆಚರಣೆಯು ಪವಿತ್ರವಾಗಿದೆ, 'ಇಹ'ದ ಬದುಕಿಗೂ, 'ಪರ'ದ ಚಿಂತನೆಗೂ ಇವು ಸಾಧನೋಪಾಯಗಳು, ಹಿಂದೂಗಳಾದ ನಮಗೆ ಧರ್ಮವೇ ಬಾಳಿನ ಉಸಿರು: ಕರ್ಮದ ಕುಶಲತೆಯೇ ಬಾಳಿನ ತಂತ್ರ, ಜ್ಞಾನಪೂರ್ಣ ಜಗದ ಜ್ಯೋತಿಯ ಅರಿವೆ ತುತ್ತತುದಿ. ಅಂತೆಯೇ ಹಬ್ಬ ಹರಿದಿನಗಳ ಆಚರಣೆ ವಿಶಿಷ್ಟವಾದುದಾಗಿದೆ, ಮಹತ್ವಪೂರ್ಣವಾಗಿದೆ'.[೨೫]

ಭಾರತವು ಒಂದು ಜಾತ್ಯಾತೀತ ರಾಷ್ಟ್ರವಾಗಿದೆ, ಅಲ್ಲದೆ ಹಲವಾರು ಭಾಷೆ, ಸಮುದಾಯ, ಧರ್ಮ ಮುಂತಾದವುಗಳನ್ನು ಒಳಗೊಂಡಂತಹ ದೇಶವಾಗಿದೆ. ಅಲ್ಲದೆ ತನ್ನ ಒಡಲಾಳದಲ್ಲಿ ನೂರಾರು ಸಂಸ್ಕೃತಿಗಳನ್ನು ಪೋಷಿಸಿಕೊಂಡು ಬಂದಿದೆ. ಭಾರತದಲ್ಲಿನ ಜನಸಮುದಾಯಗಳ ವಿಶಿಷ್ಟ ಸಾಂಸ್ಕೃತಿಕ ಪರಂಪರೆಗಳು ಆಯಾ ಜನ ಸಮುದಾಯದ ಅಪ್ರಜ್ಞಾಪೂರ್ವಕ ಸ್ಥಿತಿಯಲ್ಲಿ ಸಂರಕ್ಷಿತಗೊಂಡು ಪ್ರವಹಿತವಾಗಿವೆ. ಈ ಪರಂಪರೆಯ ಯಾವುದೇ ಒಂದು ಅಂಗ ಊನವಾದರೂ ಆಂತರಿಕ ವ್ಯವಸ್ಥೆಯನ್ನು ಕಾಯ್ದುಕೊಳ್ಳಲು ಉತ್ಸುಕ ಜನಸಮುದಾಯ ಅದನ್ನು

ಅತ್ಯಂತ ಮುತುವರ್ಜಿಯಿಂದ ಸರಿಪಡಿಸಲು ಪ್ರಯತ್ನಿಸುತ್ತದೆ. ಒಂದು ಜನಸಮುದಾಯವು ಆಚರಿಸುವ ಹಬ್ಬಗಳು ಸಾಮಾಜಿಕವೂ, ಸಾರ್ವತ್ರಿಕವೂ ಆದವುಗಳಾಗಿರುತ್ತವೆ. ಜಗತ್ತಿನ ಎಲ್ಲ ಕಡೆಗಳಲ್ಲಿ ಕಂಡುಬರುವ ಹಬ್ಬ ಹರಿದಿನಗಳು, ಜಾತ್ರೆಗಳು ವಿಶಿಷ್ಟವಾದಂತಹ ಸ್ಥಾನಮಾನಗಳನ್ನು ಹೊಂದಿರುವುದು ಕಂಡುಬರುತ್ತದೆ. ಅವುಗಳು ಆಯಾ ಸಮುದಾಯಕ್ಕನುಗುಣವಾಗಿ ಆಚರಣೆಗಳನ್ನು ಒಳಗೊಂಡಿರುತ್ತವೆ ಅಂತೆಯೇ ಕುಣಬಿ ಜನಸಮುದಾಯದಲ್ಲಿಯೂ ಸಹ ಹಬ್ಬ ಹರಿದಿನಗಳು, ಜಾತ್ರೆಗಳು ಮತ್ತು ಧಾರ್ಮಿಕ ಆಚರಣೆಗಳಾದ, ಜನನ ಪೂರ್ವದ ಹಾಗೂ ಜನನದ ನಂತರದ ಆಚರಣೆಗಳಾದ, ಮೊದಲ ಬಸುರಿತನದ ಕಾರ್ಯಗಳು, ಮಗು ಹುಟ್ಟಿದ ನಂತರದ ಸಂಪ್ರದಾಯಗಳು, ಮಗುವಿನ ಹೆಸರಿಡುವ ಆಚರಣೆ, ಕಿವಿ ಚುಚ್ಚುವ ಶಾಸ್ತ್ರ, ಮರಣದ ನಂತರದ ವಿಧಿ-ವಿಧಾನಗಳನ್ನು ವಿಶಿಷ್ಟವಾದ ರೀತಿಯಲ್ಲಿ ಆಚರಿಸುವ ಸಂಪ್ರದಾಯವಾಗಿದೆ. ಕುಣಬಿಯರು ದೇಶದ ವಿವಿಧೆಡೆಗಳಲ್ಲಿ ಹೆಚ್ಚಾಗಿ ಕಂಡುಬಂದರೂ, ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಸಿಸುವ ಇವರು ವಿಶಿಷ್ಟ ಹಬ್ಬಗಳನ್ನು ವಿಜೃಂಬಣೆಯಿಂದ ಆಚರಿಸುತ್ತಿದ್ದಾರೆ.

**ಹಬ್ಬಗಳು**

ಕುಣಬಿ ಸಮುದಾಯಕ್ಕೆ ವಿಶಿಷ್ಟವಾದ ಹಬ್ಬ, ಜಾತ್ರೆಗಳು ನಡೆಯುತ್ತವೆ. ದಸರಾ ಸಮಯದಲ್ಲಿ ದಾಂಡೆಲಪ್ಪನ ದೊಡ್ಡ ಜಾತ್ರೆ ನಡೆಯುತ್ತದೆ. ಕಾಫ್ರಿ ದೇವರಿಗೆ ಜೋಯಿಡಾ ಹತ್ತಿರ ದೊಡ್ಡ ಜಾತ್ರೆ ಆಗುತ್ತದೆ, ಹಾಗೆಯೇ ಕುಣಬಿಗಳ ಸ್ತ್ರೀ ದೇವತೆಗಳಾದ ಗೌಳಾದೇವಿ ಜಾತ್ರೆ, ಸುಗ್ಗಿಯಲ್ಲಿ ನಡೆಯುತ್ತದೆ. ಈ ಕಾಫ್ರಿ ಅಥವಾ ಗೌಳಾದೇವಿ ಜಾತ್ರೆಗಳು ಸಂಪೂರ್ಣವಾಗಿ ಕುಣಬಿ ಸಮುದಾಯಕ್ಕೆ ಮೀಸಲಾದವುಗಳಾಗಿವೆ. ಕಾರ್ತಿಕ ಹುಣ್ಣಿಮೆ ದಿನ ನಡೆಯುವ ಕಾಫ್ರಿ ಜಾತ್ರೆಯಲ್ಲಿ ಕಾಫ್ರಿ ದೇವರಿಗೆ ಕಂಬಳಿ ಹೊದಿಸುವ ಸಂಪ್ರದಾಯವಿದೆ. ಅಂದು ಅನೇಕಾನೇಕ ಭಕ್ತರು ದೇವರಿಗೆ ಕಂಬಳಿ ದಾನ ಮಾಡುತ್ತಾರೆ.

ಸಾಮಾನ್ಯವಾಗಿ ಹಿಂದುಗಳು ಆಚರಿಸುವ ಹಬ್ಬಗಳನ್ನೇ ಸ್ವಲ್ಪ ವಿಭಿನ್ನ ರೀತಿಯಲ್ಲಿ ಕುಣಬಿಯರು ಆಚರಿಸುವರು. ಮುಖ್ಯವಾದ ಹಬ್ಬಗಳೆಂದರೆ ಹೋಳಿ ಕುಣಬಿಯರ ಸಡಗರದ ಸಂಭ್ರಮದ ಹಬ್ಬ. ಹೋಳಿ ಹಬ್ಬದಲ್ಲಿ 'ಹೋಳಿಸಿಗ್ಮ' ಕುಣಿತ ಅತ್ಯಂತ ವಿಶಿಷ್ಟವಾದದ್ದು. 'ದೀಪಾವಳಿ' ಕೂಡ ಕುಣಬಿಯರಿಗೆ ತುಂಬಾ ಮುಖ್ಯವಾದ ಹಬ್ಬ, ಈ ಹಬ್ಬದಲ್ಲಿ ಗಂಡಸರು ಗುಮಟೆ ಬಾರಿಸಿದರೆ ಹೆಂಗಸರು ಆ ಗುಮಟೆ ಸದ್ದಿಗೆ ತಕ್ಕಂತೆ 'ದಿವಾಳಿ ಚೌಕೇಳ' ಎಂಬ ದೀಪಾವಳಿ ನೃತ್ಯ ಪ್ರದರ್ಶಿಸುತ್ತಾರೆ. ನೂಲ ಹುಣ್ಣಿಮೆ, ನಾಗರಪಂಚಮಿ, ಚೌತಿ ಕುಣಬಿಯರ ಮತ್ತೊಂದು ಪ್ರಮುಖ ಹಬ್ಬ. ಈ ಸಂದರ್ಭದಲ್ಲಿ ಗಂಡಸರು ಮತ್ತು ಹೆಂಗಸರು ಪ್ರತ್ಯೇಕವಾಗಿ

ಮಗಡಿ ಕುಣಿತ ನಡೆಸಿಕೊಡುತ್ತಾರೆ. ಕೈಯಲ್ಲಿ ಮಣ್ಣಿನ ಕೊಡಗಳನ್ನು ಹಿಡಿದು ವೃತ್ತಾಕಾರವಾಗಿ ಸುತ್ತುತ್ತ ಕುಣಿಯುವ ಈ ನೃತ್ಯ ಕೂಡ ತುಂಬಾ ಆಕರ್ಷಕವಾದದ್ದು.

**ಕೋಷ್ಟಕ-೩.೧೬**
**ಕುಣಬಿಯರ ಗುಡಿಗಳು**

| ಕ್ರಸಂ. | ದೇವರ/ಗುಡಿಯ ಹೆಸರು | ಊರು | ತಾಲೂಕು |
|---|---|---|---|
| ೧ | ಕೆಲ್‌ಬಾಯಿ ಸಾತ್ತೇರಿ (ತಾಯಿ ದೇವರು) | ಕುರ್ತಿ | ಪೋಂಡಾ |
| ೨ | ಮಲ್ಲಿಕಾರ್ಜುನ (ಶಿವ) | ಶ್ರೀಸ್ಥಳ | ಕಾಣಕೋಣ |
| ೩ | ಸೋಮನಾಥ (ಶಿವ) | ಕೊಂಪದವ್ | ಮಂಗಳೂರು |
| ೪ | ಮಲ್ಲಿಕಾರ್ಜುನ (ಶಿವ) | ಎಡ್‌ಥಡೀ | ಉಡುಪಿ |
| ೫ | ಭ್ರಹ್ಮದುರ್ಗಾ (ತಾಯಿ ದೇವರು) | ಪಾಜ್ | ಪೋಂಡಾ |
| ೬ | ಭಗವತಿ (ತಾಯಿ ದೇವರು) | ಪಾನ್‌ಚಾವಡಿ | ಪೋಂಡಾ |
| ೭ | ನವದುರ್ಗಾ (ತಾಯಿ ದೇವರು) | ಮಡಕಾಲು | ಪೋಂಡಾ |

ತಿಳುವಳಿಕೆ ನೀಡಿದವರು : ಕೃಷ್ಣಾ ಬಿವಾ ವೇಳಿಪ

**ಹಬ್ಬ ಹರಿದಿನಗಳಲ್ಲಾದ ಬದಲಾವಣೆ**

ಮಾಹಿತಿದಾರರ ಪೂರ್ವಜರು ಆಚರಿಸುತ್ತಿದ್ದ ಹಬ್ಬಗಳು ಅತ್ಯಂತ ಸಡಗರ ಸಂಭ್ರಮದಿಂದ ಕೂಡಿರುತ್ತಿದ್ದವು ಹಾಗೂ ಧಾರ್ಮಿಕತೆಯನ್ನು ಹೊಂದಿದವುಗಳಾಗಿದ್ದವು. ಆದರೆ ಇಂದು ಮಾಹಿತಿದಾರರು ಆಚರಿಸುವ ಹಬ್ಬಗಳಿಗೂ ಹಾಗೂ ಅವರ ಪೂರ್ವಜರು ಆಚರಿಸುವ ಹಬ್ಬಗಳಿಗೂ ಅಜಗಜಾಂತರ ವ್ಯತ್ಯಾಸ ಇರುವುದು ಕಂಡುಬರುತ್ತದೆ. ದೇವರಲ್ಲಿ ನಂಬಿಕೆ ಕಡಿಮೆಯಾಗಿದ್ದು, ಹಬ್ಬಗಳ ಆಚರಣೆಯು ಕುಟುಂಬದಿಂದ ಸಾಮೂಹಿಕವಾಗಿ ಬದಲಾವಣೆಯಾಗುತ್ತಿದೆ. ಹಿಂದೆ ವಿಜೃಂಬಣೆಯಿಂದ ಆಚರಿಸುವ ಹಬ್ಬಗಳು ಇಂದು ಹೆಚ್ಚಿನ ವಿಜೃಂಬಣೆಯನ್ನು ಹೊಂದಿಲ್ಲ, ಆದರೆ ಕೆಲವು ಹಬ್ಬಗಳು ಮಾತ್ರ ವಿಜೃಂಬಣೆಯನ್ನು ಹೊಂದಿರದೆ ಇದ್ದು, ಅವುಗಳ ಆಚರಣೆಯನ್ನು ಅತ್ಯಾವಶ್ಯಕವಾಗಿ ಮಾಡಲೇಬೇಕಾದ ಧಾರ್ಮಿಕತೆಯನ್ನು ಹೊಂದಿವೆ. ಇಂದು ಕೆಲವು ಹಬ್ಬಗಳು ಸಡಗರ ಸಂಭ್ರಮದಿಂದ ಕೂಡಿದವುಗಳಾಗಿವೆ. ಈ ಮೇಲಿನ ಮಾಹಿತಿಯಿಂದ ಕುಣಬಿಗರು ಹಬ್ಬಗಳ ಆಚರಣೆಯಲ್ಲಿ ಪೂರ್ವಜರ ಕಾಲಕ್ಕಿಂತಲೂ ಪರಿವರ್ತನೆಯನ್ನು ಹೊಂದಿರುವುದನ್ನು ತಿಳಿಯಬಹುದಾಗಿದೆ.

ಕೋಷ್ಟಕ-೩.೧೭
ಹಬ್ಬಗಳನ್ನು ಸಡಗರ ಸಂಭ್ರಮದಿಂದ ಆಚರಿಸುವ ಪ್ರಮಾಣ

| ಕ್ರ.ಸಂ. | ಆಚರಿಸುವವರು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಹೌದು | ೧೮೦ | ೬೦.೦೦ |
| ೨ | ಇಲ್ಲ | ೧೨೦ | ೪೦.೦೦ |
| | ಒಟ್ಟಾರೆ | ೩೦೦ | ೧೦೦.೦೦ |




ಈ ಮೇಲಿನ ಕೋಷ್ಟಕದಲ್ಲಿ ಅಂದರೆ ಎಲ್ಲ ಮಾಹಿತಿದಾರರು ಎಲ್ಲಾ ಹಬ್ಬಗಳನ್ನು ಅತಿಯಾದ ವಿಜೃಂಬಣೆಯಿಂದ ಆಚರಿಸುವುದಿಲ್ಲ, ಅಂದರೆ ಪ್ರತಿಶತ ೬೦ ರಷ್ಟು ಮಾಹಿತಿದಾರರು ಮಾತ್ರ ಹಬ್ಬಗಳನ್ನು ಸಡಗರ, ಸಂಭ್ರಮದಿಂದ ಆಚರಿಸುವವರಾಗಿದ್ದಾರೆ. ಆದರೆ ಪ್ರತಿಶತ ೪೦ ರಷ್ಟು ಮಾಹಿತಿದಾರರು ಹಬ್ಬಗಳನ್ನು ಅತಿಯಾದ ಸಡಗರ ಸಂಭ್ರಮಗಳಿಂದ ಆಚರಿಸುವುದಿಲ್ಲವೆಂದು ತಿಳಿಸಿದ್ದಾರೆ.

ಒಟ್ಟಾರೆಯಾಗಿ ಮಾಹಿತಿದಾರರು ನೀಡಿರುವ ಅಭಿಪ್ರಾಯದಲ್ಲಿ ಅವರ ಪೂರ್ವಜರು ಹೊಂದಿರುವ ಧಾರ್ಮಿಕ ನಂಬಿಕೆ, ದೇವರಲ್ಲಿ ಭಕ್ತಿ, ಹಬ್ಬ ಹರಿದಿನಗಳು, ಅವುಗಳ ಆಚರಣೆ, ಮೂಢನಂಬಿಕೆಗಳು ಮುಂತಾದವುಗಳನ್ನು ಅರಿತುಕೊಂಡಾಗ ಪರಿವರ್ತನೆಗಳು ಆಗಿವೆ.

ಕಾಲಕಾಲಕ್ಕನುಗುಣವಾಗಿ ದೊರೆಯುತ್ತಿರುವ ಸೌಲಭ್ಯಗಳು ಮನುಷ್ಯನನ್ನು ಪರಿವರ್ತನೆಯತ್ತ ಸಾಗಿಸುತ್ತಿರುವವು. ಮಾನವನಿಗೆ ಕಾಲದಿಂದ ಕಾಲಕ್ಕೆ ದೊರೆಯುತ್ತಿರುವ ಶಿಕ್ಷಣ, ಆರ್ಥಿಕ ಪರಿಸ್ಥಿತಿಯ ಸುಧಾರಣೆ, ಕೈಗಾರೀಕರಣ, ನಗರೀಕರಣ, ವಿಜ್ಞಾನದ ಬೆಳವಣಿಗೆ, ತಂತ್ರಜ್ಞಾನದ

ಬೆಳವಣಿಗೆ, ಪಾಶ್ಚಾತ್ಯೀಕರಣ, ಜಾಗತೀಕರಣಗಳ ಪ್ರಭಾವವು ಅಗಾಧವಾಗಿರುವುದು. ಈ ಮುಂತಾದ ಕಾರಣಗಳಿಂದ ಮಾಹಿತಿದಾರರು ಅವರ ಪೂರ್ವಜರಿಗಿಂತ ಪರಿವರ್ತನೆಯನ್ನು ಹೊಂದಿರುವುದು ಈ ಅಧ್ಯಯನದಿಂದ ಕಂಡುಬಂದಿದೆ.

**೩.೧೨ ಸಾಮಾಜಿಕ ನಿರ್ಬಂಧಗಳು**

ಕುಣಬಿ ಸಮುದಾಯದ ಆಚರಣೆಗಳಲ್ಲಿ, ಹಬ್ಬಗಳಲ್ಲಿ ಎಲ್ಲದರಲ್ಲೂ ಶಿಸ್ತು ಪರಿಪಾಲನೆ ನಿರ್ಬಂಧಗಳಿವೆ. 'ಪಂಚಮುಖಿ ಪರಮೇಶ್ವರ' ಎನ್ನುವ ವ್ಯವಸ್ಥೆ ಐದು ಜನರು ಕೂಡಿರುವ ನ್ಯಾಯ ವ್ಯವಸ್ಥೆಯಾಗಿದ್ದು, ಅವರ ತೀರ್ಮಾನವೇ ಅಂತಿಮವಾಗಿರುತ್ತದೆ. ಬುಡಕಟ್ಟು ಕಟ್ಟಳೆಗಳು ನಿರ್ಬಂಧಗಳನ್ನು ಕುಣಬಿಯರು ತಮ್ಮದೇ ಆದ ಚೌಕಟ್ಟಿನಲ್ಲಿ ನಿರ್ಧರಿಸಿಕೊಳ್ಳುತ್ತಾರೆ. ಉಳಿದಂತೆ ಸಾಮಾಜಿಕ ನಿರ್ಬಂಧನೆಗಳು ಈ ಕೆಳಗಿನಂತಿವೆ.

**ದೇವರು:** ಕುಣಬಿಯರ ದೇವರಿಗೆ ದೇವಸ್ಥಾನಗಳಲ್ಲಿ ಸರಿಯಾದ ಮುಖಗಳಿಲ್ಲ ಎಂಬುದು ಸ್ಪಷ್ಟವಾಗಿದೆ. ಯಾರಿಗೂ ದೇವರ ಮುಖವನ್ನು ತೋರಿಸುವುದಿಲ್ಲ. ಉದಾಹರಣೆಗೆ: ಮಲ್ಲಿಕಾರ್ಜುನ, ಸಿದ್ಧನಾಥ, ಸಿದ್ಧೇಶ್ವರ, ಕಾಪ್ರಿ, ಸೋಮನಾಥ, ಕಲ್ಲಿನಾಥ ಎಂಬ ಹೆಸರಿನಲ್ಲಿ ಶಿವನನ್ನು ಕರೆಯುತ್ತಾರೆ. ಸ್ತ್ರೀ ದೇವರುಗಳಾದ: ಚಾಪಲಾದೇವಿ, ದುರ್ಗಾ, ಸಾತೇರ, ಗೌಳಾದೇವಿ, ಮಹಾಮಾಯೆ, ಎಂಬ ಹೆಸರಿನ ಸ್ತ್ರೀ ಶಕ್ತಿ ದೇವತೆಗಳನ್ನು ಆರಾಧಿಸುತ್ತಾರೆ. ಹಿಂದು ದೇವರು ಯಾವುದೇ ಆಗಲಿ ದೇವಸ್ಥಾನಗಳಿಗೆ ಹೋಗಿ ಬರುತ್ತಾರೆ. ತಮ್ಮ ದೈವದ ಆಚರಣೆಯಲ್ಲಿ ಮಾತ್ರ ನಿರ್ಬಂಧನೆಗಳನ್ನು ಪಾಲಿಸುತ್ತಾರೆ.

**ಆಹಾರ :** ಕುಣಬಿಯರ ಆಹಾರ ಬೆಳೆಯಾಗಿ ಭತ್ತ, ರಾಗಿ, ತರಕಾರಿ, ಹಣ್ಣುಗಳು, ಕೇಸು, ಬೇರುಗೆಣಸನ್ನು ಬೆಳೆಯುವರು. ಬೇಟೆಗಾರಿಕೆ ಮತ್ತು ಮೀನುಗಾರಿಕೆ ಅವರಿಗೆ ಅವಶ್ಯಕವಾಗಿದ್ದು, ಸಾಕು ಪ್ರಾಣಿಗಳ ಮಾಂಸವನ್ನು ಸೇವಿಸಲು ನಿರ್ಬಂಧವಿದೆ. ಅಲ್ಲಿಯೂ ಸಾಮಾಜಿಕವಾಗಿ ಒಪ್ಪಿಗೆಯಾದ ಅಡುಗೆ ಪದ್ಧತಿಯನ್ನೇ ಅನುಸರಿಸಬೇಕಾಗುತ್ತದೆ.

**ಶಿಕ್ಷಣ :** ಇವರಲ್ಲಿ ವಿದ್ಯಾವಂತರ ಸಂಖ್ಯೆ ಕಡಿಮೆ ಇದೆ, ಯಾಕೆಂದರೆ ಕಾಡಿನ ಮಧ್ಯ ಜೀವನ ಸಾಗಿಸುವವರಾದ ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸುವುದು ತುಂಬಾ ಕಷ್ಟವಾಗಿತ್ತು. ಹಾಗೂ ಶಾಲೆಗಳು ದೂರ ಇರುವುದರಿಂದ ಇವರಲ್ಲಿ ಶಿಕ್ಷಣದ ಗುಣಮಟ್ಟ ಬಹಳ ಕಡಿಮೆಯಾಗಿತ್ತು, ಈಗ ಸ್ವಲ್ಪ ವಿದ್ಯಾವಂತರಾಗಿದ್ದಾರೆ. ಪ್ರಾಥಮಿಕ ಅಥವಾ ಪ್ರೌಢ ಶಿಕ್ಷಣ ಮುಗಿಸುವದೇ ತಡ ಉದ್ಯೋಗಕ್ಕಾಗಿ ನೆರೆಯ ರಾಜ್ಯ ಗೋವಾಕ್ಕೆ ಹೋಗುವರು.

ಕುಣಬಿಯರ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳಗಿನ ವ್ಯಕ್ತಿಗಳು ಪ್ರಮುಖರಾಗಿದ್ದಾರೆ.

೧. ಬುದವಂತ ೨. ಮಿರಾಶಿ ೩. ವೇಳಿಪ್ ೪. ಗಾವುಡ

೧. **ಬುದವಂತ:** ಇವನು ಕುಣಬಿಯರ ಪ್ರಮುಖನಾಗಿದ್ದು, ಸಾಮಾಜಿಕ, ಧಾರ್ಮಿಕ, ನ್ಯಾಯ ವ್ಯವಸ್ಥೆಯನ್ನು ಎತ್ತಿ ಹಿಡಿಯುವ ಗೌರವ ಘನತೆಯುಳ್ಳ ನಾಯಕನಾಗಿರುತ್ತಾನೆ.

೨. **ಮಿರಾಶಿ:** 'ಮಿರಾಶಿ' ಅನ್ನುವ ಮುಖಂಡ ಕುಣಬಿಯರ ಧಾರ್ಮಿಕ, ಸಾಮಾಜಿಕ ಹಾಗೂ ವೈವಾಹಿಕ ಕಾರ್ಯಗಳಲ್ಲಿ ಇವನು ಇಲ್ಲದಿದ್ದರೆ, ಯಾವ ಕಾರ್ಯವೂ ನಡೆಯುವುದಿಲ್ಲ, ಆದ್ದರಿಂದ ಮಿರಾಶಿ ಕುಣಬಿಯರಲ್ಲಿ ಪ್ರಮುಖನಾಗಿರುತ್ತಾನೆ. ಉತ್ತರ ಕನ್ನಡದ ಉಳಿದ ಜನಾಂಗಗಳಲ್ಲಿಯೂ ಈ 'ಮಿರಾಶಿ' ಪದ ಬಳಕೆಯಲ್ಲಿರುವುದು ಕಂಡುಬಂದಿದೆ.

೩. **'ವೇಳಿಪ್' ಮತ್ತು ಮಿರಾಶಿ:** ಇವರಿಬ್ಬರೂ ಗ್ರಾಮದ ನ್ಯಾಯಿಕ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಬುದವಂತನಿಗೆ ಸಹಾಯ ನೀಡುವರು. ತಪ್ಪು ಮಾಡಿದವರಿಗೆ ಶಿಕ್ಷೆ ನೀಡುವ ಅಧಿಕಾರವನ್ನು ಬುದವಂತ ಮತ್ತು ಮಿರಾಶಿಗೆ ವಹಿಸಿರುತ್ತಾರೆ.

೪. **ಗಾವುಡ:** ಚಿಕ್ಕ–ಪುಟ್ಟ ಜಗಳ, ಸರಾಯಿ ಕುಡಿಯುವುದು, ಕದ್ದು ಬಸುರಿಯಾಗುವುದು ಮುಂತಾದ ಅಪರಾಧಗಳನ್ನು ಕುಣಬಿಯರ 'ಗಾವುಡ'ನು ಬಗೆಹರಿಸುತ್ತಾನೆ. ಅಂತರ್‌ಜಾತಿ ವಿವಾಹ, ಅನೈತಿಕ ಸಂಬಂಧ, ಪ್ರೇಮ ಪ್ರಕರಣಗಳು ಮುಂತಾದವುಗಳಿಗೆ ಸಮಾಜದಿಂದ ಬಹಿಷ್ಕಾರ ಹಾಕುವ ಶಿಕ್ಷೆ ಇದೆ. ಪ್ರೇಮ ಪ್ರಕರಣದಿಂದ ತಪ್ಪು ದಂಡ ವಿಧಿಸುವ ಹಾಗೂ ಬ್ರಾಹ್ಮಣರಿಂದ ಶಾಂತಿ ಪೂಜೆ ನಡೆಸುವ ಕ್ರಮವಿದ್ದು, ಅಂತರ್ ಜಾತಿಯ ವಿವಾಹಕ್ಕೆ ಯಾವುದೇ ವಿನಾಯಿತಿ ಇಲ್ಲ. ಒಂದು ಗ್ರಾಮದಲ್ಲಿ ವಾಸಿಸುವವರೆಲ್ಲರೂ ಒಂದೇ ಕುಲದವರು ಎಂಬ ಭಾವನೆಯನ್ನು ಹೊಂದಿರುತ್ತಾರೆ.

**ಕುಣಬಿಯರಲ್ಲಿ ವಿಧಿ ನಿಷೇಧಗಳು**

ಪ್ರತಿಯೊಂದು ಬುಡಕಟ್ಟುಗಳಲ್ಲಿ ವಿಧಿ ನಿಷೇಧಗಳನ್ನು ಪಾಲಿಸಿಕೊಂಡು ಬಂದಿರುವರು. ಈ ನಿಷೇಧಗಳು ಆ ಸಮುದಾಯದ ನಂಬಿಕೆಗಳು, ಆರಾಧನೆಗಳು, ಭೌಗೋಳಿಕ, ಪರಿಸರ, ಇವುಗಳ ಹಿನ್ನಲೆಯಲ್ಲಿ ರೂಪುಗೊಂಡಿದ್ದು, ಈ ನಿಷೇಧಗಳಿಗೆ ಆಯಾ ಸಂಸ್ಕೃತಿಯು ನಿರ್ಧಿಷ್ಟವಾದ ಕಾರಣಗಳನ್ನು ಇಟ್ಟಿರುವರು. ಅದು ಒಳ್ಳೆಯದಿರಲಿ, ಕೆಟ್ಟದಿರಲಿ, ಮೂಢನಂಬಿಕೆಯಾಗಿರಲಿ ಅದನ್ನು ಕುಣಬಿಯರು ಪಾಲಿಸುತ್ತಾರೆ. ಕುಣಬಿಯರಲ್ಲಿ ಇಂತಹ ನಿಷೇಧಗಳು ಈ ರೀತಿಯಾಗಿ ವಿವರಿಸಲಾಗಿದೆ:

೧. ಪ್ರಾಣಿ ಸಂಬಂಧಿ ನಿಷೇಧಗಳು

೨. ಪಕ್ಷಿ ಸಂಬಂಧಿ ನಿಷೇಧಗಳು

೩. ವೃಕ್ಷ ಬಳ್ಳಿ ಸಂಬಂಧಿ ನಿಷೇಧಗಳು

೧. ಪ್ರಾಣಿ ಸಂಬಂಧಿ ನಿಷೇಧಗಳು

ಪ್ರಾಣಿ ಸಂಬಂಧಿ ನಿಷೇಧಗಳಲ್ಲಿ ಆಹಾರಕ್ಕೆ ಸಂಬಂಧಿಸಿದ ನಿರ್ಬಂಧವಿದೆ, ಮನೆಯಲ್ಲಿ ಸಾಕುವ ಯಾವುದೇ ಪ್ರಾಣಿಗಳನ್ನು ಮಾಂಸಕ್ಕಾಗಿ ಉಪಯೋಗಿಸುವದಿಲ್ಲ ಮತ್ತು ಸಾಕುವದಿಲ್ಲ. ವ್ಯವಸಾಯಕ್ಕೆ ಬೇಕಾಗುವ ಎತ್ತು, ಆಕಳು, ಎಮ್ಮೆ, ಮುಂತಾದವುಗಳನ್ನು ಮಾತ್ರ ಸಾಕುವರು.

ಕಾಡು ಹಂದಿ, ಜಿಂಕೆ, ಕಾಡು ಕುರಿ, ಮುಳ್ಳು ಹಂದಿ, ನವಿಲು, ಸಾರಂಗ, ಮೊಲ, ಮೊದಲಾದವುಗಳನ್ನು ಮಾಂಸಕ್ಕಾಗಿ ಉಪಯೋಗಿಸುವರು.

೨. ಪಕ್ಷಿ ಸಂಬಂಧಿ ನಿಷೇಧಗಳು

ಕುಣಬಿಯರು ಮನೆಯಲ್ಲಿ ಸಾಕುವ ಕೋಳಿ (ಪಕ್ಷಿ)ಯನ್ನು ತಿನ್ನುವುದಿಲ್ಲ ಹಾಗೂ ಸಾಕುವುದಿಲ್ಲ. ಮತ್ತು ಅದರ ಮೊಟ್ಟೆಯನ್ನು ಕೂಡ ಉಪಯೋಗ ಮಾಡುವುದಿಲ್ಲ, ಒಂದು ವೇಳೆ ಕೋಳಿಯ ಹಿಕ್ಕಿಯನ್ನು ಮೆಟ್ಟಿದರೆ ಸ್ನಾನಮಾಡಿ ಗೋಮಯವನ್ನು ಮೈಗೆ ಸಿಂಪಡಿಸಿಕೊಂಡು ಮನೆಯ ಒಳಗೆ ಪ್ರವೇಶಿಸಬೇಕು. ಸಾಕು ಪ್ರಾಣಿಗಳು ಪಕ್ಷಿಗಳ ಮಾಂಸವನ್ನು ತಿನ್ನುವವರಿಗೆ ಹಿಂದಿನ ಕಾಲದಲ್ಲಿ ಬಹಿಷ್ಕಾರವನ್ನು ಹಾಕುತ್ತಿದ್ದರು. ಕಾಡು ಕೋಳಿಯನ್ನು ಬಳಸುತ್ತಾರೆ. ಕಾಡಿನಲ್ಲಿ ಸಾಮಾನ್ಯವಾಗಿ ಮಾಂಸಕ್ಕಾಗಿ ಬಳಸುವ ಪಕ್ಷಿಗಳನ್ನು ತಿನ್ನುವುದು, ಆದರೆ ನವಿಲನ್ನು ಬೇಟೆ ಆಡಬಾರದೆಂಬ ನಿಷೇಧವಿದೆ, ಆದರೆ ಆಕಸ್ಮಿಕವಾಗಿ ಬೇಟೆಯಾಡಿದರೆ ತಿನ್ನಬಹುದು. ಮಾಂಸಕ್ಕಾಗಿ ಉದ್ದೇಶಪೂರ್ವಕವಾಗಿ ನವಿಲನ್ನು ಬೇಟೆಯಾಡಬಾರದು.

೩. ವೃಕ್ಷ ಬಳ್ಳಿ ಸಂಬಂಧಿ ನಿಷೇಧಗಳು

ವೃಕ್ಷ, ಬಳ್ಳಿಗೆ ಸಂಬಂಧಿಸಿದಂತೆ ಕಾಸರ್ಕನ ಮರವನ್ನು ಮನೆಯಲ್ಲಿ ಉರಿಸಬಾರದು ಮತ್ತು ಮನೆಯೊಳಗೆ ತರಕೂಡದು. ಇತರ ಜಾತಿಗಳಲ್ಲಿ ಕೂಡ ಇದು ಕಂಡುಬರುತ್ತದೆ.

ಕಾಸರ್ಕನ ಮರದ ಟೊಂಗೆಯನ್ನು ಮನೆಯ ಸುತ್ತ ಇಟ್ಟರೆ, ದೆವ್ವದ ಕಾಟವು ಇರುವುದಿಲ್ಲ ಎಂಬುದು ಅವರ ನಂಬಿಕೆಯಾಗಿದೆ. ಮನೆಯಲ್ಲಿ ಬಾಣಂತಿ ಮಗು ಸ್ನಾನದ ಬಚ್ಚಲು ಮನೆಯ ಹೊರಗೆ ಸಾಮಾನ್ಯವಾಗಿ ಇದನ್ನು ಇಟ್ಟಿರುತ್ತಾರೆ, ಇದರ ಚಿಗುರನ್ನು ಹೆಂಗಸರು ತಮ್ಮ ಗುರುತಿನಲ್ಲಿ ಇರಿಸಿಕೊಳ್ಳುತ್ತಿದ್ದರು ಹಾಗೂ ಸಣ್ಣ ಮಕ್ಕಳನ್ನು ಮನೆಯ ಹೊರಗೆ ಹೋಗುವಾಗ ಅದರ ಎಲೆಯನ್ನು ಸೊಂಟಕ್ಕೆ ಸಿಕ್ಕಿಸುವರು ಇದರಿಂದ ಅನಿಷ್ಟ, ಅಮಂಗಳ ದೂರವಾಗುತ್ತದೆ ಎಂಬ ಬಲವಾದ ನಂಬಿಕೆ ಅವರಲ್ಲಿದೆ.

ತೊಂಡೆಯ ಬಳ್ಳಿಯನ್ನು ಎಲ್ಲಾ ಮನೆಯವರು ನೆಡಬಾರದು, ಒಂದೇ ಕುಟುಂಬದ ಒಳಗೆ ಇರುವ ಯಜಮಾನ ಮಾತ್ರ ತೊಂಡೆಕಾಯಿ ಬಳ್ಳಿಯನ್ನು ನೆಡಬೇಕು. ಈ ನೆಟ್ಟ ತೊಂಡೆಯನ್ನು ಆ ಕುಟುಂಬದ ಎಲ್ಲರೂ ಬಳಸಬಹುದು, ಆದರೆ ಅದನ್ನು ನೆಡುವ ಅಧಿಕಾರ

ಮಾತ್ರ ಆ ಕುಟುಂಬದ ಯಜಮಾನನಿಗೆ ಇರುವುದು. ಅವಿಭಕ್ತ ಕುಟುಂಬಗಳಲ್ಲಿ ಒಟ್ಟಿಗೆ ಅಡಿಗೆ ಮಾಡಿ ಊಟಮಾಡುವದು ಸಂಪ್ರದಾಯ. ಈ ಅಡುಗೆಗೆ ಬೇಕಾದ ತರಕಾರಿಗಳನ್ನು ಕುಟುಂಬದ ಯಾವ ಸದಸ್ಯ ಬೇಕಾದರೂ ನೆಡಬಹುದು. ಆದರೆ ತೊಂಡೆಬಳ್ಳಿಯನ್ನು ಮಾತ್ರ ನೆಡುವಂತಿಲ್ಲ. ತೊಂಡೆಬಳ್ಳಿ ಹುಟ್ಟುವಹಾಗೆ ಈ ಕುಟುಂಬ ಸಮಾನತೆ ಇರುವು, ಕುಟುಂಬದ ಮುಖ್ಯಸ್ಥನೆ ಪ್ರತಿವರ್ಷ ಪ್ರಥಮವಾಗಿ ಭೂಮಿಗೆ ಬೀಜ ಬಿತ್ತುವ ಕಾಯಕ ಮಾಡುತ್ತಾನೆ. ಈ ರೀತಿ ಮುಖ್ಯಸ್ಥನು ಮಾಡದಿದ್ದರೆ, ಇತರ ಸದಸ್ಯರು ಕೃಷಿ ಚಟುವಟಿಕೆ ಮಾಡುವಂತಿಲ್ಲ. ಈ ರೀತಿ ನಿಷೇಧವನ್ನು ಇಟ್ಟುಕೊಂಡಿದ್ದರೆಂದು ತಿಳಿಯುತ್ತದೆ.

**೩.೧೩ ಕುಣಬಿ ಸಮುದಾಯದ (ಸೀಮಾ ಪದ್ಧತಿ) ಜಮ್ಮಾ ಪದ್ಧತಿ**

ಕುಣಬಿಯರ ಅನೇಕ ಕುಳಾವಿಗಳು ಸೇರಿದ 'ಸೀಮೆ' ಒಂದು ವಿಶಿಷ್ಟವಾದ ರೇಖೆ ಹಾಗೂ ವಿವಿಧ ಗಡಿಗಳನ್ನು ಒಳಗೊಂಡಿರುತ್ತದೆ. ಅವರ ಬೇಟೆ, ಕುಮರಿ ಬೇಸಾಯ, ಅವರನ್ನು ಕಾಯುವ ವಿವಿಧ ದೈವಗಳ ವ್ಯಾಪ್ತಿಗಳನ್ನು ಈ ಸೀಮೆ ನಿರ್ಧಿಷ್ಟಪಡಿಸುತ್ತದೆ. ಡಾ. ಎ.ಎಸ್. ಪ್ರಭಾಕರ 'ಆದಿವಾಸಿ ಆಖ್ಯಾನ' ಎಂಬ ಗ್ರಂಥದಲ್ಲಿ ಶ್ರೀ ಬಿ.ಪಿ. ಮಹೇಂದ್ರಕುಮಾರ ರವರ 'ಬುಡಕಟ್ಟು ಜನಾಂಗದಲ್ಲಿ ಸೀಮೆಯ ಪರಿಕಲ್ಪನೆ' ಎಂಬ ಲೇಖನದಲ್ಲಿ ಬರೆದ ಒಂದು ಭಾಗವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

'ಯಾವುದೇ ಬುಡಕಟ್ಟು ಸಮುದಾಯ ತಾವು ತಲತಲಾಂತರಗಳಿಂದ ಜೀವಿಸಿದ ಪರಿಚಿತ ಪರಿಸರದಲ್ಲಿ ತಮ್ಮ ಪೂರ್ಣಮಟ್ಟದ ಬುಡಕಟ್ಟು ಸಂಸ್ಕೃತಿಯ ನೆಮ್ಮದಿಯ ಬದುಕಿನ ಚಟುವಟಿಕೆಗಳಿಗಾಗಿ ತಮಗೆ ಬೇಕಾದಷ್ಟು ಸಂಪನ್ಮೂಲಾಧಾರಿತ ಕಾಡನ್ನು ಹಳ್ಳಿಯ ಸುತ್ತಲು ಸಾಂಪ್ರದಾಯಿಕವಾಗಿ ಗುರುತಿಸಿಕೊಂಡ ಸಾಂಸ್ಕೃತಿಕ ಗಡಿ ರೇಖೆಯನ್ನು ಸೀಮಾ, ಜಮ್ಮಾ, ಗಡಿಯೆಂದು ಕರೆಯಲಾಗುತ್ತದೆ. ಹೀಗೆ ಸಾವಿರಾರು ವರ್ಷಗಳಿಂದಲೂ ನಿರ್ಮಿಸಿಕೊಂಡ ಈ ಗಡಿ ರೇಖೆಯೊಳಗೆ ನಿರ್ಧಿಷ್ಟ ಬುಡಕಟ್ಟು ಸಮುದಾಯ ತನ್ನ ಬದುಕಿದಾಗಿ ಕಾಡಿನ ಉತ್ಪನ್ನ, ಆಹಾರಕ್ಕಾಗಿ ಬೇಸಾಯ ಹಾಗೂ ಇಡೀ ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ಬದುಕಿನ ಅವಿಚ್ಛಿನ್ನ ಚಟುವಟಿಕೆಯ ಭಾಗವಾಗಿರುತ್ತದೆ. ಇದನ್ನೇ ಸೀಮಾ ಪದ್ಧತಿಯೆಂದು ಕರೆಯಲಾಗುತ್ತದೆ. ತಲೆತಲಾಂತರಗಳಿಂದ ಮಡಿದ ಬುಡಕಟ್ಟು ಪೂರ್ವಜರ ಆತ್ಮಗಳು ಈ ಸೀಮಾ ರೇಖೆಯ ಒಳಗಿನ ಕ್ಷೇತ್ರದಲ್ಲಿ ನೆಲೆಸಿದ್ದು, ಕಾಡನ್ನು ಮತ್ತು ಕಾಡಿನ ಸಂಪನ್ಮೂಲಗಳನ್ನು ಬುಡಕಟ್ಟು ಹಳ್ಳಿಯವರಿಗಾಗಿ ರಕ್ಷಿಸುತ್ತಾ ಸಂಚರಿಸುತ್ತಿರುತ್ತವೆ, ಇವರ ಆತ್ಮಗಳು ಹಳ್ಳಿಯ ಗಡಿ ರೇಖೆಯ ಅಂಚುಗಳಲ್ಲಿ ಕಲ್ಲಿನ ಗುಂಡಿನ ರೂಪದಲ್ಲಿಯೂ, ಮರಗಳಲ್ಲಿಯೂ ಇದ್ದು ಸೀಮೆಯನ್ನು ರಕ್ಷಿಸಿತ್ತಾರೆಂಬ ಗಾಢವಾದ ನಂಬಿಕೆಯಿಂದಾಗಿ ಆ ಬುಡಕಟ್ಟು ಸಮುದಾಯಕ್ಕೆ

ಗಡಿಯ ವ್ಯಾಪ್ತಿಯ ಒಳಗಿನ ಬದುಕು ನಿಶ್ಚಿಂತೆಯಿಂದ ಇರುತ್ತದೆ. ಹೀಗೆ ಮಡಿದವರ ಆತ್ಮಗಳಲ್ಲದೇ ಆತ್ಮಗಳನ್ನು ರಕ್ಷಿಸುವ ದೇವತೆಗಳು, ರಕ್ಷಣಾ ದೇವರುಗಳು ಬೇರೆ ಬೇರೆಯವೆ ಇದ್ದು, ಒಂದಕ್ಕೊಂದು ಪರಸ್ಪರ ಪೂರಕವಾಗಿ ಸೀಮಾ ಕ್ಷೇತ್ರದ ವ್ಯಾಪ್ತಿಯ ಸಂರಕ್ಷಣೆಯ ಜವಾಬ್ದಾರಿಯನ್ನು ಹೊಂದಿರುತ್ತವೆ'.[೨೬]

ಯಾವುದೇ ಕುಳಾವಿಯ ಸೀಮೆಯೊಳಗೆ ಬೇರೆ ಸೀಮೆ ಪ್ರವೇಶ ನಿಶದ್ದವಾಗಿರುತ್ತದೆ. ಒಂದು ಕುಳಾವಿಗೆ ಸಂಬಂಧಪಟ್ಟ ಕಾಡಿನ ಸೀಮಾ ಕಾರ್ಯಕ್ಷೇತ್ರ ೨-೫ ಮಿ. ರೇಡಿಯೆಸ್ ನಿಂದ ಹಿಡಿದು ೫.೬ ಕಿ.ಮಿ. ವ್ಯಾಪ್ತಿಯವರೆಗೂ ಆಗಿರಬಹುದಾಗಿದ್ದು, ಅದರ ವ್ಯಾಪ್ತಿಯೊಳಗೆ ಸಂಬಂಧಪಟ್ಟ ಕುಳಾವಿಯ ಅಷ್ಟು ಬುಡಕಟ್ಟು ಸಮುದಾಯದ ಜೀವನ ನೆಮ್ಮದಿಯಿಂದ ನಡೆಯುತ್ತಿರುತ್ತದೆ. ನಿರ್ದಿಷ್ಟ ಕುಳಾವಿಯ ಕಿರು ಅರಣ್ಯ ಉತ್ಪನ್ನಗಳ ಒಡೆತನ ನಿರ್ಧಿಷ್ಟ ಕುಳಾವಿಗೆ ಮಾತ್ರ ಮೀಸಲಿರುತ್ತದೆ. ಅಲ್ಲಿ ಸಿಗುವ ಸೀಗೆ, ಜೇನು, ಮುರುಗಲು, ಅಮಸೋಲ್, ಅಂಟುವಾಳ, ಔಷಧಿ ಸಸ್ಯಗಳು, ಕಾಡು ಮೃಗ ಬೇಟೆ ಹಾಗೂ ಅಪಾರ ಕಾಡಿನ ಉತ್ಪನ್ನಗಳನ್ನು ಬೇರೆ ಕುಳಾವಿಯರು ಪಡೆಯುವ ಹಕ್ಕಿರುವುದಿಲ್ಲ ಹಾಗೂ ಆಕ್ರಮಿಸುವಂತಿಲ್ಲ. ಹಾಗೊಂದು ವೇಳೆ ನಿರ್ಧಿಷ್ಟ ಹಳ್ಳಿಗೆ ಸೇರಿದ ಕಾಡಿನ ಗಡಿ ವ್ಯಾಪ್ತಿಯಲ್ಲಿ ಬೇರೆ ಕುಳಾವಿಯವರಾಗಲಿ ಅಥವಾ ಬೇರೆಯವರಾಗಲಿ ಅತಿಕ್ರಮಣ ಮಾಡಿ ಸಂಪನ್ಮೂಲ ಪಡೆದವರಾದರೆ ಸಂಬಂಧಪಟ್ಟ ಆತ್ಮಗಳು ಅಥವಾ ಗಡಿ ದೇವತೆಗಳು ಸಂಬಂಧಪಟ್ಟವರನ್ನು ಸುಮ್ಮನೆ ಬಿಡುವುದಿಲ್ಲವೆಂಬ ನಂಬಿಕೆ ಅವರಲ್ಲಿ ಗಾಢವಾಗಿವೆ. ಈ ಗಡಿಯೊಳಗಿನ ಸೀಮಾಕ್ಷೇತ್ರಗಳಲ್ಲಿ ಸಂಬಂಧಪಟ್ಟ ಕುಳಾವಿಯವರಾದರು ಆತ್ಮಗಳಿಗೆ, ದೇವತೆಗಳಿಗೆ ಕೇಳದೆ ಕಾಡಿನ ಯಾವುದೇ ಉತ್ಪನ್ನ ತೆಗೆಯುವಹಾಗಿಲ್ಲ. ಒಂದು ಸಣ್ಣ ಸಸಿ ಇರಲಿ, ಒಣಗಿದ ಮರ ಕಡಿಯಬೇಕಾದರೂ ಸಂಬಂಧಪಟ್ಟ ಆತ್ಮಗಳಿಗೆ ಕೇಳಿ ಪೂಜೆ ಮಾಡಿ ಅನುಮತಿ ಪಡೆದ ನಂತರವೇ ಮಾಡಬೇಕಾಗುತ್ತದೆ. ಸಂಬಂಧಪಟ್ಟ ಪೂರ್ವಜರ ಆತ್ಮಗಳು, ಗಡಿ ದೇವತೆಗಳು, ಕುಳಾವಿಯ ಸಮುದಾಯವನ್ನು ಯಾವತ್ತೂ ಕಾಯುತ್ತಿರುತ್ತಾರೆ. ಹಾಗಾಗಿ ಗಡಿ ವ್ಯಾಪ್ತಿಯ ಕ್ಷೇತ್ರದಲ್ಲಿ ಕುಣಬಿ ಬುಡಕಟ್ಟು ಸಮುದಾಯ ಯಾವುದೇ ಭೂತ-ಪ್ರೇತಗಳ, ಕಾಡಿನ ಕೆಟ್ಟ ಮೃಗಗಳ ಭಯವಿಲ್ಲದೆ ನೆಮ್ಮದಿಯಿಂದ ರಾತ್ರಿಯ ವೇಳೆಯಲ್ಲೂ ಸಂಚರಿಸಿರುತ್ತಾರೆ. ಇವರು ಕಾಡನ್ನಷ್ಟೇ ಅಲ್ಲ, ಇವರು ವ್ಯವಸಾಯ ಮಾಡಿರುವ ಕೃಷಿ ಜಮೀನನ್ನು ಕೂಡ ದನಕರು, ಇತರು ಕಾಡು ಮೃಗಗಳಿಂದ ಆತ್ಮಗಳು, ವಾಗ್ರೋಗಳು ಕಾಪಾಡುತ್ತವೆ. ಗಡಿ ರೇಖೆ ಅಂಚುಗಳಲ್ಲಿ ಬೇರೆ ಬೇರೆ ಆತ್ಮಗಳ ಕಲ್ಲುಗಳನ್ನು ಇಟ್ಟು ಗಡಿ ರೇಖೆಯನ್ನು ಗುರುತಿಸಿರುತ್ತಾರೆ. ಕಾಡಿನಲ್ಲಿ ಕುಣಬಿಯ ಪ್ರತಿಯೊಂದು ಹಳ್ಳಿಗಳಿಗೆ ಪ್ರತ್ಯೇಕವಾದ ಗಡಿ ವ್ಯಾಪ್ತಿಯ ಪ್ರದೇಶಗಳಿದ್ದು, ಪ್ರತಿ ಹಳ್ಳಿಗಳಿಗೂ ವಿಭಿನ್ನವಾದ ಆತ್ಮಗಳೂ, ದೇವತೆಗಳೂ, ಗಡಿವ್ಯಾಪ್ತಿ ಪ್ರದೇಶವನ್ನು ರಕ್ಷಿಸುತ್ತಿರುತ್ತವೆ. ಇವುಗಳಿಗೆ

ಪ್ರತಿ ಹಳ್ಳಿಯ ಸಮುದಾಯ ಪೂಜೆಗಳನ್ನು ಹಾಗೂ ಜಾತ್ರೆಗಳನ್ನು ನಡೆಸುತ್ತಿರುತ್ತಾರೆ. ಉದಾಹರಣೆಗೆ: ಜೋಯಿಡಾ ತಾಲೂಕಿನಲ್ಲಿ ವರ್ಷಕ್ಕೊಮ್ಮೆ ಪ್ರಮುಖವಾಗಿ ಜರುಗಿಸಲ್ಪಡುವ ಜಾತ್ರೆಗಳಾದ ಕಾಫ್ರಿ, ಗಾಂಗೋಡಕಾಳ, ಗಾವಳಾದೇವಿ ಜಾತ್ರೆಗಳು ಸೀಮಾ ಪದ್ಧತಿಯ ಗಡಿದೇವತೆಗಳ ಜಾತ್ರೆಗಳಾಗಿವೆ.

ಕಾಫ್ರಿ ಜಾತ್ರೆಯು ಗಾವಡೆವಾಡ ಹಳ್ಳಿಯಲ್ಲಿ ನಡೆಯುತ್ತದೆ. ತುಳಸಿ ಹಬ್ಬದ ಮಾರನೇ ದಿನ ನಡೆಯುವ ಅಂದರೆ ದ್ವಾದಶಿ ಕಾರ್ತಿಕ ಪೂರ್ಣಿಮೆಯ ಮಾರನೆಯ ದಿನ ನಡೆಯುವ ಜಾತ್ರೆಗೆ ಕುಣಬಿ ಬುಡಕಟ್ಟುಗಳಲ್ಲದೆ ತಾಲೂಕಿನ ಎಲ್ಲರೂ ಸಾವಿರಾರು ಸಂಖ್ಯೆಯಲ್ಲಿ ಸೇರಿರುತ್ತಾರೆ. ಕಾಫ್ರಿ ದೇವತೆಗೆ ಹರಕೆ ಹೊತ್ತವರು ಕಂಬಳಿಗಳನ್ನು ದೇವರಿಗೆ ಅರ್ಪಿಸಿರುತ್ತಾರೆ. ಕಾಫ್ರಿ ದೇವರೆಂದರೆ ಗಾಂಗೋಡದ ಪೂರ್ವಜರ ಆತ್ಮಗಳು. ಇವುಗಳು ವರ್ಷಾದ್ಯಂತ ಗಾಂಗೋಡ ಹಳ್ಳಿಗೆ ಸಂಬಂಧಪಟ್ಟ ಕಾಡಿನ ಇಡೀ ಕ್ಷೇತ್ರದ ವ್ಯಾಪ್ತಿಯನ್ನು ಮತ್ತು ಬೆಳೆದ ಪೈರನ್ನು ರಕ್ಷಿಸುತ್ತಿರುತ್ತವೆ. ಕಾಫ್ರಿಗಳಲ್ಲಿ ಎರಡಿದ್ದು ಒಂದು ಹೆಣ್ಣು, ಒಂದು ಗಂಡಾಗಿದೆ. ಒಂದು ಕಾಡಿನ ಗಡಿಯನ್ನು, ಇನ್ನೊಂದು ಹಳ್ಳಿಯನ್ನು ರಕ್ಷಿಸುತ್ತಿರುತ್ತದೆ. ಆದರೆ ತುಳಸಿ ಹಬ್ಬದ ಮಾರನೆಯ ದಿನ ಈ ಎರಡೂ ಕಾಫ್ರಿಯ ಆತ್ಮಗಳು ಮನುಷ್ಯನ ಮೇಲೆ ಬಂದು ಹಳ್ಳಿಯ ಬುಧವಂತನು ತುಳಸಿ ಕಟ್ಟೆಯ ಸುತ್ತ ನರ್ತಿಸತೊಡಗುತ್ತವೆ. ಹಳ್ಳಿಯ ಬುಧವಂತನ (ನಾಯಕ) ಗುಡಿಸಲ ಮುಂದಿನ ತುಳಸಿ ಕಟ್ಟೆಯ ಆವರಣ ಜಾತ್ರೆಯ ಕೇಂದ್ರ ಬಿಂದುವಾಗುತ್ತದೆ. ಮೊದಮೊದಲು ಕುಣಬಿ ಬುಡಕಟ್ಟಿಗೆ ಸೀಮಿತವಾಗಿದ್ದ ಈ ಜಾತ್ರೆ, ಈಗೀಗ ಹೆಚ್ಚು ಹೆಚ್ಚು ಜನಪ್ರಿಯವಾಗುತ್ತಿದ್ದು, ಜಿಲ್ಲೆಯ ವಿವಿಧ ಭಾಗಗಳಿಂದ ಇತರ ಸಹಸ್ರಾರು ಜನ ಈ ಜಾತ್ರೆಗೆ ಆಗಮಿಸಿ ನಡೆದುಕೊಳ್ಳಲು ಶುರುಮಾಡುತ್ತಾರೆ.

ಜಾತ್ರೆಯ ಸಮಯದಲ್ಲಿ ಕುಣಬಿಗಳ ಮೈಮೇಲೆ ಬರುವ ಕಾಫ್ರಿ ಆತ್ಮಗಳ ದೇಹವನ್ನು ಎಲ್ಲಿಯೂ ಜಾಗ ಬಿಡದಂತೆ ಕಂಬಳಿಯಿಂದ ಪೂರ್ಣವಾಗಿ ಸುತ್ತಿ ಹೂವಿನಿಂದ ವಿಶೇಷವಾಗಿ ಅಲಂಕರಿಸಲಾಗಿರುತ್ತದೆ. ನಿಗದಿತ ವೇಳೆಗೆ ಒಂದು ಕಾಫ್ರಿ ಕಾಡಿನ ಗಡಿ ಭಾಗದಿಂದಲೂ ಮತ್ತೊಂದು ಹಳ್ಳಿಗಳಿಂದಲೂ ಪ್ರತ್ಯೇಕವಾಗಿ ತುಳಸಿ ಕಟ್ಟೆಯ ಸುತ್ತ ಕುಣಿಯಲಾರಂಭಿಸುತ್ತವೆ ಆಗ ಗಾವಡೆವಾಡದ ಬುಧವಂತ ಹಳ್ಳಿಯ ಇತರ ಬುಡಕಟ್ಟುಗಳೊಂದಿಗೆ ಕಾಫ್ರಿಗಳ ಜೊತೆ ಗುಮಟೆ ವಾದ್ಯಗಳ ತಾಳಕ್ಕೆ ತಕ್ಕಂತೆ ನರ್ತಿಸುತ್ತ 'ಸಾಹೇಬ ಖಾತಾ ದನಗೋಟೆ ಸಾಹಿತ ಬಿನಿಚೆ ಕಲೆ ಮ್ಹಾಟೆ' ಹೀಗೆ ಜನಪದ ಗೀತೆ ಹೇಳುತ್ತ ತುಳಸಿಕಟ್ಟೆ ಸುತ್ತುತ್ತಾರೆ. ಈ ಜನಪದ ಗೀತೆ ಗಾವಡೆವಾಡಾದಲ್ಲಿ ನಡೆದ ಪ್ರಮುಖ ಘಟನೆಗಳು, ಜನರ ಮೇಲೆ ನಡೆದ ಶೋಷಣೆಗಳು, ಅನುಭವಿಸಿದ ಯಾತನೆ, ದುಃಖಗಳು, ಅವರ ಪೂರ್ಣ ಹೋರಾಟದ ಇತಿಹಾಸದ ಬದುಕನ್ನು

ಕಾಫ್ರಿಗಳ ಮೂಲಕ ಕೊಂಕಣಿ ಮಿಶ್ರಿತ ಕುಣಬಿ ಭಾಷೆಯಲ್ಲಿ ಹಾಡುತ್ತ ಕುಣಿಯುತ್ತಾರೆ. ಈ ಜನಪದ ಗೀತೆಯಲ್ಲಿ ಬ್ರಿಟಿಷರ ಆಳ್ವಿಕೆ, ಅವರು ನೀಡಿದ ಹಾಸೆಗಳು, ಬ್ರಿಟಿಷರ ಬಣ್ಣದ ನಡವಳಿಕೆಗಳನ್ನು ಕೂಡ ಲೇವಡಿಮಾಡಿ ಹಾಡಲಾಗಿದೆ.

ಹೀಗೆ ಎರಡು ದಿನ ನಡೆಯುವ ಜಾತ್ರೆ ಸಮುದಾಯದಲ್ಲಿ ಜಾತ್ರೆಗೆ ಆಗಮಿಸಿದ ಯಾವುದೆ ಕುಣಬಿಗಳ ಹಳ್ಳಿಯ ಗದ್ದೆಗಳಲ್ಲಿರುವ ಬೆಳೆಗಳನ್ನು ಯಾರೂ ಕಳ್ಳತನ ಮಾಡುವುದಿಲ್ಲ. ಹಾಗೂ ಯಾವುದೇ ಕಾಡು ಕೋಣ, ಹಂದಿಗಳು ತಿಂದು ಹಾಳು ಮಾಡುವುದಿಲ್ಲವೆಂಬ ಪ್ರತೀತಿ ಇದ್ದು, ಆ ಎರಡು ದಿನ ಯಾರು ತಮ್ಮ ಹೊಲಗಳನ್ನು ಕಾಯದೆ ಜಾತ್ರೆಗೆ ಹಾಜರಾಗುತ್ತಾರೆ. ಇಲ್ಲಿಯವರೆಗೂ ಯಾರ ಬೆಳೆಗೂ ಧಕ್ಕೆಯಾಗಿಲ್ಲವೆಂದು ಅವರು ಹೇಳುತ್ತಾರೆ. ಯಾವುದೇ ಆಕಾರಗಳಲ್ಲಿದ್ದ ಕಾಫ್ರಿಯ ಆತ್ಮಗಳು ಜಾತ್ರೆಯ ನಂತರ ಹಳ್ಳಿಯ ಹತ್ತಿರದ ಕಾಡಿನ ಪಿಡುಗುಸ (ಗೌಳಿಮರ)ದಲ್ಲಿ ನೆಲೆಸಿರುತ್ತವೆಂದು ೬೬ ವರ್ಷದ ಹಳ್ಳಿಯ ಅತ್ಯಂತ ಹಿರಿಯ ಗೋವಿಂದ, ಶಡ್ಡು, ವೇಳಿಪ್ ತಿಳಿಸಿರುತ್ತಾರೆ.

ಕುಣಬಿಗಳಲ್ಲಿ ನಡೆಯುವ ಮತ್ತೊಂದು ಪ್ರಸಿದ್ಧ ಜಾತ್ರೆ ಗಾಂಗೋಡ ಕಾಳ ಜಾತ್ರೆ. ಜೋಯಿಡಾದಿಂದ ೧೫ ಕಿ.ಮಿ. ದೂರದ ದಟ್ಟ ಹರಿದ್ವರ್ಣ ಕಾಡಿನಲ್ಲಿರುವ ಗಾಂಗೋಡದಲ್ಲಿ ಸೋಮನಾಥ ದೇವಸ್ಥಾನವಿದೆ. ಅದರ ಮುಂದೆ ಮರದ ಕೆಳಗೆ ೭ ಪುಟ್ಟ ಪುಟ್ಟ ಗುಂಡು ಕಲ್ಲುಗಳು ಜೊತೆಯಾಗಿದ್ದು, ಇವುಗಳನ್ನು ಕಾಳ ಸತ್ಪುರುಷರೆಂದು ಕರೆಯುತ್ತಾರೆ. ಇವರುಗಳು ಈ ಹಿಂದೆ ಮಡಿದ ಪೂರ್ವಜರ ಆತ್ಮಗಳೆಂದು ನಂಬಲಾಗಿದೆ. ಇವು ಗಾಂಗೋಡ ಸೀಮಾ ಕ್ಷೇತ್ರ ವ್ಯಾಪ್ತಿಯ ೭–೮ ಕಿ.ಮಿ. ಗಡಿ ಕ್ಷೇತ್ರವನ್ನು ರಕ್ಷಿಸುತ್ತಿರುತ್ತವೆ. ಯಾವುದೇ ಹೊರಗಿನ ಜನ ಶಕ್ತಿಗಳು ಈ ಸತ್ಪುರುಷರನ್ನು ಮೀರಿ ಒಳಗೆ ಬರುವಹಾಗಿಲ್ಲ. ಬಂದರೂ ಅವರು ಉಳಿಯುವುದು ವಿರಳ. ಈ ಸತ್ಪುರುಷ ಕಾಳರುಗಳಿಗೆ ಬೆಂಬಲವಾಗಿ ಜೆಲಮಿ ದೇವರು (ಹಳೆ ಹುತ್ತ) ಹತ್ತಿರದಲ್ಲಿದೆ. ಇವೆರಡಕ್ಕೆ ಪೂರಕವಾಗಿ ಗಡಿ ಕ್ಷೇತ್ರದ ವ್ಯಾಪ್ತಿಯ ವೃತ್ತದ ಪರದಿಗಳಲ್ಲಿ ಮಾಲಜನಿ, ಚಾಡ್ಡೊಜನ್ಮಿ, ಭಯಜೋಜನ್ಮಿ, ಪ್ರಾಯಕ, ಭಯಚೋನಾಶ, ಸಾತೆರಿದೇವಿ, ಬೈರೋರಾಮಲಿಂಗ ದೇವತೆಗಳು ವಿವಿಧ ಸಣ್ಣ, ದಪ್ಪ, ಉದ್ದ, ಗುಂಡುಕಲ್ಲಿನ ರೂಪದಲ್ಲಿ ಗಡಿ ಪ್ರದೇಶದ ವೃತ್ತದೊಳಗೆ ಪ್ರತಿಷ್ಠಾಪಿಸಲ್ಪಟ್ಟಿವೆ. ಇವುಗಳು ಒಂದಕ್ಕೊಂದು ಪೂರಕವಾಗಿ ಗಡಿ ಪ್ರದೇಶದ ವ್ಯಾಪ್ತಿಯಲ್ಲಿರುವ ಕಾಡನ್ನು, ಜನರ ಬೆಳೆಯನ್ನು ಸಂರಕ್ಷಿಸುತ್ತಿರುತ್ತವೆ. ಇದಲ್ಲದೆ ಕಾಡಿನ ಮದ್ಯಭಾಗದ ಕೆಳಗೆ ನೂರಾರು ವರ್ಷಗಳ ಹಳೆಯದಾದ ಲೋಹದಿಂದ ಮಾಡಿದ ಹುಲಿಯ ಆಕೃತಿಯ ವಾಗ್ರೊ ದೇವರನ್ನು ಪ್ರತಿಷ್ಠಾಪಿಸಲಾಗಿದೆ. ವಾಗ್ರೊ ಹುಲಿಯ ಆತ್ಮವಾಗಿದ್ದು ಇದು ದುಷ್ಟ ಮೃಗಗಳನ್ನು, ಕಾಡನ್ನು, ಬೆಳೆಯನ್ನು, ಹಳ್ಳಿಯ ಜನರನ್ನು ಸಂರಕ್ಷಿಸುತ್ತದೆ.

ಇವಕ್ಕೆಲ್ಲ ಬೆಂಗಾವಲಾಗಿ ಸೋಮನಾಥನಿರುತ್ತಾನೆ, ಆದರೆ ಎಲ್ಲಕ್ಕಿಂತ ಪ್ರಮುಖವಾದ ಪಾತ್ರವನ್ನು ಗಾಂಗೋಡ ಕಾಳ ಏಳು ಸತ್ಪುರುಷಗಳದಾಗಿರುತ್ತದೆ. ಜಾತ್ರೆಯ ಸಮಯದಲ್ಲಿ ಕುರಿ-ಕೋಳಿಗಳ ಬಲಿಯನ್ನು ಸತ್ಪುರುಷ ಕಾಳರಿಗೆ ನೀಡಿ ಹರಕೆ ಮಾಡಿಕೊಳ್ಳಲಾಗುತ್ತದೆ. ಕುರಿ-ಕೋಳಿಗಳನ್ನು ಬಲಿಯಾಗಿ ಕಡಿಯುವ ಹಾಗೂ ಅವುಗಳನ್ನು ಬಳಸುವ ಕೆಲಸ ಹಳ್ಳಿಯ ಇನ್ನೊಂದು ಜನಾಂಗದ ದೇವಳಿಗಳು ಮಾಡುತ್ತಾರೆ.

ಈ ಗಡಿ ವ್ಯಾಪ್ತಿ ಪ್ರದೇಶದೊಳಗಿರುವ ಕಾಡಿನ ಉತ್ಪನ್ನಗಳನ್ನು ಬೇರೆ ಯಾರೂ ತೆಗೆಯುವ ಹಾಗಿಲ್ಲ. ಖುದ್ದು ಗಾಂಗೋಡ ಕುಣಬಿಗಳು ಕೂಡ ಕಾಡಿನ ಕಾಳು ಮೆಣಸು, ಜೇನುತುಪ್ಪ, ಸೀಗೆ, ವಾಟೆಹುಳಿ, ಮುರುಗಲಿ, ತೆಗೆಯುವ ಮೊದಲು ಗಾಂಗೋಡ ಕಾಳ ಸತ್ಪುರುಷರಿಗೆ 'ಮಾತನ್' ಪೂಜೆಯನ್ನು ಬುದ್ಧಿವಂತನ ಮೂಲಕ ನೆರವೇರಿಸಿ ಅನುಮತಿ ಪಡೆದ ನಂತರವಷ್ಟೇ ಸಂಗ್ರಹಿಸಬಹುದು. ಅಲ್ಲದೆ ಅವರು ಬೆಳೆದ ವರ್ಷದ ಮೊದಲ ಬೆಳೆಯನ್ನು ಕೂಡ ಈ ರೀತಿ 'ಮಾತನ್' ಪೂಜೆ ನೆರವೇರಿಸಿ ಅನುಮತಿ ಪಡೆದ ಮೇಲೆ ಬಳಸಬಹುದು. ಸೀಮಾ ರೇಖೆಯ ಒಳಗಿನ ವ್ಯಾಪ್ತಿ ಪ್ರದೇಶದ ಕಾಡಲ್ಲಿ ಯಾರೇ ಕಳ್ಳತನ ಮಾಡಲಿ, ಪ್ರಾಣಿಗಳನ್ನು ಬೇಟೆಯಾಡಲಿ ಅವರನ್ನು ಏಳುಕಾಳು ಸತ್ಪುರುಷರು ಇಲ್ಲಿಯವರೆಗೂ ಬಿಟ್ಟಿಲ್ಲ. ಸತ್ಪುರುಷರು ಕಳ್ಳರನ್ನು ಬಿಡುವುದಿಲ್ಲವೆಂಬುದು ಹಳ್ಳಿಯ ಜನರ ಗಾಢವಾದ ನಂಬಿಕೆ. ಗಾಂಗೋಡ ಕುಣಬಿ ಕುಳಾವಿಯ ಬುಧವಂತ ರಾಮ, ಮಹಾದೇವ ಮಿರಾಶಿಯ ಹೇಳಿಕೆ ಪ್ರಕಾರ ಈಗಲೂ ಅರಣ್ಯ ಇಲಾಖೆಯವರು ಕೂಡ ಯಾವುದೇ ಮರವನ್ನು ಕಡಿಯಬೇಕಾದರೂ ಕೂಡ ಕಾಳ ಸತ್ಪುರುಷರಿಗೆ ಪೂಜೆ ಸಲ್ಲಿಸಿ ಹೇಳಿಕೆ ಪಡೆದೇ ಮರ ಕಡಿಯಬೇಕಾಗುತ್ತದೆ. ಈ ಸಂಪ್ರದಾಯ ಇಂದಿಗೂ ಚಾಲ್ತಿಯಲ್ಲಿದೆ ಹಾಗಾಗಿ ಇಲ್ಲಿಯವರೆಗೂ ಯಾರು ಈ ನಿಯಮ ಮೀರಿ ದೇವರನ್ನು ಕೇಳದೆ ಮರ ಇರಲಿ, ಒಂದು ಕಡ್ಡಿಯನ್ನು ಕಾಡಿನಿಂದ ತೆಗೆದುಕೊಂಡು ಹೋಗುವುದಿಲ್ಲ. ಹೀಗೆ ದೇವರ ಅನುಮತಿ ಪಡೆಯದೆ ಮರಗಳ್ಳತನ ಹಾಗೂ ಕಾಡಿನ ಉತ್ಪನ್ನ ಕದ್ದವರು ಬೇರೆ ಬೇರೆ ರೀತಿ ಶಿಕ್ಷೆಗೊಳಗೊಂಡು ನಾಶವಾದ ಬಗ್ಗೆ ಇಲ್ಲಿ ದಂತ ಕಥೆಗಳೇ ಇವೆ.

ಹೀಗೆಯೆ ತಾಡಸೇತ, ಕೊಂದರು, ಲಿಂಬುಡಸೇತ್, ಹಳ್ಳಿಗಳಲ್ಲಿ ಸವಡಿನಾಸ, ಮಡೆನಾಸ, ಅಣ್ಣ ತಮ್ಮಂದಿರ ಪೂರ್ವಜರ ಆತ್ಮಗಳು, ಮಲಕರ್ಣಿ ಹಳ್ಳಿಯಲ್ಲಿ ಕಡಂನಾಥ ದೇವರು, ಭಯಚೋನಾಸ, ಜನ್ಮಿಗಳು, ಕಾಟೇಲ, ತೆಲೂಲಿ ಹಳ್ಳಿಗಳಲ್ಲಿ ಪಂಚಕಾಳ ಭೈರವರುಗಳು ಹಾಗೂ ವಾಗ್ರೋಗಳು, ಮಾತಕರ್ಣ ಹಳ್ಳಿಯಲ್ಲಿ ಗಂಗೇಶ್ವರ, ಜನ್ಮಿ, ಸಳಪಯಕ, ಡಿಗ್ಗಿ ಹಳ್ಳಿಯಲ್ಲಿ ನಡೆಯುವ ಗಾವಳಾ ದೇವಿ ಜಾತ್ರೆ ಹೀಗೆ ಎಲ್ಲಾ ಕುಣಬಿ ಹಳ್ಳಿಗಳಲ್ಲೂ ಕೂಡ ಆಯಾ ಹಳ್ಳಿಗಳಿಗೆ ಸೀಮಿತ ಸೀಮಾವ್ಯಾಪ್ತಿ ಪ್ರದೇಶದ ಗಡಿ ರಕ್ಷಕ ಆತ್ಮಗಳು, ದೇವರು ದೇವತೆಗಳು ಈ ಜನಾಂಗದ

ಕಾಡನ್ನು, ಪೈರನ್ನು ಸಂರಕ್ಷಿಸುತ್ತವೆ. ಈ ಎಲ್ಲೆ, ಗಡಿ, ಸೀಮಾ ಪದ್ಧತಿ ಮತ್ತು ಅದರ ಪರಿಕಲ್ಪನೆ ಬುಡಕಟ್ಟು ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದ್ದು, ತಮ್ಮ ಸಮುದಾಯದ ಬೆಳೆದ ಉತ್ಪನ್ನಗಳನ್ನಷ್ಟೇ ಅಲ್ಲ, ಸುತ್ತಲ ಕಾಡನ್ನೂ ಕಾಡಿನ ಸಕಲ ಜೀವಿಗಳನ್ನೂ ಸಂರಕ್ಷಿಸುವ ಅಲ್ಲದೆ ಕರಾರುವಕ್ಕಾಗಿ ತಮ್ಮ ಮುಂದಿನ ಪೀಳಿಗೆಗಳಿಗೆ ಸಂಪನ್ಮೂಲಗಳನ್ನು ಉಳಿಸಿ ಬೆಳೆಸಿ ಕಾಪಾಡಿಕೊಳ್ಳುವ ಮಹತ್ತರ ಸಿದ್ಧಾಂತವನ್ನು ಈ ಸೀಮಾ ಪದ್ಧತಿ ಮೌಲ್ಯಗಳು ಪ್ರತಿಪಾದಿಸುತ್ತವೆ.

ಪ್ರಪಂಚಕ್ಕೆ ಮಾದರಿಯಾಗಬಲ್ಲ, ಸಂಪನ್ಮೂಲ ರಕ್ಷಣೆಗಳು ಸಿದ್ಧಾಂತಗಳಿಗೆ ಉತ್ತಮ ಬುನಾದಿಯಾಗಬಲ್ಲ ಒಂದು ಜನಪದ ಸಂಸ್ಕೃತಿಯ ಆಚರಣೆ ಎಲ್ಲರ ದಿವ್ಯ ನಿರ್ಲಕ್ಷ್ಯಕ್ಕೊಳಗಾಗಿ ಜೀವ ಕಳೆದುಕೊಳ್ಳುತ್ತಿದೆ, ವಿನಾಶದ ಅಂಚಿಗೆ ಬಂದುನಿಂತಿದೆ. ಬುಡಕಟ್ಟು ಸಮುದಾಯಗಳಲ್ಲಿರುವ ಇಂತಹ ಶ್ರೇಷ್ಟ ಮೌಲ್ಯಾಚರಣೆಗಳೆ ಇಂದಿಗೂ ಪ್ರಪಂಚದೆಲ್ಲಡೆ, ಎಲ್ಲೆಲ್ಲಿ ಬುಡಕಟ್ಟು ಸಮುದಾಯಗಳು ನೆಲೆಸಿವೆಯೇ ಅಲ್ಲಲ್ಲಿ ಮಾತ್ರ ಕಾಡು ಉಳಿದಿರುವುದಕ್ಕೆ ಸೀಮಾ ಪದ್ಧತಿಯ ಶ್ರೇಷ್ಠ ಆಚರಣೆ ಕಾರಣ ಎಂದು ಸಂಶೋಧನೆಗಳಿಂದ ದೃಢಪಟ್ಟಿದೆ.

ಒಟ್ಟಾರೆಯಾಗಿ ಕುಣಬಿ ಸಮುದಾಯ ತನ್ನ ಬುಡಕಟ್ಟುವಿನ ಮೂಲ ಅಂಶಗಳನ್ನು ಈವರೆಗೂ ಉಳಿಸಿಕೊಂಡು ಬಂದ ಸಮುದಾಯ ಎನ್ನುವದು ಈ ವರೆಗಿನ ಅಧ್ಯಯನದಿಂದ ಸೂಚಿತವಾಗುತ್ತದೆ. ಬುಡಕಟ್ಟು ಸಮುದಾಯಗಳ ಅಧ್ಯಯನದಲ್ಲಿ ಈ ಬುಡಕಟ್ಟು ಸಾಮಾಜಿಕ ಅಧ್ಯಯನ ಕುಣಬಿ ಸಮುದಾಯದ ವಿಶಿಷ್ಟಾಂಶಗಳನ್ನು ಕಂಡುಕೊಳ್ಳುವಲ್ಲಿ ಸಹಾಯಕವಾಗುತ್ತದೆ.

**ಟಿಪ್ಪಣಿಗಳು**

1. Fuch Stephen, 'The Aboriginal Tribes of India', 1973, p. 246.
೨. ಕ್ಷೇತ್ರಕಾರ್ಯ
೩. ಕರ್ನಾಟಕ ಹಿಂದುಳಿದ ವರ್ಗ ಆಯೋಗ, ೧೯೮೧.
೪. Thurston Edger, 'Caste and Tribes of South India', p. 99, 1909.
೫. ಕಿಟೆಲ್, 'ಕನ್ನಡ–ಇಂಗ್ಲೀಷ್' ನಿಘಂಟು, ಸಂ. ೧, ಪು. ೧೬೬, ೧೯೬೮.
6. Nanjundayya and Iyyar, 'The Mysore Tribes and Castes', Vol. II, p. 74, 1928.
7. Fuch Stephen, 'The Aboriginal Tribes of India', p. 42, 1973.
೮. ಕ್ಷೇತ್ರಕಾರ್ಯ – ತಿಳುವಳಿಕೆ ನೀಡಿದವರು – ಗೋವಿಂದ, ಶಡ್ಡು ವೇಳಿಪ್, ಕುಂಡಲ, ಜೋಯಿಡಾ.
೯. ಕ್ಷೇತ್ರಕಾರ್ಯ – ತಿಳುವಳಿಕೆ ನೀಡಿದವರು – ಮಾಣಿ ರಾಮಾ ಕುಣಬಿ, ಯಲ್ಲಾಪೂರ.
೧೦. ಕ್ಷೇತ್ರಕಾರ್ಯ – ತಿಳುವಳಿಕೆ ನೀಡಿದವರು – ನಿಂಗಣ್ಣ ತಮ್ಮಯ್ಯ ಕುಣಬಿ, ಅಂಕೋಲಾ.
೧೧. ಕ್ಷೇತ್ರಕಾರ್ಯ – ತಿಳುವಳಿಕೆ ನೀಡಿದವರು – ಕೃಷ್ಣ ಗಾಂವಕರ, ಕಾರವಾರ.
೧೨. ಕ್ಷೇತ್ರಕಾಯ–ತಿಳುವಳಿಕೆ ನೀಡಿದವರು–ಮಹಾಬಲೇಶ್ವರ ಸೋಮಣ್ಣ ಕಾಜುಗಾರ ಅಣಶಿವಾಡ
13. Fuch Stephen, 'The Aboriginal Tribes of India', p. 37, 1973.
14. Rajyalakshmi P. 'Tribal Food Habits', 1991.
15. Shashi Bairathi, 'Tribal Culture Economy and Health', p. 113, 1991.

16. Ibid., P 105.
17. Thurston, 'Caste and Tribes of Southern India, p. 100, 1909.
18. Anantha Krishna Iyer L.K. 'The Mysore Tribals and Castes', Vol. I, p. 257, 1935.
18. Joshi Eshwara N. 'Dakshina Kannadada Kudubiyaru', p. 38, 1983.
19. Nayak Sridhar P. 'Nagareekatheya Naduve Nelesiyu Evaradu Vichitra Nadavalike', p. 25, 1982.
20. Horskovits Melville J. 'Cultural Anthropology', p. 156, 1974.
೨೧. ಕ್ಷೇತ್ರ ಕಾರ್ಯದ ಮಾಹಿತಿ.
22. P. Sarokhen 'Sociological Theories of Today', p. 15, 1966.
23. Kochar and Pandya 'Modernization and Social Change', p. 11, 1992.
೨೪. ಕ್ಷೇತ್ರಕಾರ್ಯದ ತಿಳುವಳಿಕೆ ನೀಡಿದವರು – ಶ್ರೀ ಸುಭಾಷ ಗಾವಡಾ ಕುಂಬಾರವಾಡ, ಜೋಯಿಡಾ.
೨೫. ಕ್ಷೇತ್ರಕಾರ್ಯದ ತಿಳುವಳಿಕೆ ನೀಡಿದವರು – ಶ್ರೀಮತಿ ರುಕ್ಮಿಣಿ ಬಿಕ್ಕು ಕುಣಬಿ, ಆರೆಬೈಲ್, ಯಲ್ಲಾಪುರ.
೨೬. ಕ್ಷೇತ್ರಕಾರ್ಯದ ತಿಳುವಳಿಕೆ ನೀಡಿದವರು – ಶ್ರೀ ಬಿಕ್ಕು ಕುಷ್ಠ ಕುಣಬಿ, ಕೋಟೆಮನೆ, ಯಲ್ಲಾಪುರ.
27. Vidyarthi and Rai B.K. 'The Tribal Culture of India', pp. 163-164, 1977.
28. Ibid., P.188
೨೯. ಕ್ಷೇತ್ರಕಾರ್ಯದ – 'ವ್ಯಕ್ತಿ ಅಧ್ಯಯನ ಪದ್ಧತಿ' ಮಾಹಿತಿ.
೩೦. ಕ್ಷೇತ್ರಕಾರ್ಯ – ಮನೆವರು ಸಮೀಕ್ಷೆ
31. Vidyarthi and Rai B.K. 'The Tribal Culture of India', p. 280, 1977.
32. Majumdar D.N. and Madan T.N. 'An Introduction to Social Anthropology', P. 150, 1956.
33. Singh Yogendra 'Modernization of Indian Tradition', p. 78, 1986.
34. Durkheim Emile 'The Elementary Forms of Religious Life', p. 169, 1912.
35. Vidyarthi and Rai B.K. 'The Tribal Culture of India', p. 244, 1977.
36. Fuch Stephen, 'The Original Tribes', p. 68, 1973.
37. Mann R.S. 'Anthropological and Sociological Theory', p. 262, 1984.
೩೮. ಕ್ಷೇತ್ರಕಾರ್ಯದ ತಿಳುವಳಿಕೆ ನೀಡಿದವರು – ರಾಮ, ಮಹಾದೇವ ಮಿರಾಶಿ, ಕುಂಡಲ, ಜೋಯಿಡಾ.
೩೯. ಡಾ. ಎ.ಎಸ್. ಪ್ರಭಾಕರ : 'ಆದಿವಾಸಿ ಆಖ್ಯಾನ', ಪು. ೧೭೪–೧೮೧, ೨೦೦೫.
೪೦. ಕ್ಷೇತ್ರಕಾರ್ಯದ ತಿಳುವಳಿಕೆ ನೀಡಿದವರು – ಗೋವಿಂದ ಶಡ್ಡು ವೇಳಿಪ್, ಕುಂಡಲ್.

ಅಧ್ಯಾಯ ೪

# ಆರ್ಥಿಕ ಸ್ಥಿತಿಗತಿ

೪.೧ ಕುಣಬಿ ಸಮುದಾಯದ ಪಾರಂಪರಿಕ ಆರ್ಥಿಕ ಚಟುವಟಿಕೆಗಳು

೪.೨ ಕುಮರಿ ಬೇಸಾಯ

೪.೩ ಕುಣಬಿಯರ ಪಾರಂಪರಿಕ ಆರ್ಥಿಕ ಮೂಲಗಳು

೪.೪ ಕುಣಬಿಯರ ಆರ್ಥಿಕ ಸಂಕಷ್ಟಗಳು

೪.೫ ಭೂ ಹಿಡುವಳಿ ಹಾಗೂ ಕೃಷಿ ಚಟುವಟಿಕೆಗಳು

೪.೬ ಗೃಹೋಪಯೋಗಿ ವಸ್ತುಗಳು

೪.೭ ಕುಣಬಿ ಸಮುದಾಯದ ಆರ್ಥಿಕತೆ : ವರ್ತಮಾನದ ಸ್ಥಿತಿಗತಿ

## ಅಧ್ಯಾಯ ೪

# ಆರ್ಥಿಕ ಸ್ಥಿತಿಗತಿ

ಒಂದು ಕಾಲಕ್ಕೆ ಕಾಡನ್ನೇ ನಂಬಿ ಕಾಡಿನ ಮಧ್ಯ ಸ್ವತಂತ್ರವಾಗಿ ಬದುಕುತ್ತಿದ್ದ ಬುಡಕಟ್ಟುಗಳು ವಸಾಹತುಶಾಹಿ ಮತ್ತು ಅದು ಹೊತ್ತು ತಂದ ಆರ್ಥಿಕ ನೀತಿಯಿಂದಾಗಿ ಜರ್ಜರಿತಗೊಂಡವು. ಅದಕ್ಕಿಂತ ಹೆಚ್ಚಾಗಿ ದೇಶೀ ಮೂಲದ ಕುಶಲಕರ್ಮಿಗಳನ್ನು ಮತ್ತು ವ್ಯಾಪಾರಿಗಳನ್ನು ತುಳಿದು ಆ ಸಮುದಾಯಗಳು ಆರ್ಥಿಕವಾಗಿ ದುರ್ಬಲಗೊಳ್ಳುವಂತೆ ವಸಾಹತುಶಾಹಿ ವ್ಯವಸ್ಥೆ ನೋಡಿಕೊಂಡಿತು. ಈ ಜನರನ್ನು ನಿಯಂತ್ರಿಸಲೆಂದೇ ಬ್ರಿಟೀಷ್ ವಸಾಹತುಶಾಹಿ ಹೊಸ ಹೊಸ ಕಾಯ್ದೆಗಳನ್ನು ಜಾರಿಗೊಳಿಸಿತು. ಇವರ ವ್ಯಾಪಾರದ ಮೇಲೆ ನಿಯಂತ್ರಣ ಹೇರಿತು, ಜೊತೆಗೆ ಅರಣ್ಯ ಕಾಯ್ದೆಯನ್ನು ಜಾರಿಗೊಳಿಸಿತು. ಒಟ್ಟಾರೆಯಾಗಿ ಆ ಜನರನ್ನು ಬಲವಂತವಾಗಿ ತಮ್ಮ ತೊತ್ತುಗಳಾಗಿ ರೂಪಿಸಿಕೊಳ್ಳುವಲ್ಲಿ ಅದು ಯಶಸ್ವಿಯಾಯಿತು. ಆ ಮೂಲಕ ಅವರ ಆರ್ಥಿಕ ಸ್ವಾವಲಂಬಿತನವನ್ನು ವಸಾಹತುಶಾಹಿ ಅತಂತ್ರಗೊಳಿಸಿತು.

ಬ್ರಿಟೀಷರು ಭಾರತವನ್ನು ಬಿಟ್ಟು ಹೋದ ನಂತರದ ಚಿತ್ರಣವೇನೂ ಬದಲಾಗಲಿಲ್ಲ. ಇಲ್ಲಿಯ ಅಧಿಕಾರಶಾಹಿ ಮತ್ತು ಸರಕಾರಗಳು ಇವರನ್ನು ನಿರ್ಲಕ್ಷಿಸಿದವು. ಈ ಬುಡಕಟ್ಟು ಜನರ ಅಭಿವೃದ್ಧಿಗಾಗಿ ಹಲವು ಯೋಜನೆಗಳನ್ನು ರೂಪಿಸಲಾಯಿತಾದರೂ ಅವುಗಳ ಅನುಷ್ಠಾನದಲ್ಲಿ ಸರಕಾರ ಸೋತಿತು. ಕೇವಲ ಮುಂಗೈ ಬಲವಿದ್ದವರಿಗೆ ಮಾತ್ರ ಯೋಜನೆಯ ಲಾಭಗಳು ದೊರೆಯುವಂತಾದವು. 'ಭಾರತದ ಸಂದರ್ಭದಲ್ಲಿ ಬುಡಕಟ್ಟು ಜನರ ಅಭಿವೃದ್ಧಿಗಾಗಿ ಕಾರ್ಯಕ್ರಮಗಳಿವೆ ವಿನಃ ಬುಡಕಟ್ಟು ನೀತಿ ಎಂಬುದೇನೂ ಇಲ್ಲ. ನೀತಿ ಎಂದರೆ ಪ್ರಜ್ಞಾಪೂರ್ವಕವಾಗಿ ರೂಪಿಸಿದ ಉದ್ದೇಶಗಳನ್ನು ಒಳಗೊಂಡ ಒಂದು ಕಾಯಕಲ್ಪ. ಈ ಕಾಯಕಲ್ಪದ ಉದ್ದೇಶಗಳನ್ನು ಈಡೇರಿಸಲು ಇರುವ ಚಟುವಟಿಕೆಗಳೇ ಕಾರ್ಯಕ್ರಮ'. ಭಾರತದ ಮಟ್ಟಿಗೆ ಯೋಜನೆಗಳೆಂಬವು ಕೇವಲ ಯೋಜನೆಗಳನ್ನು ರೂಪಿಸುವವರಿಗೆ ಹೊರತು ಅದರ ಲಾಭ ಪಡೆಯಬೇಕಾದ ಫಲಾನುಭವಿಗಳಿಗಲ್ಲ ಎಂಬ ಮಾತು ಬುಡಕಟ್ಟುಗಳ ಅಭಿವೃದ್ಧಿ ವಿಚಾರದಲ್ಲಿ ನಿಜವಾಗಿದೆ.

**ಆರ್ಥಿಕ ಜೀವನ**

ಜೀವನದ ಅವಶ್ಯಕ ವಸ್ತುಗಳನ್ನು ಪೂರೈಸುವಲ್ಲಿ ಓರ್ವ ವ್ಯಕ್ತಿಯ ಆರ್ಥಿಕ ಪರಿಸ್ಥಿತಿಯು ಅವನ ಜೀವನದಲ್ಲಿ ಮಹತ್ವದ ಪಾತ್ರ ವಹಿಸುತ್ತದೆ ಅವನ ಸಾಮಾಜಿಕ-ಸ್ಥಾನಮಾನದ ಮೇಲೆಯೂ ಪರಿಣಾಮ ಬೀರುತ್ತದೆ. ನಾವು ಬುಡಕಟ್ಟು ಸಮುದಾಯದ ಆರ್ಥಿಕ ಸ್ಥಿತಿಗಳನ್ನು ಗಮನಿಸಿದಾಗ, ಬೇರೆ ಸಮುದಾಯದವರಿಗೆ ಹೋಲಿಸಿದರೆ ಬಹಳ ಹಿಂದುಳಿದಿವೆ ಎಂದು

ಹೇಳಬಹುದು. ಅವರ ಆದಾಯ, ಜೀವನಮಟ್ಟ, ಸ್ವಚ್ಛತೆ ಮತ್ತು ಆರೋಗ್ಯ ಸ್ಥಿತಿಯ ವಿಷಯದಲ್ಲಿ ಇತರ ಸುಧಾರಿತ ಸಮುದಾಯದವರಿಗಿಂತ ತೀರ ಹಿಂದುಳಿದಿದ್ದಾರೆ. ಇಂದೂ ಕೂಡಾ ಬುಡಕಟ್ಟು ಸಮುದಾಯದವರು ತಮ್ಮ ಸಾಂಪ್ರದಾಯಿಕ ಉದ್ಯೋಗಗಳೆನಿಸಿದ ಬೇಟೆಯಾಡುವುದು ಹಾಗೂ ಬುಟ್ಟಿ ಹೆಣೆಯುವಿಕೆಯ ಮೇಲೆ ಅವಲಂಬಿತರಾಗಿದ್ದಾರೆ. ಇಂದು ಆರ್ಥಿಕ ಮಾನವಶಾಸ್ತ್ರ ಪ್ರತ್ಯೇಕ ಪಠ್ಯಕ್ರಮವಾಗಿ ಬೆಳೆಯುತ್ತಿದ್ದರೂ ಬುಡಕಟ್ಟು ಅರ್ಥವ್ಯವಸ್ಥೆಯ ಪ್ರಾಯೋಗಿಕ ಅಧ್ಯಯನಗಳು ಸಾಕಷ್ಟು ಲಭ್ಯವಾಗಿಲ್ಲ. ಈಗ ಪ್ರಚಲಿತ ಸಮಾಜದಲ್ಲಿ ಆರ್ಥಿಕ ತಜ್ಞರು, ಸಮಾಜ ವಿಜ್ಞಾನಿಗಳು ಹಾಗೂ ಮಾನವಶಾಸ್ತ್ರಜ್ಞರಿಗೆ ಬುಡಕಟ್ಟು ಸಮುದಾಯ ಅರ್ಥವ್ಯವಸ್ಥೆಯ ಕಾರ್ಯಾವಿಧಾನ ಹಾಗೂ ಪರಿವರ್ತನೆಯ ಆಳ ಅಧ್ಯಯನದ ಅವಶ್ಯಕತೆಯಿದೆ. ಆರ್ಥಿಕ ಜೀವನವೆಂದರೆ, ಆಯಾ ಸಮುದಾಯದ ಭೌತಿಕ ಬೇಡಿಕೆ ಹಾಗೂ ಅವಶ್ಯಕತೆಗಳೆಂದು ತಿಳಿಯಬಹುದು. ಈ ರೀತಿಯ ಆರ್ಥಿಕ ಬೇಡಿಕೆಗಳನ್ನು ತೃಪ್ತಿಗೊಳಿಸುವದೇ ಅರ್ಥವ್ಯವಸ್ಥೆಯ ಪ್ರಮುಖ ಅಂಶವಾಗಿದೆ.

ಒಂದು ಮಹತ್ವದ ಸಂಗತಿಯೆಂದರೆ, ಭಾರತದ ಬುಡಕಟ್ಟು ಸಮುದಾಯಗಳು ಬದಲಾವಣೆಯ ಅಂಚಿನಲ್ಲಿ ನಿಂತಿವೆ. ಇಂದು ಬುಡಕಟ್ಟು ಸಮುದಾಯದ ಕಲ್ಯಾಣ ಹಾಗೂ ಸಮುದಾಯ ಅಭಿವೃದ್ಧಿ ಯೋಜನಾ ಕ್ರಮಗಳು ಹಾಗೂ ಆಧುನಿಕ ಚಿಂತನೆಯ ನಗರೀಕರಣ, ಶಿಕ್ಷಣ, ಸಾರಿಗೆ ಸಂಪರ್ಕ, ಸಹಕಾರಿ ಬ್ಯಾಂಕು ಹಾಗೂ ವಾಣಿಜ್ಯ ಬ್ಯಾಂಕುಗಳ ಸ್ಥಾಪನೆಯ ಕ್ರಮದಿಂದ ಬುಡಕಟ್ಟು ಸಮುದಾಯದ ಅರ್ಥವ್ಯವಸ್ಥೆಯಲ್ಲಿಯೂ ಬದಲಾವಣೆ ತರುತ್ತದೆ. ಆದರೂ ಒಟ್ಟಾರೆ ಪರಿಣಾಮ ಅಷ್ಟೊಂದು ಆಶಾದಾಯಕವಾಗಿ ತೋರುತ್ತಿಲ್ಲ.

'ವಿದ್ಯಾರ್ಥಿ ಹಾಗೂ ರೈ ಅವರು 'The Tribal Culture of India' ಗ್ರಂಥದಲ್ಲಿ ಅಭಿಪ್ರಾಯಪಟ್ಟಂತೆ, ಬುಡಕಟ್ಟು ಅರ್ಥವ್ಯವಸ್ಥೆಯಲ್ಲಿ ಪರಿವರ್ತನೆಯ ಸರಳ ಹಾಗೂ ಸಂಕ್ಷಿಪ್ತ ಮಾರ್ಗೋಪಾಯಗಳನ್ನು ಕಾಣುವದು ಕಠಿಣ. ಏಕೆಂದರೆ ಬದಲಾವಣೆಗಳು ಸ್ಥಳೀಯ ಪರಿಸ್ಥಿತಿಗೆ ಅನುಗುಣವಾಗಿ ತ್ವರಿತ ಬದಲಾವಣೆ ಹೊಂದುತ್ತಿವೆ. ಆದರೆ ಬದಲಾವಣೆಯ ದಿಕ್ಕನ್ನು ಗುರುತಿಸುವ ಸೂಕ್ತ ಮಾರ್ಗವೆಂದರೆ, ವಿಧವಿಧದ ಹೊಸ ಆರ್ಥಿಕ ಚಟುವಟಿಕೆಗಳ ಅನುಷ್ಠಾನ ಹಾಗೂ ಪ್ರಗತಿಯನ್ನು ಪರಿಶೀಲಿಸುವ ಕ್ರಮ ಒಂದೆಡೆಯಾದರೆ, ಇನ್ನೊಂದೆಡೆಗೆ ಅರ್ಥಶಾಸ್ತ್ರದ ಪರಿಣಾಮಕಾರಿ ತಿರುಳಿನ ಉದಯದ ಆಳ ಅಧ್ಯಯನವಾಗಿದೆ'.

ಇಂದು ಭಾರತದ ಸಾಮಾನ್ಯ ಜನತೆಯ ಅಥವಾ ಬುಡಕಟ್ಟು ಸಮುದಾಯದ ಮೂಲಭೂತ ಅರ್ಥವ್ಯವಸ್ಥೆ ಕೃಷಿಯನ್ನೇ ಅವಲಂಬಿಸಿದೆ. ಬುಡಕಟ್ಟು ಜನರಲ್ಲಿಯಂತೂ ಈಗಲೂ ಬಹಳಷ್ಟು ಜನ ಸಾಂಪ್ರದಾಯಿಕ ಕೃಷಿ ಪದ್ಧತಿಯನ್ನೇ ಅನುಸರಿಸುತ್ತಿದ್ದಾರೆ. ಅದಲ್ಲದೆ ಬಹುಸಂಖ್ಯಾತ ಬುಡಕಟ್ಟು ವರ್ಗಗಳು ತಮ್ಮ ಜೀವನ ನಿರ್ವಹಣೆಗಾಗಿ ಇಂದಿಗೂ

ಸಾಂಪ್ರದಾಯಿಕ ಉದ್ಯೋಗಗಳೆನಿಸಿದ ಆಹಾರ ಸಂಗ್ರಹಣೆ, ಬೇಟೆ, ಹೈನುಗಾರಿಕೆ, ಕರಕುಶಲ ವಸ್ತು ತಯಾರಿಕೆ, ಸರದಿಕೃಷಿ, ಸ್ಥಳಾಂತರ ಕೃಷಿ (Shifting Cultivation) ಯನ್ನು ಅವಲಂಬಿಸಿವೆ. ಇದರಿಂದ ಅನೇಕ ಬುಡಕಟ್ಟು ಗುಂಪುಗಳು ಸಾಲಭಾರ, ಆರ್ಥಿಕ ಶೋಷಣೆ, ಮಾರುಕಟ್ಟೆಯ ನೈಪುಣ್ಯತೆಯ ಕೊರತೆ, ಭೂಹೀನತೆ, ಆಧುನಿಕ ಕೃಷಿ ತಂತ್ರಜ್ಞಾನದ ಕೊರತೆ ಹಾಗೂ ಅಜ್ಞಾನತೆಯ ಸಮಸ್ಯೆಯಲ್ಲಿ ತೋಳಲಾಡುತ್ತಿವೆ. ಆದ್ದರಿಂದ ಬುಡಕಟ್ಟು ಸಮುದಾಯದ ಅರ್ಥವ್ಯವಸ್ಥೆಯನ್ನು 'ಬದಲಾವಣೆ ಮತ್ತು ಪ್ರಗತಿ' ಈ ಎರಡೂ ದೃಷ್ಟಿಕೋನದಿಂದ ನೋಡುವದು ಅವಶ್ಯಕವಾಗಿದೆ.

ಕುಣಬಿ ಸಮುದಾಯದಲ್ಲಿ ಮಿಶ್ರ ಅರ್ಥ ವ್ಯವಸ್ಥೆಯಿದೆ, ಅನೇಕ ಭಾರತೀಯ ಬುಡಕಟ್ಟು ಪಂಗಡಗಳಂತೆ, ಕುಣಬಿ ಸಮುದಾಯದ ಆರ್ಥಿಕ ಜೀವನದಲ್ಲಿ ಕೃಷಿ, ಬೇಟೆ, ಆಹಾರ ಸಂಗ್ರಹ, ಹೈನುಗಾರಿಕೆ, ಕರಕುಶಲ ಕಲೆಗಳು ಮಹತ್ವ ಪಡೆದಿವೆ. ಆರ್ಥಿಕ ದೃಷ್ಟಿಯಿಂದ ಕುಣಬಿಗಳು ಹಿಂದುಳಿದವರಾಗಿದ್ದು ಕಡಿಮೆ ವೆಚ್ಚದ ಸರಳ ಜೀವನ ನಡೆಸುತ್ತಾರೆ.

### ೪.೧ ಕುಣಬಿ ಸಮುದಾಯದವರ ಪಾರಂಪರಿಕ ಆರ್ಥಿಕ ಚಟುವಟಿಕೆಗಳು

ಸಾವಿರಾರು ವರ್ಷಗಳ ಮನುಕುಲದ ಇತಿಹಾಸವಿರುವ ಈ ದೇಶದಲ್ಲಿ ಅನೇಕ ಸಮುದಾಯಗಳು ಇಂದಿಗೂ ತಮ್ಮ ಪರಂಪರಾಗತ ಬದುಕಿನ ವ್ಯವಸ್ಥೆಯಲ್ಲಿಯೇ ಮುಂದುವರಿದಿರುವುದೊಂದು ವಿಶೇಷ. ಆದರೆ ಕಳೆದ ಒಂದೆರಡು ಶತಮಾನಗಳಲ್ಲಿ ಆದ ರಾಜಕೀಯ ಮತ್ತು ಆರ್ಥಿಕ ಬದಲಾವಣೆಗಳು ಬುಡಕಟ್ಟು ಬದುಕಿನ ಮೇಲೆ ಅಪಾರವಾದ ಪರಿಣಾಮವನ್ನು ಬೀರಿವೆ. ವಸಾಹತು ಸಂದರ್ಭದಲ್ಲಿ ಹೇಗೆ ಅರಣ್ಯಗಳು ವಾಣಿಜ್ಯ ಉದ್ದೇಶಗಳಿಗಾಗಿ ಬಳಕೆಯಾದವು ಮತ್ತು ಅಂಥ ಆರ್ಥಿಕ ಬದಲಾವಣೆಗಳಿಂದ ಕಾಡನ್ನೇ ಅವಲಂಬಿಸಿ ಬದುಕುತ್ತಿದ್ದ ಸಮುದಾಯಗಳ ಮೇಲೆ ಆದ ಪರಿಣಾಮಗಳ ಹಿನ್ನೆಲೆಯಲ್ಲಿಯೇ ಕುಣಬಿಯರ ಆರ್ಥಿಕ ಸ್ಥಿತ್ಯಂತರಗಳನ್ನು ನಾವು ಗಮನಿಸಬೇಕಾಗಿದೆ. ಸಾಂಪ್ರದಾಯಿಕವಾಗಿ ಕುಣಬಿಯರು ಶತಮಾನಗಳಿಂದ ಅರಣ್ಯವಾಸಿಗಳಾಗಿದ್ದರು. ಬಹಳ ಕಾಲದಿಂದ ಅರಣ್ಯವನ್ನು ನಂಬಿ ಬದುಕಿದವರು ಎಂಬುದರಲ್ಲಿ ಎರಡು ಮಾತಿಲ್ಲ. ಅವರ ಅರಣ್ಯಾಧಾರಿತ ಜೀವನದಲ್ಲಿ ಮೂರು ಹಂತಗಳನ್ನು ನಾವು ಗಮನಿಸಬಹುದು;

೧. ಆಹಾರ ಸಂಗ್ರಹಣೆ (Food Gathering)

೨. ಬೇಟೆ (Hunting)

೩. ಕುಮರಿ ಬೇಸಾಯ (Shifting Cultivation)

ಅರಣ್ಯದಲ್ಲಿ ನೈಸರ್ಗಿಕವಾಗಿ ಸಿಗುವ, ಚಿಕ್ಕಪುಟ್ಟ ಅರಣ್ಯ ಉತ್ಪನ್ನಗಳೆನ್ನಿಸಿದ ಹಣ್ಣು-ಹಂಪಲ, ಗಡ್ಡೆ-ಗೆಣಸು ಹಾಗೂ ಗಿಡಮೂಲಿಕೆ ಸಸ್ಯಗಳನ್ನು ಹಿಂದಿನಿಂದಲೂ ಕುಣಬಿಯರು ಸಂಗ್ರಹಿಸುತ್ತಿದ್ದರು. ಇದರೊಟ್ಟಿಗೆ ಉರುವಲು ಕಟ್ಟಿಗೆ, ಬಿದಿರು, ಮೆಳೆ, ಅರಗು, ನಾರು, ಮೇಣ, ಜೇನುತುಪ್ಪ, ಔಷಧೀಯ ಸಸ್ಯಗಳು, ಗಿಡಬಳ್ಳಿಗಳು, ಹೂಬಳ್ಳಿ ಮುಂತಾದ ವಸ್ತುಗಳೂ ದೊರೆಯುತ್ತಿದ್ದವು. ಈ ರೀತಿ ಅರಣ್ಯ ಉತ್ಪನ್ನಗಳು ಕುಣಬಿಗಳಿಗೆ ಬಹುಮಟ್ಟಿಗೆ ಜೀವನ ನಿರ್ವಹಣೆಯ ಆಧಾರವಾಗಿದ್ದವು. ಅವರು ಅರಣ್ಯಗಳಲ್ಲಿಯೇ ವಾಸಿಸುತ್ತಿದ್ದಾಗ ತಮ್ಮ ಜೀವನಾವಶ್ಯಕ ವಸ್ತುಗಳನ್ನು ಸರದಿ ಕೃಷಿ ಮತ್ತು ಆಹಾರ ಸಂಗ್ರಹಣೆಯಿಂದ ಪಡೆಯುತ್ತಿದ್ದರು. ಅರಣ್ಯ ಸಂಪತ್ತಿನಿಂದಲೇ, ಕೃಷಿ ಉಪಕರಣ, ಗೃಹ ನಿರ್ಮಾಣ ವಸ್ತುಗಳು, ಉರುವಲು, ಸಂಗೀತ-ವಾದ್ಯ ನಿರ್ಮಾಣ ವಸ್ತುಗಳನ್ನು ಪಡೆಯುವರು. ಅರಣ್ಯದಲ್ಲಿ ಪ್ರಾಣಿ ಬೇಟೆಯಾಡಿ ಮಾಂಸಾಹಾರವನ್ನೂ ಪಡೆಯುತ್ತಿದ್ದರು.

ಬಹುಶಃ ಕೃಷಿ ಜಾರಿಗೆ ಬಂದ ಪ್ರಥಮದಲ್ಲಿ ಯಾವ ರೀತಿಯ ಕೃಷಿ ಪದ್ಧತಿ ಇತ್ತೋ ಅಂಥ ಪಾರಂಪರಿಕ ಪದ್ಧತಿ ಕುಣಬಿಯರಲ್ಲಿ ಇತ್ತೀಚಿಗಿನವರೆಗೂ ಜಾರಿಯಲ್ಲಿದೆ ಎಂಬುದೇ ಒಂದು ವಿಶೇಷ. ಅದೇ 'ಕುಮರಿ ಬೇಸಾಯ ಅಥವಾ 'ಸ್ಥಳಾಂತರ ಕೃಷಿ'.

ಅವರೇ ತಿಳಿಸಿದಂತೆ, ಕಳೆದ ಹತ್ತು-ಹನ್ನೊಂದು ವರ್ಷದಿಂದ ಈ ಸರದಿ ಕೃಷಿಯನ್ನು ನಿಲ್ಲಿಸಲಾಗಿದೆ. ಮತ್ತೊಂದು ಸಂಗತಿಯೆಂದರೆ ಸರಕಾರವೇ ಈ ಕೃಷಿ ಪದ್ಧತಿಯನ್ನು ನಿಲ್ಲಿಸುವಂತೆ ಪ್ರತಿಬಂಧ ಒಡ್ಡಿದೆ. ಈ ಸರದಿ ಕೃಷಿ ಪದ್ಧತಿಗೆ ಸ್ಥಳೀಯ ನುಡಿಯಲ್ಲಿ 'ಕುಮರಿ' ಎನ್ನುವದರಿಂದ, ಈ ಕುಣಬಿ ಪಂಗಡಕ್ಕೆ 'ಕುಮರಿ ಕುಣಬಿ' ಸಮುದಾಯ ಎಂದೂ ಕರೆಯುವರು. ಸರದಿ ಕೃಷಿ ಪದ್ಧತಿಯಲ್ಲಿ ಕುಣಬಿಗಳು ಮಳೆಗಾಲಕ್ಕಿಂತ ಮುಂಚೆಯೇ ಗಿಡಗಂಟೆಗಳನ್ನು ಕಡಿದು ಸುಡುವುದರ ಮೂಲಕ ಅರಣ್ಯ ಭೂಮಿಯನ್ನು ಕೃಷಿಗೆ ಅಣಿಗೊಳಿಸಿ ಬೀಜ ಬಿತ್ತುವರು. ಮಳೆಯಾದೊಡನೆ ಬೀಜ ಮೊಳೆತುಬಿಡುವುದು. ಸಾಮಾನ್ಯವಾಗಿ ಬೆಟ್ಟಗುಡ್ಡಗಳ ಇಳಿಜಾರು ಪ್ರದೇಶ ಹಾಗೂ ಕೊಳ್ಳ ಪ್ರದೇಶವನ್ನು ಈ ರೀತಿಯ ಸರದಿ ಕೃಷಿಗೆ ಆಯ್ದುಕೊಳ್ಳುವರು. ಈ ಪ್ರದೇಶದ ಸುತ್ತಲೂ ಕಡಿಯದಿರುವ ಗಿಡಮರಗಳ ರಕ್ಷಣಾವ್ಯೂಹ ನಿರ್ಮಾಣಗೊಳ್ಳುವುದು. ಈ ಸರದಿ ಕೃಷಿ ಪ್ರದೇಶವನ್ನು ಪ್ರತಿ ಎರಡು-ಮೂರು ವರ್ಷಗಳಿಗೊಮ್ಮೆ ಬದಲಾಯಿಸುತ್ತಾರೆ.

ಕುಮರಿ-ಕುಣಬಿ ಸಮುದಾಯದವರು ಕುಮರಿ-ಕೃಷಿ ಅಳವಡಿಕೆಗಾಗಿ ತಮ್ಮ ವಾಸಸ್ಥಳವನ್ನು ಆಗಾಗ ಬದಲಾಯಿಸುತ್ತ ಹೊಸ ಸ್ಥಳ ಹುಡುಕಿಕೊಂಡು ಹೋಗುತ್ತಾರೆ. ಈ ತರಹದ ಕೃಷಿಯಲ್ಲಿ ಬಹುತೇಕ ಬೆಳೆಯುವ ಪ್ರಮುಖ ಬೆಳೆಗಳೆಂದರೆ - ಚಿಕ್ಕ ಕಾಳುಗಳಾದ ನವಣೆ, ಸಜ್ಜೆ, ಎಳ್ಳು, ರಾಗಿ, ಅರಿಷಣ ಕೊಂಬು ಮತ್ತು ವಿಧವಿಧದ ಕಾಯಿಪಲ್ಲೆ, ಗಡ್ಡೆಗೆಣಸು

ಆಗಿರುತ್ತವೆ. ಈ ತರಹದ ಕೃಷಿ ವ್ಯವಸಾಯಕ್ಕೆ ಹಾರೆ, ಗುದ್ದಲಿ, ಪಿಕಾಸಿ, ಸಲಿಕೆ ಮುಂತಾದ ಸರಳ ಸಾಮಾನ್ಯ ಕೃಷಿ ಉಪಕರಣ ಬಳಸಿಕೊಳ್ಳುವರು. ದುಂಡಗಿನ ಆಕೃತಿಯ ಆರು ಮೀಟರ್ ವ್ಯಾಸದ ಗುಂಡಿ (ಹಗೆ) ತೋಡಿ ಬೆಳೆಗಳ ಕಾಳುಗಳ ಸಂಗ್ರಹಣೆಗಾಗಿ ತಮ್ಮ ಕೃಷಿ ಪ್ರದೇಶದ ಹತ್ತಿರದಲ್ಲಿಯೇ ನಿರ್ಮಿಸಿಕೊಂಡಿರುತ್ತಾರೆ.

Fuchs Stephen ಹೇಳುವಂತೆ, ಸರದಿ ಕೃಷಿಯು ಕುಣಬಿ ಬುಡಕಟ್ಟು ಸಮುದಾಯ-ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದ್ದು, ಅವರ ಆರ್ಥಿಕ ಸ್ಥಿತಿ ಹಾಗೂ ಮಾನಸಿಕ ಧೋರಣೆಯ ಮೇಲೆ ನಿಶ್ಚಿತ ಪರಿಣಾಮ ಬೀರುತ್ತದೆ.

Thurston Edger ಉಲ್ಲೇಖಿಸಿದಂತೆ, 'ಸರದಿ ಕೃಷಿ' 'ಕುಣಬಿ ಸಮುದಾಯದ ಪ್ರಮುಖ ಉದ್ಯೋಗವಾಗಿದ್ದು, ಅಲ್ಲಲ್ಲಿ ಕೆಲವರು ಮಾತ್ರ ಕಾಚು ತಯಾರಿಕೆಯ ಉಪವ್ಯವಸಾಯದಲ್ಲಿ ತೊಡಗಿಕೊಂಡಿರುತ್ತಾರೆ.

ನೂತನ ಅರಣ್ಯ ನೀತಿ ಹಾಗೂ ಅರಣ್ಯ ಭೂಮಿ ಅತಿಕ್ರಮಣ, ಅರಣ್ಯ ನಾಶ, ಹೊರಗಿನವರ ಅಕ್ರಮ ಪ್ರವೇಶ ಹಾಗೂ ಆಧುನೀಕರಣ ಪ್ರಕ್ರಿಯೆಯಿಂದಾಗಿ ಕುಣಬಿ ಸಮುದಾಯದವರು ನಿಧಾನವಾಗಿ ಅರಣ್ಯ ಪ್ರದೇಶದಿಂದ ದೂರ ಸರಿಯುತ್ತ, ಗ್ರಾಮಗಳಲ್ಲಿ ಬೆಟ್ಟದ ಸಮೀಪದ ಇಳಿಜಾರು ಪ್ರದೇಶಗಳಲ್ಲಿ ನೆಲೆಹೊಂದುತ್ತಿದ್ದಾರೆ.

ಮನ್ ಆರ್.ಎಸ್. ಅವರು ತಿಳಿಸುವಂತೆ 'ಭಾರತದ ಬುಡಕಟ್ಟು ಸಮುದಾಯದವರು ವಿವಿಧ ಕಾರಣಗಳಿಂದ ದುರವಸ್ಥೆ ಹೊಂದಿ, ಅರಣ್ಯ ಪ್ರದೇಶದ ಸಂಪರ್ಕದಿಂದ ದೂರವಾಗುತ್ತಿದ್ದಾರೆ'. ಈಗ ಕುಣಬಿ ಸಮುದಾಯದವರು ಆಹಾರ ಸಂಗ್ರಹದ ಅಲೆದಾಟದಿಂದ ನೆಲೆನಿಂತು, ಕೃಷಿಯ ಕಾಯಕದಲ್ಲಿ ರೂಪಾಂತರ ಹೊಂದಿದ್ದಾರೆ. ಈ ಸ್ಥಿತ್ಯಂತರದಿಂದ ಕುಣಬಿ ಸಮುದಾಯವು ನಿಧಾನವಾಗಿ ಆರ್ಥಿಕ ಬದಲಾವಣೆಯ ಅನುಭವವನ್ನು ಹೊಂದುತ್ತಿರುವ ಸಂಗತಿ ನಿರ್ವಿವಾದ. ಇದರಿಂದಾಗಿ ತಮ್ಮ ಸಾಂಪ್ರದಾಯಿಕ 'ಸರದಿ ಕೃಷಿ' ತೊರೆದು ಬದಲಿ ಉದ್ಯೋಗ ವ್ಯವಸಾಯದೆಡೆಗೆ ಒಲವು ತೋರುತ್ತಿದ್ದಾರೆ. ಇವುಗಳೆಂದರೆ ಕೃಷಿ ಕೂಲಿ, ಬಾಡಿಗೆ ಕೃಷಿ, ಉಳುವ ರೈತ, ಪಾಲು ಕೃಷಿದಾರರಾಗಿ ಜೀವನ ನಿರ್ವಹಿಸುತ್ತಿರುವರು. ಈ ಕೃಷಿ ಆಧಾರಿತ ಚಟುವಟಿಕೆಗಳಲ್ಲದೆ, ಕೆಲವರು ಬತ್ತದ ಗದ್ದೆ ಹಾಗೂ ಅಡಿಕೆ ತೋಟಗಳಲ್ಲಿ ಕಾವಲುಗಾರರಾಗಿ ಉಪಜೀವನ ನಡೆಸುತ್ತಿದ್ದಾರೆ ಮತ್ತೆ ಕೆಲವರು ಮನೆಯಾಳುಗಳಾಗಿ ದುಡಿಯುವುದನ್ನು ರೂಢಿಸಿಕೊಂಡಿದ್ದಾರೆ.

ಅಧ್ಯಯನದ ಸಮೀಕ್ಷೆಯಲ್ಲಿ ಕುಣಬಿಯರು ಉತ್ತರಿಸಿದಂತೆ, ಕೃಷಿ ಕೂಲಿಯೇ ತಮ್ಮ ಪೂರ್ವಜರ ಮುಖ್ಯ ಕಸಬು ಎಂದಿರುವರು. ಅದಲ್ಲದೆ ತಮ್ಮ ಆದಾಯ ಹೆಚ್ಚಿಸಿಕೊಳ್ಳಲು ಬುಟ್ಟಿ,

ಚಾಪೆ ಹೆಣೆಯುವಿಕೆ, ನೇಕಾರಿಕೆ, ಬೇಟೆ, ಔಷಧೀಯ ಸಸ್ಯ ಗಿಡಮೂಲಿಕೆ ಸಂಗ್ರಹ ಹಾಗೂ ವಿತರಣೆ ಇವರ ಉಪಕಸಬುಗಳಾಗಿವೆ. ಈ ಕುಣಬಿ ಪಂಗಡಗಳಲ್ಲಿ ಅನೇಕರು ಸಾಂಪ್ರದಾಯಿಕ ವೈದ್ಯಕೀಯ ಸೇವೆ ಕೈಗೊಂಡಿದ್ದಾರೆ. ಗಿಡಬಳ್ಳಿ, ಮೂಲಿಕೆ, ಬೇರು, ನಾರು, ಒಣ ತೊಗಟೆಗಳನ್ನು ಔಷಧೀಯ ಗುಣ ಹೊಂದಿದ್ದರಿಂದ ಸ್ತ್ರೀಯರು ಸಂಗ್ರಹಿಸಿ ಹತ್ತಿರದ ನಗರಗಳಲ್ಲಿಯೂ ರಸ್ತೆ ಬದಿ ಮಾರಾಟ ಮಾಡುತ್ತಾರೆ. ಕುಣಬಿ ಸಮುದಾಯದವರಿಗೆ ಔಷಧೀಯ ಗಿಡಮೂಲಿಕೆಗಳ ವಿತರಣೆಯ ಪರಿಣತಿ ಹಾಗೂ ಅನುಭವ ವಂಶ ಪಾರಂಪರ್ಯವಾಗಿ ಬಂದಿದೆ. ಕುಣಬಿ ಸಮುದಾಯ ಹಿರಿಯ ಜೀವಿಗಳಿಗೆ ಔಷಧೀಯ ಸಸ್ಯಗಳ ಜ್ಞಾನ ಚೆನ್ನಾಗಿದೆ. ಇವರು ಯಾವಾಗಲೂ ಅರಣ್ಯ, ಬೆಟ್ಟ-ತಪ್ಪಲು ಪ್ರದೇಶದ ಮಡಿಲಲ್ಲಿ ಇರುವುದರಿಂದ ನಿತ್ಯೋಪಯೋಗಿ ಔಷಧೀಯ ಸಸ್ಯಗಳು ಹಾಗೂ ಮೂಲಿಕೆಗಳು ಯಾವಾಗಲೂ ಹೇರಳವಾಗಿ ದೊರೆಯುತ್ತವೆ. ಕಾಡುಗಳ ನಾಶದಿಂದ, ನಗರೀಕರಣದ ಚಟುವಟಿಕೆಗಳಿಂದ ಔಷಧೀಯ ಸಸ್ಯಗಳು ನಾಶವಾಗುತ್ತಿವೆ.

ಆಹಾರ ಸಂಗ್ರಹಣೆಯಾಗಲೀ, ಬೇಟೆಯಾಗಲೀ ಅಥವಾ ಕುಮರಿ ಕೃಷಿಯಾಗಲೀ ಇಂದು ಅನೇಕ ಸ್ಥಿತ್ಯಂತರಗಳಿಗೆ ಒಳಗಾಗಿವೆ. ಅವರಿಗೆ ನೆಲೆಯಾಗಿದ್ದ ಭೂಮಿ ಇಂದು ಅವರಿಗೆ ಸಮಸ್ಯೆಯಾಗಿ ಪರಿಣಮಿಸುತ್ತಿದೆ. ಆಶ್ರಯ ನೀಡಿದ್ದ ಅರಣ್ಯ ಅವರ ಕೈತಪ್ಪಿದೆ, ಅನೇಕ ಸ್ಥಿತ್ಯಂತರಗಳ ನಡುವೆಯೂ ಈ ಮೂರು ಜೀವನ ಪದ್ಧತಿಗಳು ಕುಣಬಿಯರಲ್ಲಿ ಇಂದಿಗೂ ಉಳಿದುಕೊಂಡು ಬಂದಿವೆ. ಅನೇಕ ಆತಂಕಗಳ ನಡುವೆಯೂ ಪರಂಪರೆಯ ಜೀವನ ಕ್ರಮಗಳು ಹೆಗೋ ಹಾಗೆ ಸಾಗಿ ಬರುತ್ತಿವೆ.

**ಉಪಕಸಬುಗಳು**

ಕುಣಬಿಯರ ಬದುಕು ಮತ್ತು ಅವರ ವೃತ್ತಿ ಪರಸ್ಪರ ಒಂದನ್ನೊಂದು ಸಂಬಂಧವನ್ನು ಹೊಂದಿವೆ. ಆದ್ದರಿಂದ ಈ ಸಮುದಾಯದವರು ಕೃಷಿಯನ್ನೇ ಜೀವನದ ವೃತ್ತಿಯನ್ನಾಗಿ ಮಾಡಿಕೊಂಡು ಕೃಷಿಗೆ ಹೊಂದಾಣಿಕೆಯಾಗುವಂತೆ ಅನೇಕ ಉಪಕಸಬುಗಳಾದ ಬೇಟೆ, ಮೀನುಗಾರಿಕೆ, ಪಶುಪಾಲನೆ, ಕುಮರಿ ಬೇಸಾಯ, ಕೈತೋಟ, ಕೃಷಿ ಕೂಲಿ ಮತ್ತು ಗೃಹ ಕೈಗಾರಿಕೆಗಳನ್ನು ದಿನನಿತ್ಯದ ಬದುಕಿನಲ್ಲಿ ಮಾಡುತ್ತಾ ಬಂದಿದ್ದಾರೆ. ಇದರಿಂದಾಗಿ ಈ ಸಮುದಾಯದವರು ಮಾಡುತ್ತಾ ಬಂದಿರುವ ಕಸಬುಗಳನ್ನು ವಿವರವಾಗಿ ನೋಡುವ.

**ಬೇಟೆ**

ಬೇಟೆ ಆದಿಮ ಜನ ಸಮುದಾಯಗಳ ಪುರಾತನ ಆಹಾರ ಉತ್ಪಾದನಾ ವಿಧಾನ. 'ನಾಗರಿಕನಾಗಿ' ಬೆಳೆದು ನಿಂತಿರುವ ಇಂದಿನ ಬಹುತೇಕ ಎಲ್ಲಾ ಸಮುದಾಯಗಳು ಬೇಟೆಯ

ಹಂತವನ್ನು ದಾಟಿಯೇ ಇಂದಿನ ವ್ಯವಸ್ಥೆಗೆ ಬಂದು ತಲುಪಿವೆ. ಬೇಟೆ ಇಂದು ಸಂಪೂರ್ಣವಾಗಿ ನಿಷೇಧಿಸಲ್ಪಟ್ಟಿದೆ. ಒಂದು ಕಾಲಕ್ಕೆ ಉಪ ವೃತ್ತಿಯೇ ಆಗಿದ್ದ ಬೇಟೆ ಕುಣಬಿಯರಿಗೆ ಇಂದು ಅದು ಅಪರೂಪದ ಸಂಗತಿ. ಕುಣಬಿಗಳು ಇಂದಿಗೂ ಕಾಡಿನಲ್ಲಿ ಇರುವುದರಿಂದ ಬೇಟೆ ಅವರ ಬದುಕಿನ ಭಾಗವಾಗಿ ಉಳಿದುಕೊಂಡು ಬಂದಿದೆ. ಕುಣಬಿ ಜನರ ಮಾತೃ ಭಾಷೆಯಲ್ಲಿ ಬೇಟೆಯಾಡುವಿಕೆಗೆ ಬೌಂಡಿ (Bowndi) ಎನ್ನುವರು. ಅವರು ಬೇಟೆಯಲ್ಲಿ ಪರಿಣಿತರೆಂದು ಪ್ರಸಿದ್ಧಿ ಪಡೆದಿದ್ದಾರೆ, ಅವರು ಬೇಟೆಯ ಪ್ರಾಣಿಯನ್ನು ಗುರುತಿಸಿ, ಗುರಿ ಇಟ್ಟು ಹೊಡೆದು ಕೊಲ್ಲುವುದನ್ನು ಸ್ಥಳೀಯರು ಮೆಚ್ಚುತ್ತಾರೆ. ಆದ ಕಾರಣ ಸ್ಥಳೀಯರು ಬೇಟೆಗೆ ಹೋಗುವಾಗ ಕುಣಬಿ ಸಮುದಾಯದ ಪರಿಣಿತರನ್ನು ಕರೆದುಕೊಂಡು ಹೋಗುತ್ತಾರೆ. ಕುಣಬಿ ಜನರ ಬೇಟೆಯ ಆಯುಧಗಳೆಂದರೆ ಈಟಿ, ಕೊಡಲಿ, ಹಗ್ಗ, ಬಲೆ ಮತ್ತು ಬಡಿಗೆಗಳಾಗಿವೆ. ಇವರು ಬಲೆ ಹಾಗೂ ಹಗ್ಗಗಳಿಂದ ಕಾಡು ಜಿಂಕೆ ಮತ್ತು ಇತರ ಕಾಡು ಪ್ರಾಣಿಗಳನ್ನು ಸೆರೆ ಹಿಡಿಯುತ್ತಾರೆ. ವಿಶಿಷ್ಟ ಹಗ್ಗ ಕುಣಿಕೆಗಳಿಂದ ಹಕ್ಕಿಗಳನ್ನು ಸೆರೆ ಹಿಡಿಯುವರು. ಕಾಡು ಹಂದಿ ಹಿಡಿಯುವಾಗ ಈಟಿ, ಬಡಿಗೆ, ಹಗ್ಗಗಳನ್ನು ಉಪಯೋಗಿಸುವರು.

ಈ ಬೇಟೆಯ ಆಯುಧಗಳನ್ನು ಸ್ವತಃ ತಯಾರಿಸಿಕೊಳ್ಳುವರು. ಇಲ್ಲವೆ ನೆರೆಹೊರೆಯ ಬುಡಕಟ್ಟು ಪಂಗಡಗಳಿಂದ ಆಯುಧಗಳನ್ನು ಎರವಲು ಪಡೆಯುವರು. ಕಬ್ಬಿಣದ ಚೂಪು ಕೊಡಲಿಗಳನ್ನು ಸ್ಥಳೀಯ ಕಮ್ಮಾರನಿಂದ ಖರೀದಿಸುವರು. ಇವರು ಹಗ್ಗ, ಬಲೆ, ಕುಣಿಕೆ ತಯಾರಿಸಲು ಬೇಕಾಗುವ ನಾರು, ಒಣ ತೊಗಟೆ, ಬಳ್ಳಿಗಳನ್ನು ಅರಣ್ಯ ಪ್ರದೇಶದಲ್ಲಿ ಶೋಧಿಸಿ, ಸಂಸ್ಕರಿಸಿ ಹಗ್ಗ ಮತ್ತು ಬಲೆಗಳನ್ನು ತಾವೇ ತಯಾರಿಸಿಕೊಳ್ಳುವರು. ಈ ಹಗ್ಗ ಮತ್ತು ಬಲೆಗಳಿಂದ ಕಾಡು ಹಂದಿ, ಮೊಲ, ಪಾರಿವಾಳಗಳನ್ನು ಸೆರೆ ಹಿಡಿಯುತ್ತಿದ್ದರು. ಸಾಮಾನ್ಯವಾಗಿ ಹಗ್ಗ, ಬಲೆ ತಯಾರಿಸಲು ಎರಡು-ಮೂರು ವರ್ಷ ಹಿಡಿಯುತ್ತದೆ. ಒಂದು ಬಲೆ ಸರಾಸರಿ ೧೦ ರಿಂದ ೧೫ ಅಡಿ ಉದ್ದವಿದ್ದು ಈ ಬಲೆಯನ್ನು ೧೫ ರಿಂದ ೨೦ ವರ್ಷಗಳವರೆಗೆ ಚೆನ್ನಾಗಿ ಬಳಸಬಹುದಾಗಿದೆ.

ಬೇಟೆಗಾರಿಕೆಯಲ್ಲಿ ಸ್ಥೂಲವಾಗಿ ಎರಡು ಪದ್ಧತಿಗಳಿವೆ:

೧. ಸಣ್ಣ ಬೇಟೆ Sanlibet (Sosebet)

೨. ದೊಡ್ಡ ಬೇಟೆ Oldibet (Ranabet)

**೧. ಸಣ್ಣ ಬೇಟೆ**

ಸಣ್ಣ ಬೇಟೆ ಕಟ್ಟುವುದಕ್ಕೆ ಹೆಂಗಸರು-ಗಂಡಸರು ಒಟ್ಟಿಗೆ ಹೋಗುತ್ತಾರೆ, ಈ ಬೇಟೆಗೆ ಬೇಕಾಗುವ ಬಲೆಯ ಎತ್ತರ ಮೂರುವರೆ ಅಡಿ, ೬-೭ ಮಾರು ಉದ್ದ ಇರುತ್ತದೆ. ಬಲೆಯ ತುದಿಯಲ್ಲಿ ದಾರಕ್ಕೆ ಕಲ್ಲು ಕಟ್ಟಿರುತ್ತಾರೆ ಅಥವಾ ಮರಕ್ಕೆ ಕಟ್ಟಿರುತ್ತಾರೆ. ಇನ್ನೊಂದು ಕಡೆಯಿಂದ

ಪ್ರಾಣಿಗಳನ್ನು ಅಟ್ಟಿಸಿಕೊಂಡು ಈ ಬಲೆಯಲ್ಲಿ ಬೀಳಿಸುತ್ತಾರೆ, ಇದು ಸಣ್ಣ ಬೇಟೆ. ಸರಳ-ಸುಲಭ ರೀತಿಯ ಈ ಬೇಟೆಯಲ್ಲಿ ಮೊಲಗಳನ್ನು ಸೆರೆ ಹಿಡಿಯುತ್ತಾರೆ.

**೨. ದೊಡ್ಡ ಬೇಟೆ**

ಇದು ಸುಮಾರು ೬-೭ ಅಡಿ ಎತ್ತರವಿದ್ದು ೧೨-೧೩ ಮಾರು ಉದ್ದ ಇರುತ್ತದೆ. ಸುಮಾರು ೧೦-೧೧ ಅಡಿ ಉದ್ದದ ಕಳಿಗಳನ್ನು ಏರಿಸಿ ಬೇಟೆಯಲ್ಲಿ ಉದ್ದವಾಗಿ ಸುಮಾರು ೧೫-೧೬ ಬಲೆಗಳನ್ನು ಇಡುತ್ತಾರೆ. ಇದು ದೂರದ ಬೆಟ್ಟದಲ್ಲಿ ಅಂದರೆ ದಟ್ಟ ಅರಣ್ಯವಿರುವ ಬೆಟ್ಟದಲ್ಲಿ ಬೇಟೆಯಾಡುತ್ತಾರೆ. ಬಹಳ ಜನ ಸೇರಿ ಆಡುವ ಬೇಟೆ, ಈ ಬೇಟೆಗೆ ಗಂಡಸರೇ ಹೋಗುತ್ತಾರೆ. ಬೆಟ್ಟದಲ್ಲಿ ಪ್ರಾಣಿಗಳನ್ನು ಅಟ್ಟಿಸಿಕೊಂಡು ದೊಡ್ಡ ಕೋಲುಗಳನ್ನು ಹಿಡಿದು ಹಿಂಡುಗಳನ್ನು, ಅಟ್ಟಿಸಿಕೊಂಡು ಬಂದು ಬಲೆಯಲ್ಲಿ ಕೆಡವಿ, ಬರ್ಚಿ, ಈಟಿಗಳಿಂದ ಕೊಲ್ಲುತ್ತಾರೆ. ಈ ಬೇಟೆ ಪ್ರಾಣಿಗಳು ಹಂದಿ, ಕಡವೆ, ಮಿಗ, ಕಾಡು ಕುರಿ, ಬರ್ಕ, ಮುಳ್ಳುಹಂದಿ, ಇವು ದೊಡ್ಡ ಬೇಟೆ ಪ್ರಾಣಿಗಳಾಗಿವೆ. ಹಾಗೆಯೇ ವಯಕ್ತಿಕ ಬೇಟೆಗಳು ಸಹ ಇವೆ. ಮೊಲ, ಕಾಡು ಕೋಳಿ, ಉಡ, ಚಿಪ್ಪು ಉಡ, ಮುಂತಾದವುಗಳನ್ನು ಬೇಟೆಯಾಡುತ್ತಾರೆ.

ಬೇಟೆಯಾಡದಿದ್ದರೆ ಊರಿನಲ್ಲಿ ತೊಂದರೆಯಾಗುವುದು ಎಂಬ ನಂಬಿಕೆ ಕೂಡ ಇವರಲ್ಲಿದೆ. ಬೇಟೆಯ ಮೊದಲು ದೇವರಲ್ಲಿ ಕೇಳುವ ವಾಡಿಕೆ ಇದೆ. ಕುಣಬಿಗಳು ಬೇಟೆಯಲ್ಲಿ ಗುಂಪುಗಳನ್ನು ಮಾಡಿಕೊಂಡು ಮುನ್ನಡೆಯುತ್ತಾರೆ. ಪ್ರತಿ ಗುಂಪಿನಲ್ಲಿಯೂ ಕನಿಷ್ಠ ೫೦ ರಿಂದ ಗರಿಷ್ಠ ೧೦೦ ಜನ ಬೇಟೆಗಾರರಿರುತ್ತಾರೆ. ಹಿರಿಯರೊಂದಿಗೆ ಕಿರಿಯರು ಬೇಟೆಯಲ್ಲಿ ಸಹಕರಿಸುತ್ತಾರೆ. ಕುಣಬಿ ಸಮುದಾಯದವರು ಬೇಟೆಗೆ ಹೊರಡುವುದಕ್ಕಿಂತ ಸಾಕಷ್ಟು ಮುಂಚೆಯೇ ಜೊತೆಗೆ ಕರೆದುಕೊಂಡು ಹೋಗಬಹುದಾದ ಜನರ ಬಗ್ಗೆ ನಿರ್ಧರಿಸಿ ಹೊರಡುವ ಸ್ಥಳ, ಸಮಯ, ಆಯುಧಗಳ ಸಾಗಣೆ ಹಾಗೂ ಪ್ರಾಣಿಯ ಮಾಂಸ ಹಂಚಿಕೆಯ ಬಗ್ಗೆ ಸೂಕ್ತ ಯೋಜನೆ ತಯಾರಿಸಿಕೊಳ್ಳುತ್ತಾರೆ. ಗುಂಪು ಬೇಟೆ ಸಾಮಾನ್ಯವಾಗಿ ಮಧ್ಯಾಹ್ನದ ಸಮಯಕ್ಕೆ ಆರಂಭವಾಗುತ್ತದೆ, ಕಾಡು ಹಂದಿಗಳ ಬೇಟೆಯನ್ನು ಸಾಮಾನ್ಯವಾಗಿ ಮಳೆಗಾಲದಲ್ಲಿ ಇಟ್ಟುಕೊಳ್ಳುತ್ತಾರೆ. ಜೋಗಿ ಕುಣಬಿ ಸಮುದಾಯದವರು ಸಾಮಾನ್ಯವಾಗಿ ೧೫ ದಿನಗಳಿಗೊಮ್ಮೆ ಅಥವಾ ತಿಂಗಳಲ್ಲಿ ಒಂದು ಸಲ ಗುಂಪು ಬೇಟೆ ಯೋಜಿಸಿಕೊಂಡು ವ್ಯವಸ್ಥಿತ ಸಿದ್ಧತೆ ಮಾಡಿಕೊಳ್ಳುವರು.

ಸಾಮೂಹಿಕ ಬೇಟೆ ಯೋಜಿಸಿದಾಗ ಕೆಲವೊಂದು ಸಾಂಪ್ರದಾಯಿಕ ಪೂಜೆ ಪುನಸ್ಕಾರಗಳನ್ನು ಮುಂಚೆ ಹಾಗೂ ನಂತರ ಮಾಡಬೇಕಾಗುವುದು. ಬೇಟೆಯ ಬಲೆ, ಆಯುಧ ಹಾಗೂ ಇನ್ನಿತರ ಉಪಕರಣಗಳನ್ನು ಭಯಭಕ್ತಿಯಿಂದ ಪೂಜಿಸಿ, ಸಕಲ ಯಶಸ್ವಿಗಾಗಿ ಪ್ರಾರ್ಥಿಸುವರು. ಬೇಟೆಯ ಬಲೆ ಹಾಗೂ ಇನ್ನಿತರ ಸಾಮಗ್ರಿಗಳು ತುಂಬಾ ಪವಿತ್ರ ವಸ್ತುಗಳು.

ಕುಣಬಿ ಸಮುದಾಯದಲ್ಲಿ ಬೇಟೆಗೆ ಹೊರಡುವಾಗ, ಬೇಟೆ ದೇವತೆಯನ್ನು ಬಾಳೆ ಎಲೆಗಳಿಂದ ಸಿಂಗರಿಸಿ ಬಾಳೆಹಣ್ಣು, ತೆಂಗಿನಕಾಯಿ ಹಾಗೂ ಇತರ ಹಣ್ಣುಗಳನ್ನು ಅರ್ಪಿಸಿ ಪೂಜಿಸುವರು. ಈ ಪೂಜೆಯನ್ನು ಗುರಿಕಾರನ ಮನೆಯ ತುಸು ದೂರದಲ್ಲಿ ಎತ್ತರ ಪ್ರದೇಶದಲ್ಲಿ ನೆರವೇರಿಸುವರು. ಮಾಸಿಕ ಋತು ಸಮಯದಲ್ಲಿ ಹೆಣ್ಣು ಮಕ್ಕಳಿಗೆ ಬೇಟೆ ಆಯುಧಗಳನ್ನು ಮುಟ್ಟಲು ನಿರ್ಬಂಧ ಇರುತ್ತದೆ. ಕಾಡು ಹಂದಿಯ ಬೇಟೆಯಾಡಿ ಅರ್ಪಿಸಿದಾಗ ಕೆಂಪಣ್ಣ ದೇವರಿಗೆ ಪೂಜೆ ಸಲ್ಲಿಸಿದಂತಾಗುವುದು ಎಂಬ ನಂಬಿಕೆ ಕುಣಬಿ ಸಮುದಾಯದಲ್ಲಿದೆ.

ಬೇಟೆಗಾರರು ಅರಣ್ಯ ಪ್ರವೇಶ ಮಾಡಿದೊಡನೆ ತಮ್ಮ ತಮ್ಮ ಆಯುಧ ಹಾಗೂ ಸಲಕರಣೆಗಳಿಂದ ನಿರ್ಧಿಷ್ಟ ಸ್ಥಾನವನ್ನು ವಹಿಸಿಕೊಳ್ಳುವರು. ಎಲ್ಲರೂ ವೃತ್ತಾಕಾರದಲ್ಲಿ ಸನ್ನದ್ಧರಾಗಿ ಜೋರಾಗಿ ಬೊಬ್ಬೆ ಹೊಡೆಯುವುದಲ್ಲದೆ, ಬಡಿಗೆಗಳಿಂದ ಪೊದೆಗಳ ಮೇಲೆ ಬಡಿಯುತ್ತ ಕಾಡು ಪ್ರಾಣಿಗಳನ್ನು ಹೆದರಿಸಲು ಪ್ರಯತ್ನಿಸುವರು. ಅದರಲ್ಲೂ ಮುಳ್ಳು ಹಂದಿ ಹಾಗೂ ಕಾಡು ಹಂದಿಗಳು ದಿಕ್ಕಾಪಾಲಾಗಿ ಹೆದರಿ ಓಡತೊಡಗುತ್ತವೆ, ಆಗ ಪೊದೆಗಳಲ್ಲಿ ಅವಿತ ಬೇಟೆಗಾರರು ತಮ್ಮ ಆಯುಧಗಳಿಂದ ಅವುಗಳನ್ನು ಕೊಲ್ಲುವರು. ಆ ನಂತರ ಬೇಟೆಯಾಡಿದ ಪ್ರಾಣಿಯನ್ನು ಗಿಡದ ಎಲೆ–ಬಳ್ಳಿಗಳಿಂದ ಮುಚ್ಚಿ ಸಾಂಪ್ರದಾಯಿಕ ಮೆರವಣಿಗೆಯಲ್ಲಿ ಊರಿಗೆ ಒಯ್ದು ಪ್ರಾಣಿ ಮಾಂಸವನ್ನು ಹಂಚುವರು, ಇದು ಕೂಡ ಸಾಂಪ್ರದಾಯಿಕ ಆಚರಣೆಯ ಮಹತ್ವದ ಅಂಶವಾಗಿದೆ. ಮಾಂಸ ಹಂಚಿಕೆಯ ಪೂರ್ವದಲ್ಲಿ ದೇವ–ದೇವತೆಗಳಿಗೆ ಸಮರ್ಪಿಸುವರು. ಅದು ಕೂಡ ಬೆಟ್ಟ ಪ್ರದೇಶದ ಎತ್ತರದ ಸ್ಥಳದಲ್ಲಿ ಎಲೆಯಲ್ಲಿ ಬೇಟೆ ಪ್ರಾಣಿಯ ಮಾಂಸವನ್ನು ಎಡೆಗೆ ಇಟ್ಟು ಸಾಮೂಹಿಕ ಪ್ರಾರ್ಥನೆ ಸಲ್ಲಿಸುವರು. ಬಲಭಾಗದಲ್ಲಿ ತುಸು ಮಾಂಸವನ್ನು ಚೆಲ್ಲಿ ನಿಗೂಢ ಶಕ್ತಿ ದೇವತೆಗಳಿಗೆ ನೈವೇದ್ಯ ನೀಡುವರು. ಈ ಸಂಪ್ರದಾಯ ಪಾಲಿಸದಿದ್ದರೆ, ಮುಂದಿನ ಬೇಟೆ ಅಯಶಸ್ವಿಯಾಗುವುದೆಂಬ ನಂಬಿಕೆ ಕುಣಬಿ ಸಮುದಾಯದವರಲ್ಲಿದೆ.

ಕುಣಬಿ ಸಮುದಾಯದವರಲ್ಲಿ ಒಂದು ವೇಳೆ ಕಾಡು ಹಂದಿ ಬೇಟೆಯ ಆಹುತಿ ಆಗಿದ್ದರೆ, ಬಲೆಯನ್ನು ನೀಡಿದ ವ್ಯಕ್ತಿಗೆ ಗೌರವ ಪಾಲಿನ ದ್ಯೋತಕವಾಗಿ ಪ್ರಾಣಿಯ ತಲೆ, ಹಿಂಗಾಲು, ಬೆನ್ನೆಲುಬು ಹಾಗೂ ಪಾದದ ಮಾಂಸ ದೊರೆಯುತ್ತದೆ. ಕೊಡಿಯಾಲ ಕುಣಬಿ ಸಮುದಾಯದಲ್ಲಿ ಬೇಟೆಗಾರನಿಗೆ ತಲೆ, ಎದೆ, ಬೆನ್ನೆಲುಬು, ಶ್ವಾಶಕೋಶದ ಭಾಗ ದೊರೆಯುತ್ತದೆ. ಇವರಲ್ಲಿ ಮತ್ತೊಂದು ರೂಢಿಯೆಂದರೆ ಭೂಮಿಯ ಒಡೆಯನಿಗೆ ಪ್ರಾಣಿಯ ಮುಂಗಾಲನ್ನು ಗೌರವಪೂರ್ವಕವಾಗಿ ನೀಡುತ್ತಾರೆ, ಯಾರಿಗೂ ಹೆಚ್ಚಿನ ಪಾಲು ನೀಡುವುದಿಲ್ಲ.

ಕುಣಬಿ ಸಮುದಾಯದಲ್ಲಿ ಕಾಡು ಹಂದಿಯ ಪಿತ್ತಜನಕಾಂಗವನ್ನು ಒಣಗಿಸಿ ಬಿದಿರು ದಂಟಿನಲ್ಲಿ ಸಂಗ್ರಹಿಸಿ ಮುಂದಿನ ವರ್ಷದ ಹೋಳಿಹಬ್ಬದವರೆಗೆ ಕಾಯ್ದಿರಿಸುವರು, ಅನಂತರ ಹೋಳಿ ಹಬ್ಬದಂದು ಒಣಗಿದ ಮಾಂಸದ ತುಂಡನ್ನೇ ನೈವೇದ್ಯವೆಂದು ಅರ್ಪಿಸಿ ಸೇವಿಸುವರು.

ಈಗಿನ ಪರಿಸ್ಥಿತಿಯನ್ನು ಗಮನಿಸಿದಾಗ ನಾವು ಬೇಟೆಗಾರಿಕೆಯಲ್ಲಿ ಅನೇಕ ಬದಲಾವಣೆಗಳನ್ನು ಕಾಣುತ್ತೇವೆ. ಈಗ ಅಡವಿಯಿಂದ ಕಟ್ಟಿಗೆ ಸಂಗ್ರಹಿಸುವ ಬಗ್ಗೆ ಪ್ರತಿಬಂಧ ಇರುವುದರಿಂದ ಕುಣಬಿ ಸಮುದಾಯದವರಿಗೆ ನಾರು ದೊರಕುವುದೇ ದುರ್ಲಭ. ಇತರ ಕಚ್ಚಾ ಸಾಮಗ್ರಿ ಸಿಗುವುದೂ ಕಷ್ಟದಾಯಕ. ಹೀಗಾಗಿ ಸಾಂಪ್ರದಾಯಿಕ ಬಲೆ ತಯಾರಿಸುವುದನ್ನು ಬಿಟ್ಟು ಕುಣಬಿ ಸಮುದಾಯದವರು ನೈಲಾನ್ ದಾರವನ್ನು ಬಳಸಿ ಬಲೆ ನೇಯುವುದಕ್ಕೆ ಪ್ರಾರಂಭಿಸಿದ್ದಾರೆ. ಅವಿಭಕ್ತ ಕುಟುಂಬದಿಂದ ವೈಯಕ್ತಿಕ ಕುಟುಂಬಗಳು ರೂಪುಗೊಳ್ಳುತ್ತಿರುವ ಸಂದರ್ಭದಲ್ಲಿ ಸಮೂಹ ಬೇಟೆ ಪದ್ಧತಿ ತೀವ್ರವಾಗಿ ರೂಪಾಂತರ ಹೊಂದಿದೆ. ಈಗ ಅರಣ್ಯ ಇಲಾಖೆಯ ಕಾನೂನು ಕಟ್ಟೆಚ್ಚರಗಳಿಂದಾಗಿ ತಮ್ಮ ಪ್ರಿಯ ಆಹಾರವನ್ನು ಕಿತ್ತುಕೊಳ್ಳಲಾಯಿತು ಎಂಬ ಅಸಮಾಧಾನ ಕೆಲವು ಹಿರಿಯರಲ್ಲಿದೆ ಹಾಗೂ ಕಾಡು ಪ್ರಾಣಿಗಳ ಇಳಿಮುಖ ಇರುವ ಕಾರಣ ಕುಣಬಿ ಪಂಗಡದಲ್ಲಿಯೂ ಬದಲಾವಣೆಯ ಪರಿಣಾಮ ಬೀರಿದೆ. ಇನ್ನೊಂದು ಸ್ವಾರಸ್ಯದ ಸಂಗತಿ ಎಂದರೆ ಇತ್ತೀಚೆಗಿನ ಯುವ ಕುಣಬಿ ಸಮುದಾಯದ ಪೀಳಿಗೆಯವರಿಗೆ ಸಾಂಪ್ರದಾಯಿಕ ಬೇಟೆ ಹಾಗೂ ಬಲೆ ತಯಾರಿಕೆ ಗೊತ್ತೇ ಇರುವುದಿಲ್ಲ. ಇತ್ತೀಚೆಗಿನ ಯುವ ಪೀಳಿಗೆ ಬೇಟೆಯ ಗೊಡವೆಯೇ ಬೇಡ ಎಂದು ಸುಮ್ಮನಾಗಿದೆ. ಆದರೂ ಕೆಲವು ನಿಷ್ಣಾತ ಬೇಟೆಗಾರರು ಇಂದಿಗೂ ಕುಣಬಿ ಸಮುದಾಯದಲ್ಲಿದ್ದಾರೆ.

ಸಿಂಗ್ ಕೆ.ಎಸ್. ಅವರು ಗಮನಿಸಿದಂತೆ, 'ಭಾರತ ಉಪಖಂಡದಲ್ಲಿ ಕಾಡು ಪ್ರಾಣಿಗಳ ತೀವ್ರ ಇಳಿಮುಖ ಹಾಗೂ ಅರಣ್ಯ ಸಂಪತ್ತು ನಶಿಸುತ್ತಿರುವ ಸಂದರ್ಭದಲ್ಲಿ ಬೇಟೆಗಾರಿಕೆಯು ಸಂಪೂರ್ಣ ಮಾಯವಾಗಿದೆ. ಅನೇಕ ವಿರಳ ಜಾತಿಯ ಪ್ರಾಣಿಗಳ ಸಂರಕ್ಷಣಾ ಕಾಯ್ದೆ ಜಾರಿಗೆ ಬಂದಿರುವುದರಿಂದ, ಬೇಟೆ ಈಗ ಸಾಂಪ್ರದಾಯಿಕ, ಧಾರ್ಮಿಕ ವಿಧಿ ಎನ್ನುವ ಮಟ್ಟಿಗೆ ಉಳಿದಿದೆ'.

ಒಟ್ಟಾರೆಯಾಗಿ ಹೇಳುವುದಾದರೆ ಸಾಕು ಪ್ರಾಣಿಗಳ ಸಾಕಾಣಿಕೆಯಿಂದ ದೂರವಿರುವ ಕುಣಬಿಯರು ಮಾಂಸಾಹಾರದಿಂದ ವಂಚಿತರಾಗಿದ್ದಾರೆ. ಅವರ ಪ್ರಿಯ ಆಹಾರವನ್ನು ನಮ್ಮ ವ್ಯವಸ್ಥೆ ಕಸಿದುಕೊಂಡಿದೆ ಎಂಬುದು ನಿಜವಾದರೂ ಅದು ಅನಿವಾರ್ಯವೂ ಹೌದು ಎಂಬುದನ್ನು ಒಪ್ಪಿಕೊಳ್ಳಲೇಬೇಕು. ಇಂದಿನ ಯುವ ಪೀಳಿಗೆ ಬೇಟೆಯಿಂದ ದೂರ ಸರಿದಿದೆ ಎಂಬುದಂತೂ ಸತ್ಯ. ಇದರಿಂದ ಕುಣಬಿಯರ ಆಹಾರ ಕ್ರಮದ ಮೇಲೆ ಪರಿಣಾಮವಾಗಿದೆಯೇ ಹೊರತು ಆರ್ಥಿಕತೆ ಮೇಲೆ ತೀವ್ರವಾದ ಪರಿಣಾಮವೇನೂ ಆಗಿಲ್ಲ.

**ಮೀನುಗಾರಿಕೆ**

ಕುಣಬಿ ಸಮುದಾಯವು ಬೇಟೆಯಲ್ಲದೇ ಮೀನುಗಾರಿಕೆಯಲ್ಲಿಯೂ ಕ್ರಿಯಾಶೀಲವಾಗಿ ಭಾಗವಹಿಸುತ್ತಾರೆ. ಆದರೆ ಇದು ಗುಂಪು ಚಟುವಟಿಕೆಯಾಗಿರದೆ ಮನೆ-ಮನೆಯ ವೈಯಕ್ತಿಕ ಕಸುಬಾಗಿರುತ್ತದೆ. ಅದಾಗ್ಯೂ ಮೀನುಗಾರಿಕೆ ಕುಣಬಿಗಳ ನಿಯಮಿತ ಉಪಜೀವನ ಮಾರ್ಗವಲ್ಲವೆಂದೇ ಹೇಳಬಹುದು. ಮಳೆಗಾಲದಲ್ಲಿ ಮಾತ್ರ ಸ್ವರುಚಿಗಾಗಿ ಹತ್ತಿರದ ನದಿ, ಕೆರೆ ಅಥವಾ ಹಳ್ಳಗಳಲ್ಲಿ ಮೀನು ಹಿಡಿಯಲು ಹೋಗುವರು. ಬಲೆಯನ್ನು ನಾರಿನ ಹಗ್ಗದಿಂದ ತಯಾರಿಸುವರು. ಮೀನಿನ ಆಹಾರ ಹಾಗೂ ಸಂಖ್ಯೆಯನ್ನು ಅವಲಂಬಿಸಿ ಬಲೆಯ ಅಳತೆ ಹಾಗೂ ಆಕಾರ ನಿರ್ಧರಿತವಾಗುವುದು. ಬಲೆಯನ್ನು ಬಿದರಿನ ಕೋಲಿಗೆ ಸಿಕ್ಕಿಸಿ ಕೊಕ್ಕೆಯಂತೆ ಉಪಯೋಗಿಸುವರು. ಬಳ್ಳಿ ಹಾಗೂ ನಾರನ್ನು ಮೀನು ಬಲೆ ತಯಾರಿಸಲು ಉಪಯೋಗಿಸುತ್ತಾರೆ.

ಝಾಲಿ (Zali) ಎಂಬ ಸಾಂಪ್ರದಾಯಿಕ ಬಲೆಯನ್ನು ದೊಡ್ಡ ಮೀನು ಹಿಡಿಯಲು ಕುಣಬಿಗಳು ಬಳಸುತ್ತಾರೆ. ಬಹಳ ಮೀನು ಹಿಡಿಯಲು ಝೂಲ (Zool) ಎಂಬ ಬೇರೆ ಬಲೆ ಬಳಸುವರು. ಗೋರ್ಜಲಿ (Gorzali) ಎಂಬ ಬಲೆಯನ್ನು ಸಣ್ಣ ಸಣ್ಣ ಮೀನು ಹಿಡಿಯಲು ಬಳಸುವರು. ಕಂಕುಲಿ ಬಲೆಯನ್ನು ಉದ್ದ ಆಕಾರದ ಕ್ಷಿಪ್ರಗತಿ ಮಾರಾಟಗುಣ ಪಡೆದ ಮೀನು ಹಿಡಿಯಲು ಉಪಯೋಗಿಸುವರು. ಬೀಸು ಬಲೆಯನ್ನು ನೀರಿನ ಪಾತಳಿಯ ಮೇಲೆ ವೃತ್ತಾಕಾರದಲ್ಲಿ ಹರಡಿ ಮೀನು ಹಿಡಿಯುವರು. 'ಬೀಡುಬಲೆ' ಎಂಬ ಬಲೆಯನ್ನು ಆಳ ನೀರಿನಲ್ಲಿ ಮೀನು ಹಿಡಿಯಲು ಬಳಸುವರು. ಈ ಎಲ್ಲಾ ರೀತಿಯ ಬಲೆಗಳಲ್ಲಿ ಕೆಲವೊಂದು ಬಲೆಗಳನ್ನು ಸ್ಥಳೀಯ ಮೀನುಗಾರರು ಬಳಸುತ್ತಾರೆ. ಈ ಬಲೆಗಳ ಬಳಕೆಯಲ್ಲದೇ ಗಾಳಕ್ಕೆ ಆಹಾರದ ತುಂಡು ಅಥವಾ ಮೀನಿನ ತುಂಡು ಸಿಕ್ಕಿಸಿ, ಮೀನು ಹಿಡಿಯುವಿಕೆಗೆ 'ಗೋರೆ' (Gore) ಎನ್ನುವರು. ಅಲ್ಲದೆ ಶಂಕುವಿನಾಕಾರದ ಬಿದುರು ಕೊಕ್ಕೆಯನ್ನು ಮೀನು ಮತ್ತು ಏಡಿ ಹಿಡಿಯಲು ಬಳಸುವರು.

**ಪಶುಪಾಲನೆ**

ಸಾಮಾನ್ಯವಾಗಿ ಪಾರಂಪರಿಕ ಕೃಷಿ ಸಮುದಾಯಗಳು ಒಂದು ಕಾಲಕ್ಕೆ ಪಶುಪಾಲಕ ಸಮುದಾಯಗಳೇ ಆಗಿದ್ದವು. ಇದು ಸಹಜ ಕೂಡ ಹೌದು. ಪಶುಪಾಲನೆ ಇಂದಿಗೂ ಪ್ರಮುಖ ಆಹಾರ ಉತ್ಪಾದನಾ ಚಟುವಟಿಕೆಯೂ ಹೌದು. ಆದರೆ ಪಾರಂಪರಿಕ ಪಶುಪಾಲಕ ಚಟುವಟಿಕೆಯು ಇಂದು ಒಂದು ಆಚರಣೆಯಾಗಿಯೂ ಈ ಸಮುದಾಯಗಳಲ್ಲಿ ಉಳಿದು ಬಂದಿದೆ. ಕುಣಬಿಯರು ಕೃಷಿಯನ್ನು ಅವಲಂಬಿಸಿಕೊಂಡು ಜೀವನ ಮಾಡುವವರಾಗಿದ್ದರಿಂದ ಒಂದೊಂದು ಮನೆಯಲ್ಲಿ ೨ ರಿಂದ ೫ ಎಮ್ಮೆಗಳನ್ನು ಸಾಕಿರುವುದನ್ನು ನೋಡಬಹುದು. ಅಲ್ಲದೆ

ಕೆಲವೊಂದು ಮನೆಯಲ್ಲಿ ಹಸುಗಳಿವೆ, ಆದರೆ ಕೃಷಿಯನ್ನು ಮಾಡುವಂತಹ ಎಲ್ಲಾ ಮನೆಯಲ್ಲಿಯೂ ಎರಡು ಕೋಣಗಳಿರುವುದನ್ನು ಇಲ್ಲಿ ವಿಶೇಷವಾಗಿ ನೋಡಬಹುದು.

ಕುಣಬಿಗಳು ಪಾರಂಪರಿಕ ಪಶುಪಾಲಕರು ಆಗಿರುವುದರಿಂದ ಇವರ ಆದಿಮ ದೈವಗಳಲ್ಲಿ ಪ್ರಾಣಿಗಳು ಮತ್ತು ಅವುಗಳನ್ನು ಕಾಯುವ ಮತ್ತು ಕಾಪಾಡುವ ವೀರರೂ ಸಹ ದೈವಗಳಾಗಿ ಪೂಜಿಸಲ್ಪಡುತ್ತಿದ್ದಾರೆ. ಕುಣಬಿಯರು ಆಚರಿಸುವ ಗೋವಿನ ಹಬ್ಬ ಇವರ ಆದಿಮ ಪಶುಪಾಲಕ ಚಟುವಟಿಕೆಯನ್ನು ಪ್ರತಿನಿಧಿಸುತ್ತದೆ. ಬಲಿಪಾಡ್ಯಮಿಯಂದು ಆಚರಿಸುವ ಈ ಹಬ್ಬ ಕುಣಬಿಗಳ ಆಚರಣೆಯಲ್ಲಿ ಅತ್ಯಂತ ವಿಶಿಷ್ಟವಾದದ್ದು.

ಸಾಮಾನ್ಯವಾಗಿ ಬುಡಕಟ್ಟುಗಳಲ್ಲಿ ಪಶುಪಾಲನೆಯನ್ನು ಹೆಚ್ಚಾಗಿ ಮಹಿಳೆಯರು ಅವಲಂಬಿಸಿರುತ್ತಾರೆ. ದೈಹಿಕ ಶ್ರಮವು ಕಡಿಮೆ ವ್ಯಯವಾಗುವ ಈ ಚಟುವಟಿಕೆಯಲ್ಲಿ ಮಹಿಳೆ ಪ್ರಧಾನಪಾತ್ರ ವಹಿಸುತ್ತಾಳೆ. ಪಶುಗಳ ಪಾಲನೆ, ಪೋಷಣೆ, ಹೈನುಗಾರಿಕೆ ಮುಂತಾದ ಸಂಕೀರ್ಣ ಮತ್ತು ಕೌಶಲ್ಯಪೂರ್ಣ ಚಟುವಟಿಕೆಗಳನ್ನು ಮಹಿಳೆ ನಿರ್ವಹಿಸುತ್ತಾಳೆ. ಕುಣಬಿಯರಲ್ಲಿ ಇಂದಿಗೂ ಸಹ ಪಶುಪಾಲನೆಯು ಮಹಿಳೆಯನ್ನೇ ಅವಲಂಬಿಸಿದೆ. ಪಶುಪಾಲನೆಯಲ್ಲಿ ಹಾಲು ಮತ್ತು ಅದರ ನಂತರದ ಉತ್ಪನ್ನಗಳನ್ನು ರಕ್ಷಿಸುವುದು ಮಹಿಳೆಯ ಪಾರಂಪರಿಕ ಹೊಣೆಗಾರಿಕೆ. ಈ ಸಮುದಾಯದವರು ಬೇರೆಯವರಿಗೆ ಹಣಕ್ಕೆ ಹಾಲು, ಮೊಸರು, ತುಪ್ಪವನ್ನು ಮಾರಾಟ ಮಾಡದೆ ಎಲ್ಲವನ್ನು ಊಟಕ್ಕೆ ಬಳಸುತ್ತಾರೆ. ಕೃಷಿಯು ಇನ್ನೂ ಆವಿಷ್ಕಾರವಾಗಬೇಕಿದ್ದ ಆದಿಮ ಹಂತದಲ್ಲಿ ಪಶುಪಾಲಕರಾಗಿ ಸ್ತ್ರೀ ಗಂಡಿನ ಜೊತೆ ಸಮಾನ ಶ್ರಮವನ್ನು ವ್ಯಯಿಸುತ್ತಿದ್ದಳು. ಇಂದಿಗೂ ಆದಿಮ ಪಶುಪಾಲಕ ಸಮುದಾಯಗಳಲ್ಲಿ ಮಹಿಳೆ ಪುರುಷನಷ್ಟೇ ಶ್ರಮವನ್ನು ಪಶುಪಾಲನೆಯಲ್ಲಿ ವಿನಿಯೋಗಿಸುತ್ತಾಳೆ. ಈ ರೀತಿಯಾಗಿ ಪಶು ಸಂಗೋಪನೆಯಲ್ಲಿ ಕೃಷಿಯನ್ನು ಹಾಗೂ ಕೃಷಿಯಲ್ಲಿ ಪಶು ಸಂಗೋಪನೆಯನ್ನು ರೂಢಿಸಿಕೊಂಡು ಒಂದು ಉಪ ಕಸುಬಾಗಿ ಮಾಡಿಸಿಕೊಂಡು ಜೀವನವನ್ನೇ ಸಾಗಿಸುತ್ತಾ ಬಂದಿರುವುದನ್ನು ಇಲ್ಲಿ ಹೆಸರಿಸಲು ಸೂಕ್ತವೆನಿಸುತ್ತದೆ.

### ೪.೨ ಕುಮರಿ ಬೇಸಾಯ

ಆಹಾರ ಸಂಗ್ರಹಣೆ ಮತ್ತು ಬೇಟೆಯ ಹಂತ ಸಡಿಲಗೊಂಡು ಪಶುಪಾಲನೆಯ ಕೊನೆಯ ಹಂತದಲ್ಲಿ ಕೃಷಿಯ ಕಡೆಗೆ ಗಮನ ಹೊರಳಿತು. ಅಂದರೆ ಕೃಷಿಯ ಅನ್ವೇಷಣೆ ಆರಂಭವಾಯಿತು. ಗಂಡಸರು ಆಹಾರ ಸಂಗ್ರಹಕ್ಕಾಗಿ ಹಾಗೂ ಬೇಟೆಗಾಗಿ ಹೊರಹೋದಾಗ ಮಕ್ಕಳ ಪಾಲನೆಗಾಗಿ ಮನೆಯಲ್ಲಿರುತ್ತಿದ್ದ ಸ್ತ್ರೀಯರು ತನ್ನ ಬಿಡುವಿನ ಕಾಲದಲ್ಲಿ ಲಘು ಕೃಷಿಯ ಮೂಲಕ ಕೃಷಿ ಅನ್ವೇಷಣೆಗಳಿಗೆ ಕಾರಣಳಾದಳು ಎಂಬುದು ಪ್ರಚಲಿತದಲ್ಲಿರುವ ವಾದ. ತನ್ನ ಸುತ್ತಲ ಉಪಯುಕ್ತ ಸಸ್ಯಗಳನ್ನು ಆಯ್ದು ಅವುಗಳಿಂದ ಆಹಾರ ತಯಾರಿಸುವ ಕೌಶಲ್ಯವನ್ನು ಕಂಡುಕೊಂಡವಳು

ಆದಿಮ ಸಮಾಜದ ಮಹಿಳೆ. ಆದರೆ ಈ ಹಂತದ ಕೃಷಿಯು ಈಗಿನಂತೆ ನೆಲೆನಿಂತ ಕೃಷಿಯಾಗಿರಲಿಲ್ಲ, ಪಶುಪಾಲನೆಯ ಜೊತೆಗೆ ಸಮುದಾಯಗಳು ಈ ಲಘು ಕೃಷಿಯನ್ನು ರೂಢಿಸಿಕೊಂಡು ಬಂದವು. ಪಶುಗಳಿಗೆ ಮೇವು ಸಿಗುವ ಕಡೆಗಳಲ್ಲಿ ಕೆಲ ಕಾಲ ನೆಲೆನಿಂತು ಅಲ್ಲಿಯ ಕಾಡನ್ನು ತಾವು ಕಂಡುಕೊಂಡ ಉಪಯುಕ್ತ ಸಸ್ಯಗಳನ್ನು ಪುನಃ ಬೆಳೆಯಲು ತಾತ್ಕಾಲಿಕವಾಗಿ ಸಿದ್ಧಗೊಳಿಸುತ್ತಿದ್ದರು, ಅಲ್ಲಿ ಕೆಲಕಾಲ ನೆಲೆ ನಿಂತು ಪುನಃ ತಮ್ಮ ಪಶುಗಳ ಜೊತೆ ಬೇರೆಡೆಗೆ ನಡೆದು ಹೋಗಿ ಲಘು ಕೃಷಿಗೆ ಸೂಕ್ತವಾದ ಜಾಗ ಹುಡುಕಿ ಅಲ್ಲಿ ಮತ್ತೆ ತಮ್ಮ ಕೃಷಿಯನ್ನು ಕೈಗೊಳ್ಳುತ್ತಿದ್ದರು. ಈ ಬಗೆಯ ಕೃಷಿಯು ಕಾಡನ್ನು ನಾಶ ಮಾಡುತ್ತಿರಲಿಲ್ಲ. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಚಲಿಸುವ ಅಲೆಮಾರಿ ಪಶುಪಾಲಕರು ಜಾರಿಗೆ ತಂದ ಈ ವ್ಯವಸಾಯದ ಕ್ರಮವನ್ನು 'ಕುಮರಿ' ಅಥವಾ 'ಕುಂಬ್ರಿ ಬೇಸಾಯ' (Shifting Cultivation), 'ಸ್ಥಳಾಂತರ ಕೃಷಿ' ಎಂದು ಕರೆಯುತ್ತಾರೆ. ಬಹುಶಃ ಕೃಷಿ ಜಾರಿಗೆ ಬಂದ ಪ್ರಥಮದಲ್ಲಿ ಯಾವ ರೀತಿಯ ಪದ್ಧತಿ ಇತ್ತೋ ಅಂಥ ಪಾರಂಪರಿಕ ಪದ್ಧತಿ ಕುಣಬಿಯರಲ್ಲಿ ಇತ್ತೀಚಿನವರೆಗೂ ಜಾರಿಯಲ್ಲಿದೆ ಎಂಬುದೇ ಒಂದು ವಿಶೇಷ.

ಸರದಿ ಕೃಷಿ ಪದ್ಧತಿಯಲ್ಲಿ ಕುಣಬಿಗಳು ಮಳೆಗಾಲಕ್ಕಿಂತ ಮುಂಚೆಯೇ ಗಿಡಗಂಟಿಗಳನ್ನು ಕಡೆದು ಸುಡುವುದರ ಮೂಲಕ ಭೂಮಿಯನ್ನು ಕೃಷಿಗೆ ಅಣಿಗೊಳಿಸಿ ಬೀಜ ಬಿತ್ತುವರು. ಮಳೆಯಾದೊಡನೆ ಬೀಜ ಮೊಳಕೆಯೊಡೆದು ಬಿಡುವುದು. ಸಾಮಾನ್ಯವಾಗಿ ಬೆಟ್ಟ-ಗುಡ್ಡಗಳ ಇಳಿಜಾರು ಪ್ರದೇಶ ಹಾಗೂ ಕೊಳ್ಳ ಪ್ರದೇಶಗಳನ್ನು ಈ ತರಹದ ಸರದಿ ಕೃಷಿಗೆ ಆಯ್ದುಕೊಳ್ಳುವರು. ಈ ಸರದಿ ಕೃಷಿ ಪ್ರದೇಶವನ್ನು ಪ್ರತಿ ಎರಡು-ಮೂರು ವರ್ಷಗಳಿಗೊಮ್ಮೆ ಬದಲಾಯಿಸುತ್ತಾರೆ.

ಈ ಕುಮರಿ ಕೃಷಿ ಅಥವಾ ಸ್ಥಳಾಂತರ ಬೇಸಾಯ ಅತ್ಯಂತ ಪ್ರಾಚೀನ ಕಾಲದಿಂದ ಮನುಷ್ಯ ಅನುಸರಿಸಿಕೊಂಡು ಬಂದಿರುವ ಒಂದು ತಾಂತ್ರಿಕ ಪದ್ಧತಿ ಹಾಗೂ ಇಂದಿಗೂ ಒಂದು ವೈಜ್ಞಾನಿಕ ಪದ್ಧತಿ. ಈ ನೈಸರ್ಗಿಕ ಕೃಷಿ ಭೂಮಿಯ ಸವಕಳಿಯನ್ನು ತಪ್ಪಿಸುತ್ತದೆ. ಅರಣ್ಯ ನಾಶವನ್ನು ತಡೆಯುತ್ತದೆ. ಮನುಷ್ಯನ ಮಣ್ಣಿನ ಮೋಹಕ್ಕೆ ಕಡಿವಾಣ ಹಾಕುತ್ತದೆ. ನಾನು, ನನ್ನದು ಮತ್ತು ನನ್ನ ಆಸ್ತಿ ಎಂಬ ಒಡೆತನದ ಅಹಂಕಾರಕ್ಕೆ ಅಸ್ಪದವಿಲ್ಲದ ಪದ್ಧತಿ ಇದು. ಮನುಷ್ಯನ ಅಂದಂದಿನ ಹೆಚ್ಚೆಂದರೆ ಆಯಾ ವರ್ಷದ ಬೇಡಿಕೆಯನ್ನು ಮಾತ್ರ ಪೂರೈಸಬಲ್ಲ ಈ ಪದ್ಧತಿ ಆಸೆಬುರುಕತನಕ್ಕೆ ಪ್ರೇರೇಪಿಸುವುದಿಲ್ಲ.

ನೇಗಿಲು-ನೊಗ-ಎತ್ತುಗಳು ಮುಂತಾದ ಭೂಮಾಲೀಕತ್ವದ ಸೊಂಕಿನಿಂದ ಇಂದಿಗೂ ದೂರವಿರುವ ಕುಣಬಿಗಳು ಕೇವಲ ಗುದ್ದಲಿ ಅಥವಾ ಪಿಕಾಸಿಯ ಸಹಾಯದಿಂದ ತಮ್ಮ ಅಗತ್ಯಕ್ಕೆ

ತಕ್ಕಷ್ಟು ಭೂಮಿಯನ್ನು ಮಾತ್ರ ಕೆತ್ತಿ ಅಥವಾ ಅಗೆದು ಅತ್ಯಂತ ಮಿತವಾದ ಜಾಗದಲ್ಲಿ ತಮಗೆ ಬೇಕಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಈ ತರಹದ ಕೃಷಿಯಲ್ಲಿ ಬಹುತೇಕ ಬೆಳೆಯುವ ಪ್ರಮುಖ ಬೆಳೆಗಳೆಂದರೆ, ಚಿಕ್ಕ ಕಾಳುಗಳಾದ ನವಣೆ, ಸಜ್ಜೆ, ಎಳ್ಳು, ರಾಗಿ, ಅರಿಷಣಕೊಂಬು ಮತ್ತು ವಿಧವಿಧದ ಕಾಯಿಪಲ್ಲೆ, ಗಡ್ಡೆ-ಗೆಣಸು ಆಗಿರುತ್ತದೆ. ಬೆಟ್ಟದ ಇಳಿಜಾರುಗಳಲ್ಲಿ ಲಭ್ಯವಿರುವ ಖಾಲಿ ಭೂಮಿಯನ್ನು ಹಸನು ಮಾಡಿ, ಅಡ್ಡ ತೆವರಿಗಳನ್ನು ನಿರ್ಮಿಸಿ, ಹಂತಹಂತಗಳಲ್ಲಿ ಸಮತಟ್ಟಗೊಳಿಸಿ ಚೆಲ್ಲುವುದು ಇವರ ಪದ್ಧತಿ. ಇದರಿಂದಾಗಿ ಖಾಲಿಯಿದ್ದ ಭೂಮಿ ಸದುಪಯೋಗವಾಗುತ್ತಿತ್ತು. ಅಲ್ಲದೆ ನೀಳನಾದ ಇಳಿಜಾರಿನಿಂದ ಸವಕಲಾಗುತ್ತಿದ್ದ ಅಥವಾ ಕರಗಿ ಹೋಗುತ್ತಿದ್ದ ಮಣ್ಣು ಇವರು ಹಾಕುತ್ತಿದ್ದ ಅಡ್ಡ ತೆವರಿಗಳಿಂದ ಕೊಚ್ಚಿ ಹೋಗದೆ ನಿಲ್ಲುತ್ತಿತ್ತು. ತಲೆತಲಾಂತರದಿಂದ ಇಂಥ ಪದ್ಧತಿಯನ್ನು ಅನುಸರಿಸಿಕೊಂದು ಕೃಷಿ ಮಾಡುತ್ತಿದ್ದ ಕುಣಬಿಯರು ಒಂದೇ ಜಾಗವನ್ನು ಸತತವಾಗಿ ಬಳಸಿ ಭೂಮಿಯನ್ನು ಬಂಜರುಗೊಳಿಸುತ್ತಿರಲಿಲ್ಲ. ಮನುಷ್ಯ ಖಾಯಂ ಆಗಿ ನೆಲೆನಿಂತಲ್ಲಿ ಮಾತ್ರ ಅರಣ್ಯ ನಾಶವಾಗಿ ಪರಿಸರದ ಅಸಮತೋಲನ ಜರುಗುತ್ತಿತ್ತು. ಕುಣಬಿಯರ ಈ ಸ್ಥಳಾಂತರ ಬೇಸಾಯ ಪರಿಸರದ ಸಮತೋಲನ ಕಾಯ್ದುಕೊಳ್ಳುವಲ್ಲಿ ಪೂರಕವಾಗಿರುತ್ತಿತ್ತು.

**ಕುಮರಿ ಬೇಸಾಯದ ಪ್ರಧಾನ ಅಂಶಗಳು**

- ಬೆಟ್ಟ ಪ್ರದೇಶಗಳ ಇಳಿಜಾರು ನೆಲವನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸುವುದು.
- ಕೇವಲ ಗುದ್ದಲಿ, ಪಿಕಾಸಿ ಮುಂತಾದ ಅಗೆಯುವ ಸಾಧನಗಳನ್ನು ಮಾತ್ರ ಬಳಸಿ ಕೃಷಿಯನ್ನು ಒಂದು ಮಿತಿಗೆ ಒಳಪಡಿಸಿ, ಅರಣ್ಯ ಭೂಮಿಯನ್ನು ಸಂರಕ್ಷಿಸುವುದು.
- ಸ್ಥಳದಿಂದ ಸ್ಥಳಕ್ಕೆ ಕೃಷಿಯನ್ನು ಸ್ಥಳಾಂತರಿಸುವ ಮೂಲಕ ಭೂಮಿಯ ಸಾರವನ್ನು ಕಾಪಾಡುವುದು.
- ಪಶುಪಾಲನೆ ಹಾಗೂ ಕುರಿ ಸಾಕಾಣಿಕೆಯಿಂದ ದೂರವಿದ್ದು ಗಿಡಮರಗಳನ್ನು ಸಂರಕ್ಷಿಸುವುದು.
- ಇಳಿಜಾರು ಪ್ರದೇಶಗಳಲ್ಲಿ ಹಂತ ಹಂತವಾಗಿ ಅಡ್ಡ ತೆವರಿಗಳನ್ನು ನಿರ್ಮಿಸುವ ಮೂಲಕ ಭೂಮಿಯ ಸವಕಳಿಯನ್ನು ತಡೆಗಟ್ಟುವುದು.
- ನಿಗದಿತವಾದ ಬೆಳೆಗಳನ್ನು ಮಾತ್ರ ಬೆಳೆಯುವ ಮೂಲಕ ಕೃಷಿಯನ್ನು ವಾಣಿಜ್ಯೀಕರಣಗೊಳಿಸದಿರುವುದು.
- ವಾಣಿಜ್ಯ ಬೆಳೆಗಳಾದ ಅಡಿಕೆ, ತೆಂಗು, ಕಾಫಿ, ರಬ್ಬರ್ ಮುಂತಾದವುಗಳಿಂದ ದೂರವಿರುವುದು.

• ಅಳಿವಿನ ಅಂಚಿನಲ್ಲಿರುವ ಕಾಡಿನ ಗಡ್ಡೆ, ಗೆಣಸು, ಔಷಧಿ ಸಸ್ಯಗಳು ಮುಂತಾದವುಗಳನ್ನು ರಕ್ಷಿಸಿಕೊಂಡು ಬಂದಿರುವುದು.

ಉತ್ತರ ಕನ್ನಡ ಜಿಲ್ಲೆಯ, ಜೋಯಿಡಾ ತಾಲೂಕಿನಲ್ಲಿಯೇ ಕುಮರಿ ಬೇಸಾಯ ಹೆಚ್ಚಾಗಿ ಕಾಣಿಸುತ್ತದೆ. ಹೀಗೆ ಒಂದು ಅಂದಾಜಿನ ಪ್ರಕಾರ ಇಡೀ ಜೋಯಿಡಾ ತಾಲೂಕಿನಲ್ಲಿ ಸುಮಾರು ೮ ಸಾವಿರ ಎಕರೆ ಜಮೀನು ಕುಮರಿ ಬೇಸಾಯಕ್ಕೊಳಪಟ್ಟಿದೆ. ಇದರಲ್ಲಿ ಕುಂಡಲ ಗ್ರಾಮದ್ದೇ ಮೇಲುಗೈ, ಅಲ್ಲಿ ೮೦೦ ಎಕರೆ ಕುಮರಿ ಇದೆ. ಅಣಸಿಯ ಭಾಗದಲ್ಲಿ ೪೦೦ ಎಕರೆ, ವರಂಜೋಲ್ ಭಾಗದಲ್ಲಿ ३೦೦ ಎಕರೆ, ಪಾಲ್ಡಿ ಭಾಗದಲ್ಲಿ ೪೦೦ ಎಕರೆ, ಅನಮೋಡ ಭಾಗದಲ್ಲಿ ೧೦೦ ಎಕರೆ, ಮೂಡಿಯೇ ಭಾಗದಲ್ಲಿ ೫೦ ಎಕರೆ, ದೂದಮೊಳೆ ೮೦ ಎಕರೆ, ಡಿಗ್ಗಿ ೧೦೦ ಎಕರೆ, ಹೀಗೆ ಪ್ರತಿ ಹಳ್ಳಿಗೆ ಕನಿಷ್ಠ ೫೦ ರಿಂದ ೧೦೦ ಎಕರೆಯಂತೆ ಒಟ್ಟು ೮ ಸಾವಿರ ಎಕರೆ ಜಾಗದಲ್ಲಿ ಜೋಯಿಡಾ ರೈತರು ಕುಮರಿ ಬೇಸಾಯ ನಡೆಸಿಕೊಂಡು ಬರುತ್ತಿದ್ದಾರೆ.

ಕುಮರಿ ಬೇಸಾಯದ ಮತ್ತೊಂದು ವೈಶಿಷ್ಟ್ಯವೆಂದರೆ, ಹಳ್ಳಿಯ ರೈತರೆಲ್ಲರೂ ಇದನ್ನು ಸಾಮೂಹಿಕವಾಗಿ ಬೇಸಾಯ ಮಾಡಿ ಬಂದ ಫಸಲನ್ನು ಹಳ್ಳಿಯ ಎಲ್ಲರೂ ಹಂಚಿಕೊಳ್ಳುವರು. ಹಿಂದೆ ಸುಮಾರು ೬೦-೭೦ ವರ್ಷಗಳ ಹಿಂದೆ ಕುಣಬಿಗಳು ತಂಡ ಕಟ್ಟಿಕೊಂಡು ಕುಮರಿ ಬೇಸಾಯ ಮಾಡಲು ಹೋಗುತ್ತಿದ್ದರು. ಕಾಡಿನಲ್ಲಿನ ಜಾಗವನ್ನು ಸುಟ್ಟು ಹದಮಾಡಿ, ರಾಗಿ ಬೆಳೆಯುತ್ತಿದ್ದರು. ३೦ ಮನೆಗೊಂದು ಕುಮರಿ ಇದ್ದು ಪ್ರತಿ ಮನೆಯಿಂದ ಇಬ್ಬಿಬ್ಬರಂತೆ ೬೦ ಮಂದಿ ಒಂದು ಕುಮರಿ ಬೇಸಾಯ ಮಾಡುತ್ತಿದ್ದರು. ಇದಕ್ಕೂ ಮೊದಲು ಅರಣ್ಯದಲ್ಲಿ ಕುಮರಿ ಬೇಸಾಯಕ್ಕೆ ಸ್ಥಳವನ್ನು ಗುರುತು ಮಾಡುತ್ತಿದ್ದರು. ನಂತರ ಆ ಸ್ಥಳದಲ್ಲಿ ಬೆಂಕಿ ಇಟ್ಟು ಭೂಮಿಯನ್ನು ರಕ್ತ ಸಂಬಂಧಿಗಳು ಸ್ವಾಧೀನ ಮಾಡಿಕೊಳ್ಳುತ್ತಿದ್ದರು. ಹಾಗೂ ಈ ಗುಂಪಿನ ಎಲ್ಲ ಸದಸ್ಯರು ಭೂಮಿಯನ್ನು ಕೃಷಿಗಾಗಿ ಸ್ವಚ್ಛಗೊಳಿಸಿ ಉತ್ತಿಬಿತ್ತಿ ತಮ್ಮ ಶ್ರಮದ ಫಲವನ್ನು ಪೂರ್ತಿಯಾಗಿ ಅನುಭವಿಸುವದಕ್ಕಾಗಿ ಹಂಚಲಾಗುತ್ತಿತ್ತು.

ಬುಡಕಟ್ಟುಗಳು ಅರಣ್ಯವನ್ನು ತಮ್ಮ ಜೀವನಾಡಿಯನ್ನಾಗಿ ಕಾಣುತ್ತಿದ್ದರು. ಅದಕ್ಕೆ ಮುನ್ನೆಚ್ಚರಿಕೆಯಾಗಿ ಕುಮರಿ ಬೇಸಾಯ ಮಾಡುವಾಗ ತಮ್ಮಿಂದ ಮರ, ಪ್ರಾಣಿಗಳಿಗೆ ತೊಂದರೆಯಾಗದಂತೆ ಇರುತ್ತಿದ್ದರು. ಅರಣ್ಯ ಇವತ್ತು ಉಳಿದಿದೆ ಎಂದರೆ ಕೇವಲ ಬುಡಕಟ್ಟುಗಳ ಪರಿಣಾಮವಾಗಿಯೇ. ಆದರೆ ಇವತ್ತು ಹಾಳಾಗುತ್ತಿರುವುದು ಬುಡಕಟ್ಟುಗಳನ್ನು ಅರಣ್ಯದಿಂದ ಒಕ್ಕಲೆಬ್ಬಿಸಿದ ಪರಿಣಾಮ. ಆದರೆ ಸರಕಾರ ಇವತ್ತು ಆದಿವಾಸಿಗಳ ಕಾರಣದಿಂದ ಅರಣ್ಯ ಹಾಳಾಗುತ್ತಿದೆ ಎಂದು ಬೊಬ್ಬೆ ಹಾಕುತ್ತಿದೆ. ಹಾಳುಮಾಡುತ್ತಿರುವುದು ಆದಿವಾಸಿಗಳಲ್ಲ.

ತಿಂಗಳಾನುಗಟ್ಟಲೆ ರಾಗಿ ನೆಟ್ಟು ಬೆಳೆ ಬರುವವರೆಗೆ ಕಾಯಲು ಮಾಳಗಳನ್ನು ಮಾಡಿ ಕೆಲವರನ್ನು ಅಲ್ಲಿಯೇ ಬಿಟ್ಟು ಉಳಿದವರು ಮನೆಗೆ ಬರುತ್ತಿದ್ದರಂತೆ. ಬೆಳೆ ಬಂದ ತಕ್ಷಣ ಮತ್ತೆ ಹೋಗಿ ರಾಗಿ ಕೊಯ್ದು ರಾಶಿ ಮಾಡಿಕೊಂಡು ಸಮನಾಗಿ ಹಂಚಿಕೊಂಡು ಊರಿಗೆ ತರುವ ಪದ್ಧತಿ ಇತ್ತು. ಬ್ರಿಟಿಷರು ಬರುವ ಮುಂಚಿನವರೆಗೂ ಕಾಡಿನಲ್ಲಿ ಮುಕ್ತವಾಗಿ ತಂಡೋಪತಂಡವಾಗಿ ತಮ್ಮ ಕುಟುಂಬಗಳ ಜೊತೆ ಅಲೆಮಾರಿ ಜೀವನ ನಡೆಸುತ್ತಾ ಕುಮರಿ ಬೇಸಾಯ ಮಾಡುತ್ತಿದ್ದರು. ಜೊತೆಗೆ ಕಾಡಿನ ಪ್ರವೇಶ ಮುಕ್ತವಾಗಿದ್ದು ಕಾಡನ್ನು ಸುಟ್ಟು ಒಕ್ಕಲುತನಕ್ಕೆ, ಕುಮರಿ ಬೇಸಾಯಕ್ಕೆ ಭೂಮಿಯನ್ನು ಉಪಯೋಗಿಸುವ, ತೋಟ ಗದ್ದೆಗಳಿಗೆ ಗೊಬ್ಬರ ಹಾಕಲಿಕ್ಕೆ ಮರಗಳ ಎಲೆಗಳನ್ನು ತೆಗೆದುಕೊಂಡು ಹೋಗುವ, ಕಾಡಿನಲ್ಲಿ ಮೆಣಸಿನ ಬಳ್ಳಿಯನ್ನು ಹಾಕುವುದು, ದನ ಮೇಯಿಸುವುದು, ಕಟ್ಟಿಗೆಯನ್ನು ಉರುವಲಿಗೆ ತೆಗೆದುಕೊಂಡು ಹೋಗುವುದು ಮುಂತಾದ ಹತ್ತು ಹಲವು ಅವಕಾಶಗಳಿದ್ದವು. ಆದರೆ ಬ್ರಿಟಿಷರು ದಿನ ದಿನಕ್ಕೆ ಕುಮರಿ ಬೇಸಾಯಕ್ಕೆ ಅರಣ್ಯವನ್ನು ಕೊಡುವುದನ್ನು ಕಡಿಮೆ ಮಾಡುತ್ತಾ ಬಂದರು. ಹಾಗೆನಾದರೂ ಅರಣ್ಯದೊಳಗಿನ ಕಟ್ಟಿಗೆ ಬೇಕೆಂದರೆ ಅದಕ್ಕೆ ಹಣ ವಸೂಲಿ ಮಾಡುತ್ತಿದ್ದರು.

ಮೂರು-ನಾಲ್ಕು ವರ್ಷಗಳಿಗೊಮ್ಮೆ ಭೂಮಿಯನ್ನು ಬದಲಿಸುತ್ತಾ ಹೋಗುವುದರಿಂದ ಅಲ್ಲಿ ಮತ್ತೆ ಹೊಸ ಅರಣ್ಯವು ಬೆಳೆಯುತ್ತಾ ಹೋಗುವುದು. ಅರಣ್ಯವನ್ನು ಹಾಳು ಮಾಡದೇ ಅದನ್ನು ಪುನಃ ಫಲವತ್ತಾಗಿಸುವ ನಿಟ್ಟಿನಲ್ಲಿ ಕುಣಬಿಯರು ಪ್ರಯತ್ನಿಸುತ್ತಿದ್ದರು. ಅದಕ್ಕೆ ವಿರುದ್ಧವಾಗಿ ಬ್ರಿಟಿಷ್ ಸರಕಾರ ಕುಮರಿ ಬೇಸಾಯ ಪದ್ಧತಿಯಿಂದ ಅರಣ್ಯ ನಾಶವಾಗುತ್ತದೆ ಎಂದು ಅದನ್ನು ನಿಷೇಧಿಸಿತು. ಇದರಿಂದ ಉತ್ತರ ಕನ್ನಡ ಜಿಲ್ಲೆಯ ಕುಣಬಿಗಳಂತಹ ಹಲವು ಬುಡಕಟ್ಟುಗಳು ಕುಮರಿ ಭೂಮಿ ಇಲ್ಲದ್ದರಿಂದ ತುಂಬಾ ತೊಂದರೆ ಅನುಭವಿಸಿದವು. ಹೀಗೆ ಕುಮರಿ ಬೇಸಾಯದಿಂದಾಗಿ ಖಾಸಗಿ ಆಸ್ತಿ ಪರಿಕಲ್ಪನೆಯು ಬುಡಕಟ್ಟುಗಳಲ್ಲಿ ಬರಲಿಲ್ಲ. ಇಡೀ ಅರಣ್ಯದಲ್ಲೇ ಶತಶತಮಾನ ಕಳೆದ ಎಷ್ಟೋ ಬುಡಕಟ್ಟುಗಳು ಅರಣ್ಯದ ಒಂದು ತುಂಡು ಭೂಮಿಯನ್ನು ಸಹ ತಮ್ಮದೆಂದು ಭಾವಿಸಲಿಲ್ಲ, ಅಂದರೆ ಅರಣ್ಯ ತಮ್ಮ ವಾಸಸ್ಥಾನ, ಅದು ಎಂದೆಂದಿಗೂ ತಮ್ಮದೇ, ಅದಕ್ಕಾಗಿ ದಾಖಲೆ ಪತ್ರಗಳ ಅಗತ್ಯ ಬುಡಕಟ್ಟುಗಳಿಗೆ ಕಾಣಲಿಲ್ಲ. ಆದರೆ ಇಂದು ಸರಕಾರಕ್ಕೆ ಬೇಕಾಗಿರುವುದು ದಾಖಲೆಗಳು, ಯಾರ ಬಳಿ ದಾಖಲೆಗಳು ಇರುವುದಿಲ್ಲವೊ ಅದು ಅವರದಲ್ಲ ಎಂದು ಎಷ್ಟೋ ಬುಡಕಟ್ಟುಗಳು ಅರಣ್ಯ ಪ್ರವೇಶ ನಿಷೇಧ ಕಾಯ್ದೆಯ ಪರಿಣಾಮ ನೆಲೆ ಕಳೆದುಕೊಂಡವು. ಬೇರೆ ದಾರಿ ಕಾಣದೆ ಕುಣಬಿಗಳು ಮೇಲ್ಜಾತಿಗಳ ಮನೆ, ಗದ್ದೆ, ತೋಟ, ಹೊಲಗಳಲ್ಲಿ ಜೀತದಾಳಾಗಿ ದುಡಿಯುವ ಅನಿವಾರ್ಯತೆ ಸೃಷ್ಟಿಯಾಯಿತು. ಬ್ರಿಟಿಷರು ಕುಣಬಿಗಳಂತಹ ನೂರಾರು ಬುಡಕಟ್ಟು ಸಮುದಾಯಗಳಿಗೆ ಅರಣ್ಯ ಪ್ರವೇಶ ನಿಷೇಧ

ತಂದು ಕಾಡಿನಿಂದ ಹೊರಹಾಕುವ ಕೆಲಸ ಮಾಡಿತು. ಇತ್ತ ಅರಣ್ಯದಲ್ಲಿ ಆಶ್ರಯವಿಲ್ಲದೆ ನಾಡಿನಲ್ಲೂ ನೆಲೆಗಳಿಲ್ಲದೆ, ಅಲೆಮಾರಿಗಳಾಗಿ ಊರಿಂದ ಊರಿಗೆ ಅಲೆಯುವವರಾದರು. ಶತಮಾನಗಳಿಂದ ತಮ್ಮದಾಗಿದ್ದ ಅರಣ್ಯ ಪರಕೀಯರಾದ ಬ್ರಿಟೀಷರಿಂದ ಪರಕೀಯರದಾಯಿತು.

### ೪.೩ ಕುಣಬಿಯರ ಪಾರಂಪರಿಕ ಆರ್ಥಿಕ ಮೂಲಗಳು

**ಗಡ್ಡೆ–ಗೆಣಸಿನ ಕೃಷಿ**

ಕುಣಬಿಯರು ಈಗಾಗಲೇ ನಾವು ನೋಡಿದಂತೆ ಮೂಲತಃ ಆಹಾರ ಸಂಗ್ರಾಹಕರಾಗಿದ್ದರು. ಗಡ್ಡೆ–ಗೆಣಸು ಅವರ ಪ್ರಾಚೀನ ಆಹಾರ. ಕುಮರಿ ಬೇಸಾಯ ಕರಗತವಾದ ಮೇಲೆ ಕಾಡಿನ ಗಡ್ಡೆ–ಗೆಣಸುಗಳನ್ನು ಹಿತ್ತಲಲ್ಲಿ ಬೆಳೆಯುವ ಪದ್ಧತಿಯನ್ನು ರೂಢಿಗೆ ತಂದರು, ಇದು ಕೂಡ ಸಾವಿರಾರು ವರ್ಷಗಳ ಪರಂಪರೆಯ ರೂಢಿಬದ್ಧ ಕೃಷಿ. ಅಂಥವುಗಳಲ್ಲಿ ಮುಖ್ಯವಾದ ಕೆಲವು ಬೆಳೆಗಳನ್ನು ಹೀಗೆ ಪಟ್ಟಿಮಾಡಬಹುದು.

- ಕೋನ (ಗಡ್ಡೆ ಮಾದರಿ)
- ಮೂಡ್ಲಿ (ಕೆಸು ಮಾದರಿ)
- ಕಾಚೆ ಕಣಂಗ್ (ಗೆಣಸು ಮಾದರಿ)
- ಚಿರತೆ (ಬಳ್ಳಿ ಮಾದರಿ)

ಇವಲ್ಲದೆ ತಮ್ಮ ಮನೆಗಳ ಸುತ್ತಮುತ್ತ ಹಾಗೂ ನೀರು ಹರಿದಾಡುವ ಸ್ಥಳಗಳಲ್ಲಿ ಕೈತೋಟ ಮಾಡಿಕೊಂಡಿದ್ದಾರೆ. ಈ ತೋಟದಲ್ಲಿ ಇರುಳ್ಳಿ, ಸಬ್ಬಸ್ಸಿಗೆ, ಪಾಲಕ, ಸೊಪ್ಪು, ಬದನೆಕಾಯಿ, ಇವಲ್ಲದೆ ವಿವಿಧ ಬಗೆಯ ಸೊಪ್ಪು, ತರಕಾರಿಗಳನ್ನು ಹಿತ್ತಲಿನಲ್ಲಿ ಬೆಳೆಯುತ್ತಾರೆ. ಗಡ್ಡೆ–ಗೆಣಸಿನ ಹಿತ್ತಲು ಇಲ್ಲದಿದ್ದರೆ, ಅದು ಕುಣಬಿ ಮನೆಯೇ ಅಲ್ಲ, ಇದೇ ಅವರ ಕೃಷಿ ಪ್ರೀತಿಗೆ ಸಾಕ್ಷಿ.

**ಜೇನು ಸಂಗ್ರಹ**

ಕುಣಬಿಯರು ವಾಸಿಸುವ ದಟ್ಟ ಅರಣ್ಯಗಳಲ್ಲಿ ಇಡೀ ವರ್ಷಪೂರ್ತಿಯಲ್ಲದಿದ್ದರೂ ಸಾಂದರ್ಭಿಕವಾಗಿ ಆಹಾರ ಸಂಗ್ರಹಣೆ ಕಾರ್ಯವನ್ನು ಕೈಗೊಳ್ಳುತ್ತಾರೆ. ಜೇನು ಸಂಗ್ರಹದಲ್ಲಿ ಕುಣಬಿಯರು ನಿಷ್ಣಾತರು. ಜೇನನ್ನು ಅವರು 'ಮೋ' ಎಂದು ಕರೆಯುತ್ತಾರೆ. ಅವರು ಶೇಖರಿಸುವ ಜೇನಿನಲ್ಲಿ ಮೂರು ವಿಧ.

- ದೊಡ್ಡ ಜೇನು (ಕೋನ್ಗೆ)
- ಮಧ್ಯಮ ಜೇನು (ಸತಡೆ)
- ಸಣ್ಣ ಜೇನು (ಪೊಯೆ)

ದೊಡ್ಡ ಜೇನಿಗೆ ೭೦ ರೂಪಾಯಿ, ಮಧ್ಯಮ ಜೇನಿಗೆ ೧೦೦ ರೂಪಾಯಿ, ಸಣ್ಣ ಜೇನಿಗೆ ೧೬೦ ರೂಪಾಯಿ. ಸಣ್ಣ ಜೇನನ್ನು ಬಿದಿರು ಬೊಂಬಿನಲ್ಲಿ ಸಾಕುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ, ಆದರೆ ಇದು ಕೆಲವರಿಗೆ ಮಾತ್ರ ಸಿದ್ಧಿಸುತ್ತದೆ, ನಿಸರ್ಗವನ್ನು ಹಿಡಿದಿಡುವ ಪ್ರಯತ್ನ ಇದು.

**ಇತರೆ ಸಂಗ್ರಹಗಳು**

ಜೇನಿನ ರೀತಿಯಲ್ಲೇ ಆದಾಯ ತರುತ್ತಿರುವ ಇತರ ಸಂಗ್ರಹಣಾ ಪದಾರ್ಥಗಳೆಂದರೆ,

- ಸೀಗೆಕಾಯಿ (ಚೆಂಬೇಲಾ)
- ವಾಟೆಹುಳಿ (ಅತಂಬಿ)
- ಪುನರ್‌ಪುಳಿ (ಬಿಂಡಾ)
- ಅಂಟುವಾಳ (ರೀಟೆ)
- ಸಣ್ಣ ಲವಂಗ (ತಿಕೇಪಳ)
- ಕಾಳು ಮೆಣಸು (ಮಿರಿ)
- ಜಾಯಿಪತ್ರೆ (ಪತ್ರಿ)
- ಅಣಬೆಗಳು (ಅಳವಿ)

**ವಿವಿಧ ಹಣ್ಣುಗಳು**

- ಹಲಸು
- ಚಾಪೇರ
- ಔಳು
- ಚುನ್ನ
- ಚಿವಾರ
- ಕಣ್ಣೀರ, ಇತ್ಯಾದಿ.

ಇವೆಲ್ಲವನ್ನು ಸಂಗ್ರಹಿಸುವ ಇವರು ಇವುಗಳನ್ನು ನೇರವಾಗಿ ಮಾರುವಂತಿಲ್ಲ. ಅಂತಹ ವ್ಯವಸ್ಥಿತ ಜಾಲವು ಇವರಲ್ಲಿಲ್ಲ. ಅವೆಲ್ಲವನ್ನೂ ನಾಗರಿಕ ಸಮಾಜ ಹೆಣೆದಿರುವ ವ್ಯವಸ್ಥಿತ ಜಾಲದ ಏಜೆಂಟರುಗಳು ಖರೀದಿಸುತ್ತಾರೆ. ನಿರ್ಧಿಷ್ಟ ಬೆಲೆಯನ್ನು ಎಂದೂ ಕುಣಬಿಗಳು ನಂಬುವಂತಿಲ್ಲ.

ಏಜೆಂಟರು ನಿಗದಿಪಡಿಸಿದಷ್ಟಕ್ಕೇ ಕೊಟ್ಟು ಕೈ ತೊಳೆದುಕೊಳ್ಳಬೇಕು. ಅವರು ಒಂದಕ್ಕೆ ಹತ್ತುಪಟ್ಟು ಲಾಭ ಇಟ್ಟು ಮಾರಿಕೊಳ್ಳುತ್ತಾರೆ, ಕುಣಬಿಯರಿಗೆ ಸಹಕಾರಿ ಯೋಜನೆಯ ಸೌಲಭ್ಯ ದಕ್ಕಿಲ್ಲ.

**ಕೃಷಿಯ ಕೂಲಿ**

ಕುಣಬಿಯರಲ್ಲಿ ಕೆಲವರು ಭೂಮಿ ಇಲ್ಲದೆ, ಈಗಲೂ ಬೇರೆಯವರ ಗದ್ದೆಯಲ್ಲಿ ಕೃಷಿ ಕೂಲಿಗಳಾಗಿ ದಿನನಿತ್ಯ ಹೋಗುತ್ತಾರೆ. ಇದರಿಂದಾಗಿ, ಕುಣಬಿಯರಲ್ಲಿ ಎಲ್ಲರಿಗೂ ಭೂಮಿ ಇಲ್ಲವೆಂದು ತಿಳಿದು ಬರುತ್ತದೆ. ಇದರ ಪರಿಣಾಮವಾಗಿ ಬೇರೆಯವರ ಹೊಲದಲ್ಲಿ ಅಥವಾ ಗದ್ದೆಗಳಲ್ಲಿ ಅದರಲ್ಲೂ ಬಂಡವಾಳವನ್ನು ಕ್ರೋಢೀಕರಿಸಿಕೊಂಡಿರುವವರ ಗದ್ದೆಗಳಲ್ಲಿ ಕೃಷಿ ಕೂಲಿಗಳಾಗಿ ದುಡಿಯುತ್ತಿರುವುದನ್ನು ನೋಡಬಹುದು. ಈ ರೀತಿಯಾಗಿ ಕೆಲವರು ಕೂಲಿಯನ್ನು ತಮ್ಮ ಕಸುಬು ಮಾಡಿಕೊಂಡು ಜೀವನವನ್ನು ನಡೆಸುತ್ತಿದ್ದಾರೆ.

**ಕರಕುಶಲ ವಸ್ತುಗಳು (ಗೃಹ ಕೈಗಾರಿಕೆ)**

ಕುಣಬಿಯರು ಕಾಡಿನ ಮಧ್ಯೆಯೇ ಬೆಳೆದವರಾದ್ದರಿಂದ ಕಾಡಿನಲ್ಲಿ ಸಿಗುವ ವಸ್ತುಗಳ ಕುಶಲ ಕಲೆಗೆ ಹೆಸರಾದವರು. ಕುಣಬಿ ಸಮುದಾಯದಲ್ಲಿ ಬೇಟೆಗಾರಿಕೆ, ಮೀನುಗಾರಿಕೆ ಹಾಗೆಯೇ ಕೃಷಿ ಉಪಕರಣ ತಯಾರಿಕೆಯ ಪರಿಣಿತಿಯೊಂದಿಗೆ ಅವರ ಕರಕುಶಲ ಕಲೆಯೂ ಗುರುತಿಸಲ್ಪಡುತ್ತಿದೆ.

ವಿದ್ಯಾರ್ಥಿ ಮತ್ತು ರೈ ಅವರು ನುಡಿದಂತೆ 'ನಿಜವಾಗಿಯೂ ಬುಡಕಟ್ಟು ಸಮುದಾಯದಲ್ಲಿ ಬಹುಮಟ್ಟಿಗೆ ಎಲ್ಲರೂ ಚಾಪೆ ತಯಾರಿಕೆ, ಬುಟ್ಟಿ ಹೆಣೆಯುವಿಕೆ, ಬಿದರಿನ ವಸ್ತು ತಯಾರಿಕೆ, ನೇಯುವಿಕೆ ಹಾಗೂ ಹೆಣೆಯುವಿಕೆಯಲ್ಲಿ ವಿಶಿಷ್ಟ ಪರಿಣತಿ ಹೊಂದಿರುತ್ತಾರೆ. ಅವರಿಗೆ ಈ ಕಲೆಯು ಉಪ ಕಸುಬು ಹಾಗೂ ಉಪ ಜೀವನ ಮಾರ್ಗವೆನಿಸಿದೆ'. ಹೀಗಾಗಿ ಬುಡಕಟ್ಟು ಸಮುದಾಯದ ಕುಶಲಕರ್ಮಿಗಳನ್ನು ಆರ್ಥಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ದೃಷ್ಟಿಕೋನದಿಂದ ನೋಡಬಹುದು.

ಈ ವಿಶಿಷ್ಟ ಕಲೆಯನ್ನು ಬುಡಕಟ್ಟು ಜನರು ಸಾಂಪ್ರದಾಯಿಕ ಹಾಗೂ ಭಾವನಾತ್ಮಕ ಮೋಹದಿಂದ ಕಾಪಾಡಿಕೊಂಡು ಬಂದಿದ್ದಾರೆ. ಕುಣಬಿ ಸಮುದಾಯದ ಕರಕುಶಲ ಕಲೆಯನ್ನು ಅದ್ವಿತೀಯ, ಏಕಪಕ್ಷೀಯ, ಸಾಂಪ್ರದಾಯಿಕ ಕಲೆಗಳಾಗಿ ವಿಂಗಡಿಸಬಹುದು. ಬಿದಿರುಗಳು, ಗುಮಟೆ, ನೃತ್ಯ ಕೋಲು, ಗರಿಟೊಪ್ಪಿಗೆ, ಮುಂತಾದವು ರೂಢಿಗತ ಸಾಂಪ್ರದಾಯಿಕ ನೃತ್ಯ ಸಂಗೀತ ಕಾರ್ಯಕ್ರಮದಲ್ಲಿ ಉಪಯೋಗಿಸಲ್ಪಡುತ್ತವೆ. ಅವರು ತೊಟ್ಟಿಲು, ಬುಟ್ಟಿ, ಮರ, ಚಾಪೆ, ಸಿಂಬಿ, ಮೂಡೆ, ಟೊಪ್ಪಿಗೆ, ಬೀಶಣಿಕೆ, ಲಘು ಪಿಠೋಪಕರಣ, ದಿನನಿತ್ಯದ ಪ್ರಯೋಗಾತ್ಮಕತೆ, ಪ್ರತಿಭೆಗಳನ್ನು, ಬಲೆನೇಯುವಿಕೆ ಕಲೆಗಳು ಕುಣಬಿಯರ ವೈಯಕ್ತಿಕ ಕಲಾ ಪ್ರತಿಭೆಯನ್ನು ತೋರಿಸುತ್ತವೆ.

ಈ ಪೂರ್ವದಲ್ಲಿ ಕುಣಬಿ ಸಮುದಾಯದವರು ಮರತೊಗಟೆಯಿಂದ ಪಾದುಕೆಗಳನ್ನು ತಯಾರಿಸುವುದು ಮತ್ತು ಕಾಳು-ಕಡಿ ಸಂಗ್ರಹಕ್ಕಾಗಿ 'ಗುಮ್ಮಿ' (Kalembi) ತಯಾರಿಸುವುದು, ಬಿದಿರು, ಈಚಲು, ನಾರಿನಿಂದ ಮಳೆ ಉಡುಪು, ಮೇಲು ಹೊದಿಕೆ, ಕೆರೆಕಟ್ಟೆಯಿಂದ ನೀರು ತರಲು, ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಸ್ತುಗಳನ್ನು ಸಾಗಿಸಲು ನಾವಿನಾಕಾರದ ಕಟ್ಟಿಗೆಯ ದೊನ್ನೆ (Kalese) ತಯಾರಿಸುತ್ತಿದ್ದರು. ಈಗ ಈ ಮೂಲಭೂತ ಕಲೆಗಳು ಒಂದೊಂದಾಗಿ ನಶಿಸುತ್ತಿವೆ.

ಚಾಪೆ ಹೆಣೆಯುವಿಕೆಯು ಕುಣಬಿ ಮಹಿಳೆಯರದೇ ಸಂಪೂರ್ಣ ಜವಾಬ್ದಾರಿಯಾಗಿದೆ, ಆದರೂ ಕಚ್ಚಾ ಸಾಮಗ್ರಿ ಸಂಗ್ರಹ ಹಾಗೂ ಪೂರ್ವ ಸಿದ್ಧತೆಯನ್ನು ಸ್ತ್ರೀ ಪುರುಷರೆಲ್ಲರೂ ಮಾಡುವರು. ಚಾಪೆಯನ್ನು ಈಚಲ ಮರದ ಗರಿ (Komb), ತೆಂಗಿನ ಗರಿ ಮತ್ತು ಕರ್ಜೂರದ ಎಳೆಗರಿಯಿಂದ ಹೆಣೆಯುವರು. ಆನಂತರ ನಾರಿನ ಎಳೆಯಿಂದ ಹೊಲೆಯುವರು, ಇದು ಅತೀ ಕಲಾತ್ಮಕತೆಯಿಂದ ಜೋಡಿಸಿದ ವಸ್ತುವೆನಿಸುವುದು, ಅಲ್ಲದೇ ಬಹುಕಾಲ ತಾಳಬಲ್ಲ ಗೃಹಪಯೋಗಿ ಸಾಧನವಾಗಿದೆ, ಈ ತರಹದ ಚಾಪೆಗಳನ್ನು ವಿವಿಧ ಆಕಾರಗಳಲ್ಲಿ ತಯಾರಿಸಿ ಕುಣಬಿ ಮಹಿಳೆಯರು ಗ್ರಾಮ ಸಂತೆ ಅಥವಾ ನಗರದ ಮಾರುಕಟ್ಟೆಗಳಲ್ಲಿ ಮಾರಾಟ ಮಾಡುತ್ತಾರೆ, ಇವುಗಳಿಗೆ ಬಹಳ ಬೇಡಿಕೆಯೂ ಇದೆ. ಈ ಚಾಪೆ ಮಾರಾಟದ ಹಣ ಮಹಿಳೆಯರಿಗೆ ಸೇರಿದ್ದು, ಅವರ ವೈಯಕ್ತಿಕ ಖರ್ಚಿಗಾಗಿ ಉಪಯೋಗಿಸಲ್ಪಡುತ್ತದೆ. ಈಗ ಖರ್ಜೂರದ ಎಲೆಯ ತೊಗಟೆಯ ಕೊರತೆ ಇರುವುದರಿಂದ Bonok (Bonaki) ಎಂಬ ಎಲೆಬಳ್ಳಿ ತೊಗಟೆ ಅಥವಾ Pine ಮರದ ತೊಗಟೆಯಿಂದ ಚಾಪೆ ಹೆಣೆಯುವರು. ಬುಟ್ಟಿ ಹೆಣೆಯುವಿಕೆಯು ಬಿದಿರು ಮೆಳೆ, ಈಚಲು, ತಾಳೆ ಗರಿಯಿಂದ ವಿವಿಧ ಆಕಾರಗಳಲ್ಲಿ ತಯಾರಿಸಲ್ಪಡುತ್ತದೆ. ಸಿಲಿಂಡರ್ ಆಕಾರದ ದೊಡ್ಡ ಬುಟ್ಟಿಗಳನ್ನು ಅರಣ್ಯ ಪ್ರದೇಶದಿಂದ ಒಣಗಿದ ಎಲೆ, ಹಣ್ಣು, ಹಂಪಲುಗಳನ್ನು ಹೆಕ್ಕಿ ತರಲು ಉಪಯೋಗಿಸುವರು. ದುಂಡಗಿನ ಬುಟ್ಟಿಗಳನ್ನು ಗೊಬ್ಬರ, ಬೀಜ ಮತ್ತು ಇನ್ನಿತರ ಧವಸ ಧಾನ್ಯ ತರಲು ಉಪಯೋಗಿಸುವರು. ಬಿದಿರು ಮೆಳೆಯ ಗರಿಯಿಂದ ತೊಟ್ಟಿಲು, ಸೌಟು, ಸಟ್ಟುಗ, ಟ್ರೇ, ಜರಡಿ, ಮುಂತಾದ ಗೃಹ ಸಲಕರಣೆಗಳನ್ನು ತಯಾರಿಸುವರು. Jeenia, Ankados ಮತ್ತು Gojinta ಮುಂತಾದ ಬಳ್ಳಿಗಳಿಂದ ವಿವಿಧ ಆಕಾರದ ಸಣ್ಣ ಸಣ್ಣ ಬುಟ್ಟಿ ತಯಾರಿಸುತ್ತಾರೆ.

ಈ ಸಿದ್ಧ ವಸ್ತುಗಳನ್ನು ಕುಣಬಿ ಮಹಿಳೆಯರು ತಮ್ಮ ಜನರಿಗೆ ಮಾರುತ್ತಾರೆ, ಇಲ್ಲವೆ ಗ್ರಾಮದ ವಾರದ ಸಂತೆ ಅಥವಾ ನಗರದ ಮಾರುಕಟ್ಟೆಗಳಲ್ಲಿ ಮಾರಾಟ ಮಾಡುತ್ತಾರೆ. ಈ ಗುಡಿ ಕೈಗಾರಿಕೆಯಿಂದ ಕುಣಬಿ ಸಮುದಾಯದ ಆದಾಯ ವೃದ್ಧಿಗಾಗಿ ಆರ್ಥಿಕ ಸುಧಾರಣೆಯಲ್ಲಿ ಪ್ರಮುಖ ಪಾತ್ರವಹಿಸುವುದು ಈ ಕರಕುಶಲ ಕಲೆಯಿಂದ ಅವರ ಎಲ್ಲ ದಿನನಿತ್ಯದ ಬೇಡಿಕೆಗಳು

ಪೂರೈಸುವುದಿಲ್ಲ. ಇವುಗಳನ್ನು ಕೂಡ ನೇರ ಮಾರಾಟ ಮಾಡುವ ಹಾಗಿಲ್ಲ, ಬಿದಿರು ಬೆತ್ತದ ಮೇಲೆ ನಿಷೇಧ ಇರುವುದರಿಂದ ಬಹಿರಂಗವಾಗಿ ಉತ್ಪಾದಿಸುವ ಹಾಗಿಲ್ಲ, ಅದಲ್ಲದೇ ಇವರ ಕಲಾ ನಿಪುಣತೆಯನ್ನು ಮಧ್ಯ ವರ್ತಿಗಳಿಗೆ ಕಳ್ಳದಾರಿಗಳಲ್ಲಿ ಬರುವ ಏಜೆಂಟರು ಇವುಗಳನ್ನು ಅತಿ ಕಡಿಮೆ ಬೆಲೆಯಲ್ಲಿ ಪಡೆದು ಶೋಷಿಸುವುದರಿಂದ ಈ ಸಮುದಾಯದ ಆರ್ಥಿಕ ಪರಿಸ್ಥಿತಿ ಸುಧಾರಣೆಯಾಗದು, ಹೀಗಾಗಿ ಇವರು ಈಗ ಬುಟ್ಟಿ, ಚಾಪೆ, ಕಾಯಕವನ್ನು ಮುಂದುವರಿಸಿ, ಇತರ ಕುಶಲ ಕಲಾ ವಸ್ತುಗಳನ್ನು ನಿಲ್ಲಿಸಿದ್ದಾರೆ. ಕುಣಬಿ ಸಮುದಾಯದ ಯುವ ಪೀಳಿಗೆಯು ಸಂಪೂರ್ಣ ಮರೆತುಬಿಟ್ಟಿದೆ.

**೪.೪ ಕುಣಬಿಯರ ಆರ್ಥಿಕ ಸಂಕಷ್ಟಗಳು**

ನಿಸರ್ಗದ ಶಿಶುಗಳಾಗಿ ಬದುಕಿಬಂದ ನಿಸರ್ಗವನ್ನೇ ದೈವವೆಂದು ಆರಾಧಿಸಿಕೊಂಡು ಬಂದ ಕುಣಬಿಯರಿಗೆ ಅದೇ ನಿಸರ್ಗ ದೂರವಾಗತೊಡಗಿದೆ ಇದು ಒಂದು ವ್ಯವಸ್ಥೆಯ ವೈಪರೀತ್ಯ. ಕುಣಬಿಯರ ಆರ್ಥಿಕ ಸಂಕಷ್ಟಕ್ಕೆ ಎರಡು ಪ್ರಮುಖ ಕಾರಣಗಳು ಉಂಟಾಗಿವೆ.

೧. ಕಾಡಿನ ಸಮಸ್ಯೆ

೨. ಭೂಮಿಯ ಸಮಸ್ಯೆ

**ಕೃಷಿ ಮತ್ತು ಕುಣಬಿಗಳು**

ಇಂದು ನಮ್ಮಲ್ಲಿರುವುದು ಸಂಪೂರ್ಣವಾಗಿ ಕೃಷಿ ಪ್ರಧಾನ ವ್ಯವಸ್ಥೆ. ಕುಣಬಿಯರು ಇಂದಿನ ವ್ಯವಸ್ಥೆಯಲ್ಲಿ ಅಲೆಮಾರಿಗಳಾಗಿ ಉಳಿದಿಲ್ಲ. ಕಾಡಿನ ಕಾಯ್ದೆಗಳು ರೂಪಿತಗೊಂಡ ಮೇಲೆ ಸ್ಥಳಾಂತರ ಕೃಷಿ ಸಾಧ್ಯವಿಲ್ಲದ ಕಾರಣ ಅವರ ಅಲೆ ಅರೆಮಾರಿತನವೂ ನಿಂತು ಹೋಗಿದೆ. ಏಕೆಂದರೆ ಇವರು ಇತರೆ ಅಲೆಮಾರಿಗಳಂತೆ ತಮ್ಮ ವೃತ್ತಿಗಳನ್ನು ಬದಲಾಯಿಸುವವರೂ ಅಲ್ಲ. ಕೃಷಿ ಮತ್ತು ಆಹಾರ ಸಂಗ್ರಹಣೆಗೆ ಹಾಗೂ ಕರಕುಶಲತೆ ಬಿಟ್ಟು ಬೇರಾವ ವೃತ್ತಿಗಳು ಗೊತ್ತಿರುವವರೂ ಅಲ್ಲ, ಆದ್ದರಿಂದ ಭೂಮಿ ಎಂಬುದು ಇವರಿಗೆ ಅತ್ಯಾವಶ್ಯಕ. ಆದರೆ ಸ್ವಚ್ಛಂದವಾಗಿ ಓಡಾಡಿಕೊಂಡು ಇದ್ದ ಇವರ ಬದುಕು ಅಸ್ಥಿರತೆಗೆ ಬರಲು ಕೆಲವು ಕಾರಣಗಳಿವೆ.

ಈಗಾಗಲೇ ಹೇಳಿದಂತೆ ಬುಡಕಟ್ಟುಗಳಿಗೆ ಸ್ವಂತ ಆಸ್ತಿಯ ಕಲ್ಪನೆ ಇರಲಿಲ್ಲ. ತೀರಾ ಮೊದಲಿಗೆ ಆಹಾರ ಸಂಗ್ರಹಣೆ ಮತ್ತು ಬೇಟೆಯಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಇವರು ಕೃಷಿಯ ಅನ್ವೇಷಣೆಯ ನಂತರ ಕೂಡಾ ಒಂದೆಡೆ ನಿಂತು ಒಂದೇ ಭೂಮಿಯನ್ನು ನಂಬಿ ಬದುಕಿದವರಲ್ಲ. ಇವರ 'ಕುಮರಿ ಬೇಸಾಯ' ಮಾಡುತ್ತಾ ಜಾಗದಿಂದ ಜಾಗಕ್ಕೆ ಸ್ಥಳಾಂತರವಾಗುತ್ತಿದ್ದರು ಅಂದರೆ ಕಾಡೊಳಗಿನ ಒಂದೆರಡು ಎಕರೆಯಷ್ಟು ಭೂಮಿಯನ್ನು ಹಸನು ಮಾಡಿ ಬಿತ್ತನೆ ಮಾಡುವ ಪದ್ಧತಿ. ಈ ಕುಮರಿ ಬೇಸಾಯದ ಎರಡು ಮುಖ್ಯ ಲಕ್ಷಣಗಳೆಂದರೆ

ನೇಗಿಲನ್ನು ಬಳಸದೆ ಯಾವುದೇ ತರಹದ ನೇಗಿಲಿನಂತಹ ಸಲಕರಣೆಯನ್ನು ಭೂಮಿಯ ಎದೆಗೆ ಚುಚ್ಚದೆ ಗುದ್ದಲಿಯಿಂದ ಮಾತ್ರ ಅಗೆದು ಮಾಡುವುದು ಹಾಗೂ ನಿರ್ದಿಷ್ಟ ಪ್ರದೇಶದಲ್ಲಿದ್ದ ಮೂರು ಸಲಕ್ಕಿಂತ ಹೆಚ್ಚಿನ ಬಾರಿಗೆ ಬೆಳೆ ತಗೆಯದೆ ಮುಂದಿನ ಪ್ರದೇಶಕ್ಕೆ ಹೋಗುತ್ತಿದ್ದರು. ನೇಗಿಲಿನ ಉಪಯೋಗ ಇರಲಿಲ್ಲ ಎಂದರೆ ಕೃಷಿ ಭೂಮಿಯ ವಿಸ್ತರಣೆ ಕೂಡ ಇರಲಿಲ್ಲ ಎಂದೇ ಅರ್ಥ. ಬ್ರಿಟಿಷರ ಆಗಮನದ ನಂತರ ಬಂದ ಕಬ್ಬಿಣದ ನೇಗಿಲ ಎಷ್ಟರಮಟ್ಟಿಗೆ ಕೃಷಿ ಭೂಮಿಯ ವಿಸ್ತರಣೆ ಮಾಡಿತು ಎಂಬುದು ನಮಗೆಲ್ಲಾ ಗೊತ್ತೇ ಇದೆ. ಯಾವುದೇ ಕಾಡು ಭೂಮಿಯಲ್ಲಿ ಕಾಡು ಕಡಿದರೂ ಅನಂತರ ಅದರ ಪಾಡಿಗೆ ಅದನ್ನು ಏಳು ವರ್ಷ ಬಿಟ್ಟರೆ ಮತ್ತದೇ ಕಾಡು ಆವರಿಸಿಕೊಳ್ಳುತ್ತದೆ, ಇದನ್ನು ತಿಳಿದಿದ್ದ ಈ ಜನರು 'ಖಾಯಂ ಕೃಷಿ' ಭೂಮಿಯ ಬದಲಾಗಿ 'ಕುಮರಿ ಕೃಷಿ'ಯನ್ನು ಅವಲಂಬಿಸಿ ಆ ಮೂಲಕ ಕಾಡಿಗೆ ಯಾವುದೇ ಅಪಾಯವನ್ನು ಬರದಂತೆ ಸಮತೋಲನವನ್ನು ಕಾಪಾಡಿಕೊಂಡು ಬರುತ್ತಿದ್ದರು. ಹೀಗೆ ಇಡೀ ಕಾಡು ತಮ್ಮದು ಎಂಬ ಮನೋವೈಶಾಲ್ಯದಿಂದ ಬಾಳುವ ಮೂಲಕ ಅದರ ಅಸ್ತಿತ್ವಕ್ಕೆ ಧಕ್ಕೆ ಬಾರದಂತೆ ಬದುಕಿದ ಇವರನ್ನು ಅತಿಕ್ರಮಿಸಿ ಕಾಡು ಮತ್ತು ಭೂಮಿ 'ನನ್ನದು' ಎಂಬ ಅಹಂಕಾರದಿಂದ ಗುತ್ತಿಗೆ ಹಿಡಿದ ನಾಗರಿಕ ಮನುಷ್ಯನಿಂದಾಗಿ ಅವರು ಅತಂತ್ರದ ಸ್ಥಿತಿ ತಲುಪಿದ್ದಾರೆ.

**೪.೫ ಭೂ ಹಿಡುವಳಿ ಹಾಗೂ ಕೃಷಿ ಚಟುವಟಿಕೆಗಳು**

ಕುಣಬಿ ಸಮುದಾಯದವರು ಬೆಟ್ಟ ಪ್ರದೇಶ ಮತ್ತು ಬಯಲು ಪ್ರದೇಶದಲ್ಲಿ ನೆಲೆಸಿ ಬಾಡಿಗೆ ಕೃಷಿಕರಾಗಿ ಅಥವಾ ಹಿಡುವಳಿದಾರರಾಗಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾರೆ. ಖಾಸಗಿ ಭೂಒಡೆತನದ ಕಲ್ಪನೆಯನ್ನು ಕುಣಬಿಗಳು ಇತ್ತೀಚೆಗೆ ಒಪ್ಪಿಕೊಂಡಿದ್ದಾರೆ, ಭೂಮಿಯ ಆಕಾರ ಹಾಗೂ ಗುಣವನ್ನು ಅರಿತ ಸಾಗುವಳಿ ಯೋಜನೆಗಳು ಬುಡಕಟ್ಟು ಸಮುದಾಯದವರ ಆರ್ಥಿಕ ಸ್ಥಿತಿ ಹಾಗೂ ಜೀವನಮಟ್ಟವನ್ನು ನಿಶ್ಚಿತವಾಗಿ ನಿರ್ಧರಿಸಬಲ್ಲವು. ಒಂದು ಗಮನಾರ್ಹ ಸಂಗತಿ ಎಂದರೆ ಬಹುತೇಕ ಕುಣಬಿ ಕುಟುಂಬಗಳು ಒಂದು ಎಕರೆಗಿಂತ ಕಡಿಮೆ ಸಾಗುವಳಿಗೆ ಯೋಗ್ಯ ಜಮೀನು ಪಡೆದಿದ್ದು, ಕೃಷಿ ಯೋಗ್ಯವಲ್ಲದ ಜಮೀನಿನ ಪ್ರಮಾಣವೂ ಸಾಕಷ್ಟು ಪ್ರಮಾಣದಲ್ಲಿದೆ. ಹೀಗಾಗಿ ಒಣ ಭೂಮಿ ಹಾಗೂ ಕೃಷಿ-ಅಯೋಗ್ಯ ಭೂಮಿ ಹೊಂದಿದ ಕುಣಬಿ ಸಮುದಾಯಕ್ಕೆ ಆರ್ಥಿಕ ಕೊರತೆ ಹಾಗೂ ಇಳಿಮುಖ ಜೀವನ ಮಟ್ಟಕ್ಕೆ ಇದೇ ಕಾರಣ.

ಕರ್ನಾಟಕ ಸರಕಾರದ ಭೂ ಸುಧಾರಣೆ ಕಾಯ್ದೆ-೧೯೭೧ ರಲ್ಲಿ ಜಾರಿಗೆ ಬಂದ ನಂತರ ಕುಣಬಿ ಸಮುದಾಯದ ಅನೇಕ ಬಾಡಿಗೆ ಕೃಷಿಕರಿಗೆ ತಮ್ಮ ಭೂಮಾಲೀಕರಿಂದ ಜಮೀನು ಸ್ವಂತ ಸಾಗುವಳಿಗೆ ದೊರೆಯಿತು. ಕೆಲವರಿಗೆ ಭೂಮಾಲೀಕರಿಂದ ಸ್ವ-ಸಂತೋಷದಿಂದಲೇ ತುಂಡು ಭೂಮಿ ಬಳುವಳಿಯಾಗಿ ದೊರೆಯಿತು, ಇಡೀ ಬಾಡಿಗೆ ಕೃಷಿ ಜಮೀನನ್ನು ಗೇಣಿ-ಗೋಷಣೆ

ಮಾಡುವುದನ್ನು ತಪ್ಪಿಸಿಕೊಂಡರು. ಕೆಲವು ಕಡೆಗೆ ಇನ್ನೂ ಭೂಮಾಲಿಕ-ಗೇಣಿದಾರರ ನಡುವೆ ತಂಟೆ-ಕಟ್ಟಳೆಗಳು ನಡೆದಿವೆ. ಕೆಲವೊಂದು ಕಡೆಗೆ ಕುಣಬಿ ಸಮುದಾಯದ ಗೇಣಿದಾರರಿಗೆ ಭೂಮಾಲಿಕರಿಂದ ಹೆದರಿಕೆಯಿಂದ ಮತ್ತು ತಮ್ಮ ಅಜ್ಞಾನ ಹಾಗೂ ಬಡತನಗಳಿಂದ ಭೂಮಿ-ಹಕ್ಕು ಮಂಡಿಸುವುದು ಸಾಧ್ಯವಾಗಲಿಲ್ಲ. ಅಂತಹ ಅಂಜಿಕೆ ಸ್ವಭಾವದ ಕುಣಬಿ ಕೃಷಿ ಕಾರ್ಮಿಕರು ತಮ್ಮ ಗೇಣಿ ಜಮೀನನ್ನು ತೊರೆದು ಬೆಟ್ಟ-ಗುಡ್ಡಗಾಡು ಪ್ರದೇಶಗಳಿಗೆ ವಲಸೆ ಹೋಗಬೇಕಾಯಿತು. ಅನಂತರ ಈ ಪ್ರದೇಶಗಳಲ್ಲಿ ಕೃಷಿ ಯೋಗ್ಯ ಭೂಮಿ ಪಡೆಯಲು ಸಾಧ್ಯವಾಯಿತು. ಈ ತರಹದ ಫಲಾನುಭವಿಗಳು ವೈಯಕ್ತಿಕ ಸಂದರ್ಶನದಲ್ಲಿ ತಿಳಿಸಿದ ಸಂಗತಿ ಏನೆಂದರೆ ತಾವು ಪಡೆದ ಭೂಮಿಗಿಂತ ಕಳೆದುಕೊಂಡ ಸಾಗುವಳಿ ಜಮೀನು ಹೆಚ್ಚು. ಇನ್ನೊಂದು ಸ್ವಾರಸ್ಯಕರ ಸಂಗತಿ ಎಂದರೆ ಭೂಸುಧಾರಣೆ ಕಾಯ್ದೆ ಪ್ರಕಾರ ಅವಿಭಕ್ತ ಕುಟುಂಬಗಳಿಗೆ ಕೊಡಮಾಡಿದ ಜಮೀನನ್ನು ಕುಟುಂಬಗಳು ಒಡೆದಿದ್ದರೂ ಪಾಲು ಹಂಚಿಕೆ ಮಾಡುವಂತಿಲ್ಲ.

ಕುಣಬಿ ಸಮುದಾಯ ಕೃಷಿ ಚಟುವಟಿಕೆಗಳಲ್ಲಿ ಪರಿಣಿತಿ ಹೊಂದಿದ್ದು ಶ್ರಮಜೀವಿಗಳಾಗಿದ್ದಾರೆ. ಇವರಲ್ಲಿ ಖಾಯಂ ಕೃಷಿಕರಾಗಿ ನೆಲೆಸಿದ ಕುಣಬಿ ಜನರು ಉಳಿಮೆ-ಕೃಷಿ ಮಾಡುತ್ತಿರುವವರು. ಅವರು ಸಾಮಾನ್ಯವಾಗಿ ಬತ್ತ ಹಾಗೂ ಬೇಳೆ ಕಾಳುಗಳ ಬೇಸಾಯ ಮಾಡುತ್ತಿದ್ದಾರೆ. ಇವಲ್ಲದೆ ಸಿಹಿ ಗೆಣಸು ಕೂಡಾ ಬೆಳೆಯುತ್ತಾರೆ. ಇತ್ತೀಚೆಗೆ ಕೆಲವು ಪ್ರಗತಿಪರ ಮನೋಭಾವದ ಕುಣಬಿ ಸಮುದಾಯ ವಾಣಿಜ್ಯ ಬೆಳೆಗಳೆನಿಸಿದ ಕಬ್ಬು, ಅರಿಶಿಣ, ಮೆಣಸಿನಕಾಯಿ, ಶುಂಠಿ, ತೆಂಗು ಹಾಗೂ ಅಡಿಕೆ ಕೂಡ ಬೆಳೆಯುತ್ತಿದ್ದಾರೆ. ಈ ಉತ್ತರ ಕನ್ನಡ ಜಿಲ್ಲೆಯ ಹಳಿಯಾಳದಲ್ಲಿ ಸಕ್ಕರೆ ಕಾರಖಾನೆ ಸ್ಥಾಪನೆಯಾಗಿರುವುದರಿಂದ ಕಬ್ಬು ಅತ್ಯಂತ ಜನಪ್ರಿಯ ಬೆಳೆಯಾಗಿದೆ, ಕೆಲವು ಕುಣಬಿಗಳು ಕಾಯಿಪಲ್ಲೆ ಹಾಗೂ ಹಣ್ಣು-ಹಂಪಲು ಬೆಳೆಯುವರು. ಸಾಮಾನ್ಯವಾಗಿ ಕುಣಬಿ ಸ್ತ್ರೀಯರೇ ತಮ್ಮ ಹಿತ್ತಲ ಕೈತೋಟಗಳಲ್ಲಿ ತರಕಾರಿ ಹಾಗೂ ಹಣ್ಣು-ಹಂಪಲ ಬೆಳೆಯುವರು. ಕೆಲವರು ತಮ್ಮ ಬತ್ತದ ಕೊಯ್ಲು ಮುಕ್ತಾಯವಾದ ನಂತರ ಬತ್ತದ ಗದ್ದೆಗಳಲ್ಲಿಯೇ ತರಕಾರಿ ಬೆಳೆಯುತ್ತಾರೆ. ಪ್ರತಿ ವಾರವೂ ಸಮೀಪದ ಸಂತೆಗಳಲ್ಲಿ ತಮ್ಮ ಕರಕುಶಲ ವಸ್ತುಗಳೊಂದಿಗೆ ಹೆಚ್ಚು ಬೆಳೆದ ತರಕಾರಿಯನ್ನು ಮಾರಾಟ ಮಾಡಿ ಉಪ ಆದಾಯ ಪಡೆದು ತಮ್ಮ ದಿನನಿತ್ಯದ ಅವಶ್ಯಕತೆಗಳಾದ ಬಟ್ಟೆ-ಬರೆ, ಕಿರಾಣಿ, ಪಾತ್ರೆ-ಪಗಡಗಳನ್ನು ಖರೀದಿಸುವವರು.

ಗಿಡ ಮೂಲಿಕೆಯ ಸಸ್ಯಗಳನ್ನು ಬೆಳೆಯುತ್ತಿದ್ದು ಇವುಗಳಿಗೆ ವಾರದ ಸಂತೆಗಳಲ್ಲಿ ಬಹಳ ಬೇಡಿಕೆ ಇದೆ. ಈ ಮುಂಚೆ ಕುಣಬಿ ಪೂರ್ವಜರಲ್ಲಿ ಇಂತಹ ದಿನೋಪಯೋಗಿ ವಸ್ತುಗಳನ್ನು ಹಣಕ್ಕಾಗಿ ಸಂತೆ ಮಾರಾಟ ಮಾಡದೆ, ತಮ್ಮ ತಮ್ಮಲ್ಲಿ ಬೇಕು ಬೇಡಗಳನ್ನು ವಿನಿಮಯ ಪದ್ಧತಿ (Barter System)ನಲ್ಲಿ ಹಂಚಿಕೊಳ್ಳುತ್ತಿದ್ದರು. ಈಗ ಅವರ ಜೀವನ ಶೈಲಿಯಲ್ಲಿ ಸುಧಾರಣೆ

ಕಂಡುಬಂದಿದ್ದು 'ವಿನಿಮಯ ಪದ್ಧತಿ' ಹೊರತಾಗಿ 'ಮಾರುಕಟ್ಟೆ ಸಂಸ್ಕೃತಿ' ಬಂದಿದೆ. ಅದರಿಂದ ಆರ್ಥಿಕ ಸುಧಾರಣೆಯೂ ಕಂಡು ಬರತೊಡಗಿದೆ.

**ಕೃಷಿ :** ಕುಣಬಿಗಳಿಗೆ ತಮ್ಮ ಪೂರ್ವಜರಿಂದ ತಲಾಂತರಗಳಿಂದ ಬಂದ ಕೃಷಿ ಭೂಮಿ ಇಲ್ಲ. ಇವರಲ್ಲಿ ಬಹುಪಾಲು ಕುಟುಂಬಗಳು ಕೃಷಿಕೂಲಿಗಳಾಗಿ ಬದುಕುತ್ತಿವೆ. ನದಿಗಳ ತಡದಲ್ಲಿ, ನಿರ್ಜನ ಕಣಿವೆಗಳಲ್ಲಿ ಅಥವಾ ಕಡಲ ತೀರದಲ್ಲಿ ಸಿಗುವ ಸ್ವಲ್ಪ ಭೂಮಿಯನ್ನೇ ಇವರು ಕೃಷಿ ಯೋಗ್ಯವಾಗಿಸಿಕೊಂಡಿದ್ದಾರೆ. ಈ ಭೂಮಿ ಯಾವುದೇ ಕಾಲಘಟ್ಟದ ಕಾನೂನುಗಳ ಪ್ರಕಾರ ಪಟ್ಟ ಭೂಮಿಯಾಗಿ ಕೈಸೇರಿದೆ. ಕುಣಬಿಗಳಿಗೆ ಇರುವ ಕೃಷಿ ಭೂಮಿ ಎಕ್ಕರೆಗಟ್ಟಲೆ ಇಲ್ಲ, ಅದೇನೇ ಇದ್ದರು ಗುಂಟೆಗಳಲ್ಲಿದೆ. ಈ ಅಲ್ಪ ಕೃಷಿ ಜಮೀನು ಕುಣಬಿಗಳ ಕುಟುಂಬಗಳನ್ನು ಆರ್ಥಿಕವಾಗಿ ಸಬಲೀಕರಿಸಲು ಸಾಧ್ಯವಿಲ್ಲ. ನಾನು ಅಧ್ಯಯನ ಮಾಡಿದ ಒಂದು ಸಾವಿರ ಕುಟುಂಬಗಳ ಭೂ ಹಿಡುವಳಿ ಈ ಕೆಳಗಿನಂತಿದೆ.

**ಕೋಷ್ಟಕ-೪.೧**

**ಕುಣಬಿ ಕುಟುಂಬಗಳ ಭೂ ಹಿಡುವಳಿ ವಿವರ**

| ಕ್ರ.ಸಂ. | ಹಿಡುವಳಿ | ಕುಟುಂಬಗಳು | ಪ್ರತಿಶತ |
|---|---|---|---|
| ೧ | ೨ ಎಕರೆ ಮೇಲ್ಪಟ್ಟು | ೫೨ | ೫ |
| ೨ | ೧ ರಿಂದ ೨ ಎಕರೆ | ೧೮೦ | ೧೮ |
| ೩ | ೨೦ ಗುಂಟೆಯಿಂದ ೧ ಎಕರೆ | ೨೧೯ | ೨೨ |
| ೪ | ೧ ರಿಂದ ೧೦ ಗುಂಟೆ | ೧೧೯ | ೧೨ |
| ೫ | ೧೦ ಗುಂಟೆ | ೫೬ | ೬ |
| ೬ | ಭೂರಹಿತರು | ೧೯೨ | ೧೯ |
| ೭ | ಭೂಮಿ ಕಳೆದುಕೊಂಡವರು | ೧೮೨ | ೧೮ |
| | ಒಟ್ಟಾರೆ | ೧೦೦೦ | ೧೦೦ |



ನಾಲ್ಕು ತಾಲೂಕುಗಳ ೪೨ ಕೊಪ್ಪಗಳಲ್ಲಿನ ಒಂದು ಸಾವಿರ ಕುಟುಂಬಗಳಲ್ಲಿ ೫೨ ಕುಟುಂಬಗಳು ಮಾತ್ರ ೨ ಎಕರೆ ಮೇಲ್ಪಟ್ಟು ಕೃಷಿ ಭೂಮಿಯನ್ನು ಹೊಂದಿದೆ, ಅಂದರೆ ಪ್ರತಿಶತ ೫ ರಷ್ಟು ಕುಟುಂಬಗಳು ೨ ಮತ್ತು ಅದಕ್ಕಿಂತ ಕಡಿಮೆ ಎಕರೆಗಳ ಕೃಷಿ ಜಮೀನು ಹೊಂದಿದೆ. ೧ ರಿಂದ ೨ ಎಕರೆ ಕೃಷಿ ಜಮೀನು ಹೊಂದಿರುವ ಕುಟುಂಬಗಳು ೧೮೦, ಅಂದರೆ ಪ್ರತಿಶತ ೧೮ ರಷ್ಟು ಕುಟುಂಬಗಳು ೧ ರಿಂದ ೨ ಎಕರೆ ಜಮೀನು ಹೊಂದಿದೆ. ಪ್ರತಿಶತ ೨೨ ರಷ್ಟು ಕುಟುಂಬಗಳು ೨೦ ಗುಂಟೆಯಿಂದ ೧ ಎಕರೆವರೆಗೆ ಜಮೀನು ಹೊಂದಿದೆ, ಅಂದರೆ ಈ ಜಮೀನು ೨೧೯ ಕುಟುಂಬಗಳಲ್ಲಿ ಹಂಚಿಕೆಯಾಗಿದೆ. ೧ ರಿಂದ ೧೦ ಗುಂಟೆವರೆಗೆ ಜಮೀನು ಹೊಂದಿರುವ ಕುಟುಂಬಗಳು ೧೧೯ ಕುಟುಂಬಗಳು. ಇನ್ನೂ ೧೦ ಗುಂಟೆ ಕೃಷಿ ಜಮೀನು ಹೊಂದಿರುವುದು ೫೬ ಕುಟುಂಬಗಳು. ಉತ್ತರ ಕನ್ನಡದ ಪಶ್ಚಿಮ ಘಟ್ಟ ಮತ್ತು ಕರಾವಳಿಯಲ್ಲಿ ಜಾರಿಯಾದ ಸರಕಾರದ ವಿವಿಧ ಅಭಿವೃದ್ಧಿ ಯೋಜನೆಗಳಿಂದ ಭೂಮಿ ಕಳೆದುಕೊಂಡವರು ೧೮೨ ಕುಟುಂಬಗಳು, ಅಂದರೆ ಪ್ರತಿಶತ ೧೮ ರಷ್ಟು ಕುಟುಂಬಗಳು ಸ್ಥಳಾಂತರಿಸಲ್ಪಟ್ಟ ಕಾರಣಕ್ಕಾಗಿ ಇಲ್ಲವೆ 'ಅಭಿವೃದ್ಧಿ ಯೋಜನೆ'ಗಳಿಗಾಗಿ ತಮ್ಮ ಜಮೀನನ್ನು ಕಳೆದುಕೊಂಡಿವೆ. ೧೯೨ ಕುಟುಂಬಗಳು ಅಂದರೆ ಸುಮಾರು ಪ್ರತಿಶತ ೧೯ ರಷ್ಟು ಕುಣಬಿ ಕುಟುಂಬಗಳು ಭೂರಹಿತ ಕುಟುಂಬಗಳಾಗಿವೆ.

ಒಟ್ಟಿನಲ್ಲಿ ನಾನು ಅಧ್ಯಯನ ಮಾಡಿದ ಕುಣಬಿ ಸಮುದಾಯದಲ್ಲಿ ಈ ಕೆಳಗಿನ ಸಂಗತಿಗಳು ಕಂಡು ಬರುತ್ತವೆ. ಪಾರಂಪರಿಕ ಕೃಷಿಕರಾದ ಕುಣಬಿಗಳು ವರ್ತಮಾನದಲ್ಲಿ ಕೃಷಿ ಕೂಲಿಗಳಾಗಿ ಬದಕುತ್ತಿದ್ದಾರೆ. ಕುಮರಿ ಬೇಸಾಯದ ಸಂದರ್ಭದಲ್ಲಿ ಸ್ವತಂತ್ರವಾಗಿ ಎಲ್ಲೆಂದರಲ್ಲಿ ಕಾಡಿನ ಒಡಲಲ್ಲಿ ಕೃಷಿ ಮಾಡುತ್ತಿದ್ದ ಕುಣಬಿಗಳು ಅದು ರದ್ದಾದ ನಂತರ ತಮ್ಮ ಅಲೆಮಾರಿ ಕೃಷಿಯನ್ನು ನಿಲ್ಲಿಸಬೇಕಾಯಿತು. ವಸಾಹತು ಸಂದರ್ಭದಲ್ಲಿ ಕೃಷಿ ಭೂಮಿಗೆ ದಾಖಲೆಗಳು ಸೃಷ್ಟಿಯಾದವು ಜೊತೆಗೆ ಸ್ಥಳೀಯ ಭೂ ಮಾಲಿಕ ವರ್ಗವು ತನಗೆ ಬೇಕಾದಂತೆ ಭೂಮಿಯ ದಾಖಲೆಗಳನ್ನು ಸೃಷ್ಟಿಸಿ ಕೃಷಿ ಭೂಮಿಯನ್ನು ತಮ್ಮದಾಗಿಸಿಕೊಂಡರು. ಉತ್ತರ ಕನ್ನಡದ ಅಭೇದ್ಯ ಕಾಡುಗಳಲ್ಲಿನ ಕುಣಬಿಗಳಂತಹ ಆದಿವಾಸಿ ಸಮುದಾಯಗಳು ಶಾಶ್ವತವಾಗಿ ತಮ್ಮ ಪಾರಂಪರಿಕ ಕೃಷಿ ಭೂಮಿಗಳನ್ನು ಕಳೆದುಕೊಂಡವು. ಆನಂತರ ಅವರು ನೆಲೆನಿಂತ ಕಡೆಯಲ್ಲಿ ಸಿಕ್ಕ ತುಂಡು ಭೂಮಿಯನ್ನೆ ಕೃಷಿ ಯೋಗ್ಯ ಮಾಡಿಕೊಂಡರು. ಈ ತುಂಡು ಭೂಮಿಯು ಆನಂತರ ಉತ್ತರ ಕನ್ನಡ ಜಿಲ್ಲೆಯಲ್ಲಿ ಸರಕಾರದ ವಿವಿಧ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ನೆಪದಲ್ಲಿ ಈ ಸಮುದಾಯದವರನ್ನು ಭೂರಹಿತರನ್ನಾಗಿ ಮಾಡುವ ವ್ಯವಸ್ಥಿತ ಸಂಚನ್ನು ಹೂಡಿರಬಹುದು. ಕುಣಬಿಗಳು ಈಗ ತಾವು ಹೊಂದಿರುವ ಜಮೀನುಗಳಲ್ಲಿ ಲಘು ಕೃಷಿ

ಮಾಡುತ್ತಿರುವರು, ಈ ಲಘು ಕೃಷಿ ಕುಣಬಿ ಕುಟುಂಬಗಳನ್ನು ನಿತ್ಯ ಪೋಷಿಸುವ ಜೀವದಾಯಕ ಆರ್ಥಿಕ ಚಟುವಟಿಕೆಯಾಗಿ ಪರಿಣಮಿಸಿದೆ. ಅಧ್ಯಯನದ ಪ್ರಕಾರ ಕುಣಬಿ ಸಮುದಾಯಕ್ಕೆ ಭೂಮಿಯು ಅತಿ ಕಡಿಮೆಯಾಗಿದ್ದು ಅಂದರೆ ಒಂದು ಕುಟುಂಬಕ್ಕೆ ಗುಂಟೆಗಳಲ್ಲಿ ಜಮೀನು ಇರುವದು ಕಂಡುಬಂದಿದೆ. ಈ ಸಮುದಾಯದಲ್ಲಿ ಭೂರಹಿತರು, ಭೂಮಿ ಕಳೆದುಕೊಂಡವರು ಹೆಚ್ಚು ಜನರು ಇದ್ದಾರೆ.

**ಆಧುನಿಕ ಕೃಷಿ ಪದ್ಧತಿ**

ಕುಣಬಿಯರ ಭೂಮಿಯ ಅಳತೆ ಮತ್ತು ಅವರು ಅದನ್ನು ಬಳಸುವ ರೀತಿಯ ಮೇಲೆ ಅವರ ಆರ್ಥಿಕ ಜೀವನ ಪದ್ಧತಿಗಳು ಅವಲಂಬಿತವಾಗಿವೆ. ಈಗ ಕುಣಬಿ ಸಮುದಾಯದಲ್ಲಿ ಕೃಷಿ ಚಟುವಟಿಕೆಗಳು ಸಾಮಾನ್ಯವಾಗಿದ್ದರೂ, ಆಧುನಿಕ ಕೃಷಿ ಪದ್ಧತಿ ಹಾಗೂ ತಂತ್ರಜ್ಞಾನದ ಬಳಕೆ ತೀರಾ ವಿರಳ. ಇದೀಗ ಆಧುನಿಕ ಕೃಷಿ ಚಟುವಟಿಕೆಗಳೆನಿಸಿದ ರಾಸಾಯನಿಕ ಗೊಬ್ಬರ ಬಳಕೆ, ಕೀಟನಾಶಕಗಳ ಸಿಂಪರನೆ, ಕ್ರಮಬದ್ಧ ನಿರಾವರಿ, ಸಂಸ್ಕರಿತ ಬೀಜಗಳ ಬಳಕೆ, ಆಧುನಿಕ ಕೃಷಿ ಸಲಕರಣೆಗಳ ಬಳಕೆಯಿಂದ ನಿಜವಾಗಿಯು ಅಧಿಕ ಉತ್ಪನ್ನ ಹಾಗೂ ಉತ್ತಮ ಆದಾಯ ದೊರೆಯಬಹುದು.

**ಕೋಷ್ಟಕ–೪.೨**
**ಕುಣಬಿ ಸಮುದಾಯದಲ್ಲಿ ಆಧುನಿಕ ಕೃಷಿ ಪದ್ಧತಿಯ ಅಳವಡಿಕೆಯ ವಿವರ**

| ಕ್ರಸಂ. | ವಿವರ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ರಾಸಾಯನಿಕ ಗೊಬ್ಬರ | ೬೨ | ೨೧ |
| ೨ | ಕ್ರಿಮಿನಾಶಕ ಬಳಕೆ | ೧೮ | ೬ |
| ೩ | ಮಾನವ ನಿರ್ಮಿತ ನೀರಾವರಿ | ೭೭ | ೨೬ |
| ೪ | ಸಂಸ್ಕರಿತ ಬೀಜ, ಗೊಬ್ಬರ, ಕ್ರಿಮಿನಾಶಕ | ೩೪ | ೧೧ |
| ೫ | ಮೇಲ್ಕಾಣಿಸಿದ ಎಲ್ಲಾ ಪದ್ಧತಿಗಳು | ೨೬ | ೮ |
| ೬ | ಅನ್ವಯವಾಗದಿದ್ದವರು | ೮೩ | ೨೮ |
| | ಒಟ್ಟಾರೆ | ೩೦೦ | ೧೦೦ |

ಮೇಲಿನ ಕೋಷ್ಟಕದಲ್ಲಿ ಕಂಡುಬಂದಿರುವಂತೆ ಆಧುನಿಕ ಕೃಷಿ ಪದ್ಧತಿಯ ಬಗ್ಗೆ ಕೇಳಲಾದ ಪ್ರಶ್ನಾವಳಿಗೆ ಉತ್ತರಿಸಿದ ಮಾಹಿತಿದಾರರಲ್ಲಿ ಪ್ರತಿಶತ ೨೧ ಜನರು ರಾಸಾಯನಿಕ ಗೊಬ್ಬರ ಬಳಕೆ ಮಾಡುತ್ತಿದ್ದು, ೧೮ ಜನರು ತಮ್ಮ ಬೆಳೆಗಳನ್ನು ಕ್ರಿಮಿಕೀಟಗಳಿಂದ ರಕ್ಷಿಸಿಕೊಳ್ಳಲು

ಬಯಸುತ್ತಾರೆ, ೭೭ ಜನರು ಮಾನವ ನಿರ್ಮಿತ ನೀರಾವರಿ ಪ್ರಯೋಗ ಮಾಡುವರು, ೩೪ ಜನರು ಸಂಸ್ಕರಿತ ಬೀಜ, ರಾಸಾಯನಿಕ ಗೊಬ್ಬರ ಹಾಗೂ ಕ್ರಿಮಿನಾಶಕ ಉಪಯೋಗಿಸುತ್ತಾರೆ.

ಈ ಮೇಲೆ ಕಾಣಿಸಿದ ಅಂಕಿ-ಅಂಶಗಳಿಂದ ಕಂಡುಬರುವುದೇನೆಂದರೆ ಗರಿಷ್ಠ ಸಂಖ್ಯೆಯ ೨೧೭ ಮಾಹಿತಿಗಾರರಲ್ಲಿ ಪ್ರತಿಶತ ೭೨ ರಷ್ಟು ಜನರು ಯಾವುದಾದರೊಂದು ನೂತನ ಕೃಷಿ ಪದ್ಧತಿಯನ್ನು ಅಳವಡಿಸಿರುವರು. ಮತ್ತೊಂದು ಅಂಶವೆಂದರೆ ಕಾಲು ಭಾಗ ಮಾಹಿತಿದಾರರು ನೂತನ ಕೃಷಿ ತಂತ್ರಜ್ಞಾನದ ಅಳವಡಿಕೆಯಲ್ಲಿ ನಿರಾಸಕ್ತಿ ಅಥವಾ ಹೊಸ ಕೃಷಿ ಪದ್ಧತಿಯ ಬಗ್ಗೆ ಇಷ್ಟಪಡಲಿಲ್ಲ ಅಥವಾ ಅವರಿಗೆ ಅವು ಗೊತ್ತೇ ಇಲ್ಲ ಎಂದು ತಿಳಿಯುತ್ತದೆ.

ಒಂದು ಮಹತ್ವದ ಸಂಗತಿ ಎಂದರೆ ಕುಣಬಿಯರ ಪ್ರತಿಯೊಂದು ಹಳ್ಳಿಯಲ್ಲಿಯೂ ಕುಡಿಯುವ ನೀರು ಹಾಗೂ ಕೃಷಿಗಾಗಿ ನೀರು ಪೂರೈಕೆಯ ಗಂಭೀರ ಸಮಸ್ಯೆ ಇದ್ದೇ ಇದೆ. ಹೀಗಾಗಿ ಕೃಷಿಯಾಧಾರಿತ ಚಟುವಟಿಕೆಗಳೆಲ್ಲ ಮಳೆಯನ್ನು ಅವಲಂಬಿಸಿದೆ. ಕೆಲವರು ಭಾವಿ ನೀರನ್ನು ನಂಬಿಕೊಂಡರೆ, ಇನ್ನಿತರರು ಸಮೀಪದ ನದಿ, ಹಳ್ಳ, ಕೆರೆ-ಕಟ್ಟೆಗಳ ನೀರು ಪೂರೈಕೆಯನ್ನು ಅವಲಂಬಿಸುತ್ತಾರೆ, ಹೀಗಾಗಿ ಕೃಷಿ ಚಟುವಟಿಕೆಗಳ ಆದಾಯ ಅನಿಶ್ಚಿತತೆಯ ಸುಳಿಯಲ್ಲಿರುತ್ತದೆ.

ದಿನನಿತ್ಯ ಕುಡಿಯುವ ನೀರಿಗಾಗಿ ನದಿ ಅಥವಾ ಕೆರೆ, ಹಳ್ಳಗಳನ್ನು ಅವಲಂಬಿಸಿದ ಕೆಲವರು ಜಲಮಾಲಿನ್ಯದಿಂದ ಅನೇಕ ರೋಗರುಜಿನಗಳಿಗೆ ತುತ್ತಾಗುತ್ತಾರೆ. ಅದಲ್ಲದೆ ಬೇಸಿಗೆಯಲ್ಲಿ ಬಹುತೇಕ ನದಿ, ಹಳ್ಳ, ಕೆರೆಗಳು ಬತ್ತುವುದರಿಂದ ದಿನನಿತ್ಯದ ಅವಶ್ಯಕತೆಗಳಿಗೂ ನೀರು ದೊರಕುವುದಿಲ್ಲ.

ಸಿ.ಬಿ. ದಾಮ್ಲೆರವರ ಅಭಿಪ್ರಾಯದಂತೆ 'ಮಳೆಯ ಅತಿ ಅವಲಂಬನೆ ಹಾಗೂ ಸಾಂಪ್ರದಾಯಿಕ ಕೃಷಿ ಉಪಕರಣಗಳ ಬಳಕೆಯೇ ಕೃಷಿ-ಆದಾಯ ಕುಂಠಿತಗೊಳ್ಳಲು ಕಾರಣವಾಗಿದೆ'. ಈ ಸಮುದಾಯದವರು ಆಧುನಿಕ ಪದ್ಧತಿಯಂತೆ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ ಮತ್ತು ಸಂಸ್ಕರಣಗೊಂಡ ಬೀಜಗಳನ್ನು ಉಪಯೋಗಿಸುತ್ತಿರುವುದು ಈ ಅಧ್ಯಯನದ ಮುಖಾಂತರ ಕಂಡುಬಂದಿದೆ.

**ಕುಣಬಿ ಸಮುದಾಯದ ಪಶು ಸಂಪತ್ತು**

ಕುಣಬಿ ಸಮುದಾಯದ ಪ್ರಧಾನ ಕಸಬು ವ್ಯವಸಾಯ, ಅದರ ಜೊತೆ ಉಪಕಸುಬಾಗಿ ಪಶುಪಾಲನೆಯನ್ನು ಅವಲಂಬಿಸಿದ್ದಾರೆ. ಇನ್ನೊಂದು ಸಂಗತಿಯೆಂದರೆ ಶಾಶ್ವತ ಕೃಷಿ ಹಾಗೂ ಪಶುಪರಿಪಾಲನೆ ಚಟುವಟಿಕೆಗಳಿಗೆ ನೇರ ಸಂಬಂಧವಿದೆ. ದನಕರಗಳನ್ನು ಬೆಳೆಸುವದು ಕುಣಬಿ ಸಮುದಾಯದ ಆರ್ಥಿಕ ವ್ಯವಸ್ಥೆಯ ಭಾಗವಾಗಿದೆ, ಅಧ್ಯಯನ ಕೈಗೊಂಡ ಪ್ರತಿಯೊಂದು ಮನೆಯಲ್ಲಿಯೂ ಎತ್ತು, ಆಕಳು, ಎಮ್ಮೆ, ಕೋಣ ಮತ್ತು ಕರುಗಳನ್ನು ಹೊಂದಿದ್ದು, ಅದರಲ್ಲೂ

ಆಕಳುಗಳು ಇರುವುದರಿಂದ ಸಮೃದ್ಧ ಹಾಲು ಮತ್ತು ಉತ್ತಮ ಸಾವಯವ ಗೊಬ್ಬರ ದೊರೆಯುತ್ತದೆ. ಕುಣಬಿ ಸಮುದಾಯದಲ್ಲಿ ಉತ್ತಮ ಕೋಣಗಳ ತಳಿ ಅಭಿವೃದ್ಧಿಪಡಿಸುವುದು ಒಳ್ಳೆಯ ಹವ್ಯಾಸವಾಗಿದೆ.

**ಕೋಷ್ಟಕ-೪.೩**
**ಕುಣಬಿ ಸಮುದಾಯದ ಪಶು ಸಂಪತ್ತಿನ ವಿವರ**

| ಕ್ರಸಂ. | ಪಶುವಿವರ | ಸಂಖ್ಯೆ |
|---|---|---|
| ೧ | ಎತ್ತು | ೩೬೭ |
| ೨ | ಆಕಳು | ೩೭೯ |
| ೩ | ಎಮ್ಮೆ | ೩೦೧ |
| ೪ | ಕೋಣ | ೩೦೪ |
| ೫ | ಕರು | ೫೩೯ |
| | ಒಟ್ಟಾರೆ | ೧೮೯೦ |

ಈ ಮೇಲೆ ಕಾಣಿಸಿದ ಅಂಕಿ-ಅಂಶಗಳು ತೋರುವಂತೆ, ಅಧ್ಯಯನ ಕೈಗೊಂಡ ೧೦೦೦ ಕುಟುಂಬದಲ್ಲಿ ಎತ್ತು, ಆಕಳು, ಎಮ್ಮೆ, ಕೋಣ ಮತ್ತು ಕರುಗಳನ್ನು ಹೊಂದಿದ್ದು, ಅವುಗಳ ಸಂಖ್ಯೆ ೩೬೭, ೩೭೯, ೩೦೧, ೩೦೪ ಮತ್ತು ೫೩೯ ಅನುಕ್ರಮವಾಗಿ ಇದೆ. ಈ ಮೇಲಿನ ಕೋಷ್ಟಕದಿಂದ ತಿಳಿದುಬರುವ ವಿಷಯವೆಂದರೆ ಕುಣಬಿ ಸಮುದಾಯ ಭೂಮಿಯ ಉಳಮೆ ಮಾಡಲು ಎತ್ತುಗಳ ಜೊತೆ ಎಮ್ಮೆ ಮತ್ತು ಕೋಣಗಳನ್ನು ಉಪಯೋಗ ಮಾಡುತ್ತಿದ್ದು, ಅವುಗಳ ಸಂಖ್ಯೆ ಹೆಚ್ಚಿದೆ. ಹಾಗೆ ಮೇಲ್ಕಾಣಿಸಿದಂತೆ ಆಕಳು ಮತ್ತು ಎಮ್ಮೆಗಳನ್ನು ಹೈನುಗಾರಿಕೆಗೆ ಉಪಯೋಗಿಸುವುದು ಕಂಡುಬಂದಿದೆ. ಬಹಳಷ್ಟು ಜನರಿಗೆ ಪಶು ಪಾಲನೆಗಾಗಿ ಸರಕಾರದ ಸಾಲ ಸೌಲಭ್ಯ ಮತ್ತು ಸಹಾಯ ದನ ದೊರೆಯುವುದೆಂಬ ಸಂಗತಿಯು ಪೂರ್ಣ ಅರಿವೆ ಇರುವುದಿಲ್ಲ, ಅಲ್ಲದೆ ಉತ್ತಮ ಮಿಶ್ರತಳಿ ಹಸುಗಳನ್ನು ಸಾಕಬಹುದೆಂಬ ಪ್ರಜ್ಞೆಯೂ ಅವರಲ್ಲಿಲ್ಲ. ಅಲ್ಲದೆ ಅರಣ್ಯ ನಾಶ, ಕನಿಷ್ಠ ಮಟ್ಟದ ಬೇಸಾಯ ಭೂಮಿ, ಸಾಧಾರಣ ಹುಲ್ಲುಗಾವಲು ಹಾಗೂ ಭೂರಾಹಿತ್ಯತೆಗಳು ಅವರ ಪಶು ಸಂಗೋಪನೆಗೆ ಬಾಧಕತೆ ತಂದಿವೆ.

**ಕೃಷಿ ಕೂಲಿ**

ಆರ್ಥಿಕ ಚಟುವಟಿಕೆಗಳು ವ್ಯಕ್ತಿಯ ಅಥವಾ ಸಮುದಾಯದ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುತ್ತವೆ. ಕೂಲಿ ಎಂದರೆ ಬೇರೆಯವರ ಜಮೀನಿನಲ್ಲಿ ಗೊತ್ತುಪಡಿಸಿದ ಕೆಲಸಕ್ಕಾಗಿ ಸಂಬಳದ ರೂಪದಲ್ಲಿ ಹಣ ಇಲ್ಲವೆ ಧಾನ್ಯಗಳನ್ನು ಪರ್ಯಾಯವಾಗಿ ಪಡೆಯುವುದು. ಕೊಪ್ಪಗಳಲ್ಲಿ ಹೆಚ್ಚಾಗಿ ಪುರುಷರಷ್ಟೇ ಮಹಿಳೆಯರು ಕೃಷಿ ಕೂಲಿ ಮಾಡಲು ಹೋಗುವುದು ಕಂಡುಬಂದಿತು. ಕುಣಬಿ ಮಹಿಳೆಗೆ ಕೃಷಿ ಕೂಲಿ ಮಹತ್ವವಾದ ಆರ್ಥಿಕ ಚಟುವಟಿಕೆಯಾಗಿದೆ, ಶ್ರಮಕ್ಕೆ ಪ್ರತಿಫಲವಾಗಿ ಇವರು

ಪಡೆಯುವ ಕೂಲಿಯು ಅವರ ಆರ್ಥಿಕ ಸ್ಥಿತಿಗತಿಯ ಜೊತೆಗೆ ಇವರ ಸಾಮಾಜಿಕ ಜೀವನ ವಿಧಾನವನ್ನು ಸಹ ತೋರಿಸುತ್ತದೆ. ಕೂಲಿ ಮಾಡಲು ಮೇಲ್ಜಾತಿಯ ಹಾಗೂ ತಮ್ಮ ಸುತ್ತಮುತ್ತಲಿನ ಕೃಷಿಕರ ಜಮೀನುಗಳಿಗೆ, ತೋಟಗಳಿಗೆ ಹೋಗುತ್ತಾರೆ. ಕೃಷಿ ಕೂಲಿಯನ್ನು ಸಾಮಾನ್ಯವಾಗಿ ಮಳೆಗಾಲ ಕಳೆದು ಚಳಿಗಾಲ ಪ್ರಾರಂಭವಾಗುತ್ತಿದ್ದಂತೆಯೇ ಹಾಗೂ ನಾಟಿ ಮಾಡುವಾಗ ಮಾಡುತ್ತಾರೆ.

ಬಹಳಷ್ಟು ಕುಣಬಿ ಮಹಿಳೆಯರಿಗೆ ಉತ್ಪಾದನಾ ಮಾರ್ಗವಾಗಿ ಕುಟುಂಬದ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ಮಾರ್ಗಗಳಲ್ಲಿ ಕೃಷಿ ಕೂಲಿ ಮುಖ್ಯವಾಗಿದೆ. ಕೂಲಿಯನ್ನು ಬೆಳಿಗ್ಗೆಯಿಂದ ಸಂಜೆಯವರೆಗೆ ನಿಗದಿಪಡಿಸಲಾಗಿದ್ದರು, ದಿನದ ಕೂಲಿ ಮಾಡುವವರಿಗೆ ಸಾಮಾನ್ಯವಾಗಿ ದಿನವಿಡೀ ದುಡಿದರು ೫೦-೬೦ ರೂಪಾಯಿ ಕೂಲಿ ಹಣ ಅಥವಾ ನಾಲ್ಕು ಕೊಳಗ ಭತ್ತ ನೀಡಲಾಗುತ್ತದೆ. ಯಲ್ಲಾಪುರ, ಅಂಕೋಲಾ, ಜೋಯಿಡಾ ತಾಲೂಕು ಕಡೆ ಕುಣಬಿಗಳಿಗೆ ಇಂದಿಗೂ ಕೊಳಗದ ಲೆಕ್ಕದಲ್ಲಿ ಭತ್ತ ನೀಡಲಾಗುತ್ತದೆ. ಕ್ಷೇತ್ರಕಾರ್ಯ ಮಾಡುವ ಸಮಯದಲ್ಲಿ ನೀವು ಯಾಕೆ ಇಷ್ಟು ಕಡಿಮೆ ಕೂಲಿ ಹಣ ಪಡೆಯುತ್ತೀರಿ? ಹೆಚ್ಚಿಗೆ ಹಣ ಕೇಳುವುದಿಲ್ಲ ಏಕೆ? ಇಷ್ಟೇ ಭತ್ತ ಹೇಗೆ ತಾನೇ ಸಾಕಾಗುತ್ತದೆ? ಎಂದು ಪ್ರಶ್ನೆಯನ್ನು ಕೇಳಿದರೆ, ನಾವೇನಾದರೂ ಹೆಚ್ಚಿಗೆ ಕೂಲಿ ಹಣ, ಒಳ್ಳೆಯ ಅಕ್ಕಿ, ಹೆಚ್ಚಿಗೆ ಭತ್ತ ಕೊಡಿ ಎಂಬುದಾಗಿ ಕೇಳಿದರೆ ನಾಳೆಯಿಂದ ಕೆಲಸಕ್ಕೆ ಬರಬೇಡಿ ಅಂತ ಕೆಲಸದಿಂದ ತೆಗೆಯುತ್ತಾರೆ. ಈ ಕೂಲಿ ಕೆಲಸ ಮಾಡಿದರೆ ನಮಗೆ ಸಂಜೆ ಊಟ ಸಿಗುವುದು, ಕಾರಣ ಕೊಟ್ಟಷ್ಟನ್ನು ಪಡೆದು ಎದುರು ಮಾತನಾಡದೆ ದುಡಿಯುತ್ತೇವೆ ಎಂದುತ್ತರಿಸಿದರು. ಕುಣಬಿ ಸಮುದಾಯದವರು ಹವ್ಯಕ ಬ್ರಾಹ್ಮಣ, ಕೊಂಕಣಿ, ನಾಡವ, ಶೆಟ್ಟಿ, ಜಾತಿಯ ಗದ್ದೆ, ತೋಟಗಳಲ್ಲಿ ಕೂಲಿ ಮಾಡಲು ಹೋಗುತ್ತಾರೆ. ಸರಕಾರದ ಉದ್ಯೋಗ ಖಾತ್ರಿ ಯೋಚನೆಯ ಮಾಹಿತಿ ಇವರಿಗಿಲ್ಲ.

ವಾರದ ೭ ದಿನಗಳು ಇವರು ಕೂಲಿ ಮಾಡುತ್ತಾರೆ. ಮನೆಯಲ್ಲಿ 'ಒಂದು ದಿನ ವಿಶ್ರಾಂತಿ ತೆಗೆದುಕೊಂಡರೆ ಸಂಜೆ ಊಟದ ಗತಿ ಏನು?' ಎಂದು ವಿಶ್ರಾಂತಿ ಇಲ್ಲದೆ ಕುಣಬಿ ಸಮುದಾಯದ ಜನ ದುಡಿಯುತ್ತಾರೆ ಹಾಗೆ ಪುರುಷರಿಗೆ ಹೋಲಿಸಿದರೆ ಅವರಿಗಿಂತ ಚೆನ್ನಾಗಿ, ಹೆಚ್ಚಾಗಿ ಕೆಲಸ ಮಾಡುವ ಮಹಿಳೆಯರಿಗೆ ಕೂಲಿ ನೀಡುವಾಗ ತಾರತಮ್ಯ ಎಲ್ಲೆಡೆ ಇರುವಂತೆ ಕುಣಬಿ ಮಹಿಳೆಯರಿಗೂ ಮಾಡಲಾಗುತ್ತದೆ.

ಪುರುಷರಿಗೆ ೫೦ ರೂಪಾಯಿ, ಮಹಿಳೆಯರಿಗೆ ೩೦-೩೫ ರೂಪಾಯಿ ನೀಡುವರು. ಇಬ್ಬರೂ ಸಮಾನ ಕೆಲಸ ಮಾಡಿದರೂ ಕೂಲಿ ಹಣದಲ್ಲಿ ತಾರತಮ್ಯ ಮಾಡಲಾಗುತ್ತದೆ. ವಾರದ ಕೂಲಿಯನ್ನು ಪುರುಷರಿಗೆ ೩೦೦-೩೫೦ ರೂಪಾಯಿ ಇದ್ದರೆ, ಮಹಿಳೆಯರಿಗೆ ೨೫೦-೩೦೦ ರೂಪಾಯಿ ಮಾತ್ರ, ಕೃಷಿ ಕೂಲಿ ಹೆಚ್ಚಾಗಿ ಮಳೆಗಾಲದಲ್ಲಿಯೇ ದೊರೆಯುವುದು. ಕೃಷಿ ಕೂಲಿ

ಋತುಮಾನಗಳಿಗೆ ಅನುಸರಿಸಿರುತ್ತದೆ, ಸುಮಾರು ೩-೪ ತಿಂಗಳು ಕೃಷಿ ಕೂಲಿ ಇವರಿಗೆ ದೊರೆಯುತ್ತದೆ. ಕೃಷಿಗೆ ಸಂಬಂಧಿಸಿದ ಕೂಲಿಯನ್ನು ಮಹಿಳೆಯರು ನಾಟಿ ಸಮಯದಿಂದ ಹಿಡಿದು ಬೆಳೆಯ ಕೊಯ್ಲು ಬರುವವರೆಗೂ ಮಾಡುತ್ತಾರೆ.

ಪ್ರಸ್ತುತ ಕ್ಷೇತ್ರಕಾರ್ಯ ಮಾಡಿದ ಗ್ರಾಮಗಳಲ್ಲಿ ಸಾಮಾನ್ಯವಾಗಿ ಕೃಷಿ ಕೂಲಿ ಮಾಡುವವರು ಮಹಿಳೆಯರೇ ಹೆಚ್ಚಾಗಿದ್ದಾರೆ. ಈ ಕೆಳಗಿನ ಕೋಷ್ಟಕದಲ್ಲಿ ಕುಣಬಿ ಸಮುದಾಯದ ಕಸಬುಗಳ ಅಂಕಿ-ಸಂಖ್ಯೆಗಳನ್ನು ವಿವರಿಸಲಾಗಿದೆ.

**ಕೋಷ್ಟಕ-೪.೪**

**ಕುಣಬಿ ಸಮುದಾಯವರು ಕೆಲಸದಲ್ಲಿ (ಕಸಬು) ತೊಡಗಿಕೊಂಡಿರುವ ಲಿಂಗವಾರು ಪ್ರಮಾಣ**

| ಕ್ರಸಂ. | ಉದ್ಯೋಗ | ಗಂಡು | ಪ್ರತಿಶತ | ಹೆಣ್ಣು | ಪ್ರತಿಶತ | ಒಟ್ಟು | ಪ್ರತಿಶತ |
|---|---|---|---|---|---|---|---|
| ೧ | ಕೃಷಿಕರು | ೬೯೦ | ೨೮ | ೨೮ | ೨ | ೭೧೮ | ೧೭ |
| ೨ | ಕೃಷಿ ಕಾರ್ಮಿಕರು | ೬೫೩ | ೨೭ | ೬೩೯ | ೩೭ | ೧೨೯೨ | ೩೧ |
| ೩ | ದಿನಗೂಲಿ | ೮೦೧ | ೩೩ | ೩೯೭ | ೨೩ | ೧೧೯೮ | ೨೯ |
| ೪ | ವ್ಯಾಪಾರಸ್ಥರು | ೩೭ | ೦೧ | ೨೦೧ | ೧೨ | ೨೩೮ | ೬ |
| ೫ | ಮನೆಗೆಲಸ | ೫೪ | ೨ | ೩೪೭ | ೨೦ | ೪೦೧ | ೧೦ |
| ೬ | ಸರಕಾರಿ ನೌಕರರು | ೧೨ | ೧ | ೦ | ೦ | ೧೨ | ೦೧ |
| ೭ | ಇತರೇ ಉದ್ಯೋಗಿಗಳು | ೧೭೪ | ೮ | ೧೧೩ | ೬ | ೨೮೭ | ೦೬ |
| | ಒಟ್ಟಾರೆ | ೨೪೨೧ | ೧೦೦ | ೧೭೨೫ | ೧೦೦ | ೪೧೪೬ | ೧೦೦ |




ಕುಣಬಿ ಸಮುದಾಯದ ಆರ್ಥಿಕ ಸ್ವಾವಲಂಬಿ ಜೀವನವನ್ನು ಇನ್ನೂ ಕೂಲಂಕುಶವಾಗಿ ಪರಿಶೀಲಿಸಲಾಗಿ ಬಹುತೇಕ ಕುಣಬಿಗಳು ಒಂದಲ್ಲಾ ಒಂದು ಕಸಬುಗಳನ್ನು ಮಾಡುತ್ತಿರುವರು. ಆ ಅಂಕಿ-ಅಂಶಗಳು ಹೇಳುವಂತೆ ಕೃಷಿ ಚಟುವಟಿಕೆಗಳಲ್ಲಿ ಪ್ರತಿಶತ ೨೮ ರಷ್ಟು ಪುರುಷರು ತೊಡಗಿದ್ದರೆ, ಕೇವಲ ಪ್ರತಿಶತ ೨ ರಷ್ಟು ಮಹಿಳೆಯರು ಮಾತ್ರ ಕೃಷಿ ಚಟುವಟಿಕೆಗಳಲ್ಲಿ

ಪಾಲ್ಗೊಂಡಿದ್ದಾರೆ, ಆದರೆ ಮಹಿಳೆಯರು ೬೫೫ (ಪ್ರತಿಶತ ೩೭ ರಷ್ಟು) ರಷ್ಟು, ಪುರುಷರ ಸಂಖ್ಯೆ ೬೫೩ (ಪ್ರತಿಶತ ೨೭ ರಷ್ಟು). ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕೃಷಿಯೇತರ ಚಟುವಟಿಕೆಯಲ್ಲಿ ಪಾಲ್ಗೊಂಡಿರುವುದು ಕಂಡುಬಂದಿತು. ನಾನು ಮಾಡಿರುವ ೧೦೦೦ ಕುಟುಂಬಗಳ 'Household Survey'ಯಲ್ಲಿ ಒಟ್ಟು ಜನಸಂಖ್ಯೆಯಲ್ಲಿ ೧೨೯೨ ಜನ ಕುಣಬಿಗಳು ಕೃಷಿ ಕೂಲಿಗೆ ತೊಡಗಿದ್ದಾರೆ, ಈ ೧೨೯೨ಜನರಲ್ಲಿ ೬೫೫ ಮಹಿಳೆಯರು (ಪ್ರತಿಶತ ೩೭ ರಷ್ಟು) ಮತ್ತು ೬೫೩ ಪುರುಷರು (ಪ್ರತಿಶತ ೨೭ ರಷ್ಟು). ಪುರುಷರು ಕೃಷಿ ಕೂಲಿಯಲ್ಲಿ ತೊಡಗಿದ್ದಾರೆ. ಮೇಲ್ಕಂಡ ಕೋಷ್ಟಕದಲ್ಲಿ ಸುಮಾರು ೮೦೧ ಪುರುಷರು (ಪ್ರತಿಶತ ೩೩ ರಷ್ಟು) ದಿನಕೂಲಿಗಳಾಗಿದ್ದಾರೆ, ೩೯೭ ಜನ ಮಹಿಳೆಯರು (ಪ್ರತಿಶತ ೨೩ ರಷ್ಟು) ದಿನಗೂಲಿ ನೌಕರರಿದ್ದಾರೆ. ಹೀಗೆ ಕೂಲಿ ಮಾಡಲು ಕೊಪ್ಪದಿಂದ ಹೊರಗೆ ಪಟ್ಟಣಗಳಿಗೆ ಅಥವಾ ನಗರಗಳಿಗೆ ಹೋಗುವುದು ಹೆಚ್ಚಾಗಿ ಪುರುಷರು ಈ ಕಾರಣದಿಂದ ಕೃಷಿಯೇತರ ದಿನಗೂಲಿಗಳಲ್ಲಿ ಪುರುಷರಿಗಿಂತ ಹೆಣ್ಣು ಮಕ್ಕಳು ತೊಡಗಿಕೊಂಡಿರುವುದು ಕಡಿಮೆ. ಆದರೂ ಗಾರೆ ಕೆಲಸ, ಗಣಿಗಾಯಿಕೆಯಂತಹ ದಿನಗೂಲಿಗಳಲ್ಲಿ ಮಹಿಳೆಯರು ತೊಡಗಿರುವುದು ಗಮನಾರ್ಹ ಸಂಗತಿಯಾಗಿದೆ, ಆದರೆ ಇಲ್ಲಿಯೂ ಮಹಿಳೆಯರಿಗೆ ದೊರೆಯುವ ದಿನಗೂಲಿಯಲ್ಲಿ ತಾರತಮ್ಯ ಇದ್ದೇ ಇದೆ.

ಈ ಸಮುದಾಯದಲ್ಲಿ ಕೃಷಿ ಕಾರ್ಮಿಕರು ಮತ್ತು ದಿನಗೂಲಿ ಕೆಲಸಗಾರರು ಅಧಿಕವಾಗಿ ಇರುವದು ಕಂಡುಬರುತ್ತದೆ. ಇದಕ್ಕೆ ಭೂಮಿ ಇಲ್ಲದೇ ಇರುವುದು ಮುಖ್ಯ ಕಾರಣವಾಗಿದೆ. ಮಾಹಿತಿ ಪ್ರಕಾರ ಈ ಸಮುದಾಯದಲ್ಲಿ ಸರಕಾರಿ ಉದ್ಯೋಗಿಗಳು ಇಲ್ಲದೆ ಇರುವುದು ಕಂಡು ಬಂದಿದೆ. ಇದಕ್ಕೆ ಮುಖ್ಯ ಕಾರಣವೇನೆಂದರೆ ಬಡತನ ಮತ್ತು ಅನಕ್ಷರತೆ.

**ವ್ಯಾಪಾರ**

ಕುಣಬಿ ಮಹಿಳೆಯರ ಇನ್ನೊಂದು ಮುಖ್ಯ ಉದ್ಯೋಗ ತರಕಾರಿ, ಹೂವು, ಅರಣ್ಯೋತ್ಪನ್ನ ಸಂಗ್ರಹ ಮಾಡಿ ಮಾರುವದು ಮತ್ತು ಕಟ್ಟಿಗೆ ವ್ಯಾಪಾರ. ಕುಣಬಿ ಸಮುದಾಯಗಳಿಗೆ ಪೂರ್ವಜರಿಂದ ಬಂದ ಜಮೀನು ಅಂತ ಏನೂ ಇಲ್ಲ. ದೇವರಾಜ ಅರಸು ಅವರ ಅವಧಿಯಲ್ಲಿ ಬಂದ 'ಉಳುವವನೇ ಭೂ ಒಡೆಯ' ಎಂಬ ಈ ಕಾನೂನು ಇವರಿಗೆ ಸ್ವಲ್ಪ ಜಮೀನು ದೊರೆಯುವಂತೆ ಮಾಡಿತು. ಕ್ಷೇತ್ರಕಾರ್ಯಕ್ಕೆ ಒಳಪಟ್ಟ ಒಟ್ಟು ಕುಣಬಿ ಜನಸಂಖ್ಯೆಯಲ್ಲಿ ೨೩೨ ಜನ ವ್ಯಾಪಾರ ಮಾಡುವುದು ಕಂಡುಬಂದಿತು. ಅದರಲ್ಲಿ ೧೯೫ ಜನ ಮಹಿಳೆಯರು ಮತ್ತು ೩೭ ಜನ ಪುರುಷರು. ತರಕಾರಿ, ಹೂವು, ಅರಣ್ಯೋತ್ಪನ್ನ ಸಂಗ್ರಹ ಮತ್ತು ಕಟ್ಟಿಗೆ ವ್ಯಾಪಾರ ಮಾಡುತ್ತಿದ್ದಾರೆ. ಈ ಹಿಂದೆಯೂ ಹೋದಂತೆ ಕುಣಬಿಗಳಿಗೆ ಇರುವ ಸ್ವಲ್ಪ ಭೂಮಿಯಲ್ಲಿ ಪುರುಷ ವ್ಯವಸಾಯ ಮಾಡಲು ಸಾಧ್ಯವಿಲ್ಲ, ತರಕಾರಿ ಬೆಳೆಯಂತಹ ಲಘು ಕೃಷಿ

ಈ ಚಿಕ್ಕ ಕೃಷಿ ಜಮೀನಿನಲ್ಲಿ ಸಾಧ್ಯ. ಇದನ್ನು ನಿರ್ವಹಿಸುವವಳು ಕುಣಬಿ ಮಹಿಳೆ, ಈ ವ್ಯಾಪಾರಗಳಿಂದ ದೊರಕುವ ಎಲ್ಲ ಹಣವನ್ನು ಕುಣಬಿ ಮಹಿಳೆ ಕುಟುಂಬದ ದಿನನಿ ಖರ್ಚುಗಳಿಗೆ ವಿನಿಯೋಗಿಸುತ್ತಾಳೆ. ಬಹುಪಾಲು ಕುಣಬಿ ಕುಟುಂಬಗಳು ಅವರ ಹೆಣ್ಣುಗಳ ದುಡಿಮೆಯಲ್ಲಿ ಬದುಕುತ್ತಿರುವದನ್ನು ಕಾಣಬಹುದು.

**ಮನೆಗೆಲಸ**

ಇಂದು ಮಹಿಳೆಯರು ಎಲ್ಲಾ ರಂಗಗಳಲ್ಲೂ ತಮ್ಮ ಛಾಪನ್ನು ಮೂಡಿಸುತ್ತಿದ್ದಾರೆ. ಸಾಮಾಜಿಕ ರಂಗದ ಉತ್ಪಾದನೆ ಮೂಲಕ ಅಥವಾ ಮನೆಯೊಳಗಿನ ಉತ್ಪಾದನಾ ಚಟುವಟಿಕೆಯ ಮೂಲಕ ಮಹಿಳೆಯರು ಆರ್ಥಿಕತೆಗೆ ಸಲ್ಲಿಸುವ ಕೊಡುಗೆಗೆ ನೀಡಲಾಗುವ ಬೆಲೆ ಅತ್ಯಲ್ಪ ಅಥವಾ ಸೊನ್ನೆಯಾಗಿದೆ'.

ಮಹಿಳೆ ಇಂದು ಇಬ್ಬಗೆಯ ದುಡಿಮೆಯನ್ನು ಮಾಡುವುದು ಎಲ್ಲಡೆ ಕಾಣಬಹುದು, ಹಾಗೆಯೇ ಮನೆಯಲ್ಲಿ ದುಡಿಯುವ ದುಡಿಮೆ ಮೌಲ್ಯವೆಂಬುದು ಇಲ್ಲ. ಅದೇ ಮನೆಯ ಆಚೆ ದುಡಿಯುವ ದುಡಿಮೆಗೆ ಮೌಲ್ಯವಿದೆ. ಮನೆಕೆಲಸ ಮನೆಯಲ್ಲಿ ಮಾಡಿದರೆ ಅದು ಕರ್ತವ್ಯ, ಜವಾಬ್ದಾರಿಯೆಂದು ಪರಿಗಣಿಸಿದರೆ ಇದೇ ಮನೆಕೆಲಸ ಮಾಡಲು ಬೇರೆಯವರ ಮನೆ, ತೋಟ, ಗದ್ದೆಗಳಿಗೆ ಹೋಗುವ ಮಹಿಳೆಯು ತಿಂಗಳಿಗೆ ಇಂತಿಷ್ಟು ಅಂತ ಕೂಲಿ ಪಡೆದು ದುಡಿಯುತ್ತಾಳೆ. ಈ ಇಬ್ಬಗೆಯ ದುಡಿಮೆಯಲ್ಲಿಯೂ ಮಹಿಳೆಯನ್ನು ತತ್ಸಾರದಿಂದ ನೋಡಲಾಗುತ್ತದೆ. ಇದರಿಂದ ಕುಣಬಿ ಮಹಿಳೆಯರು ಕೂಡ ಹೊರತಾಗಿಲ್ಲ. ಇಲ್ಲಿ ನಾನು ಮನೆಯಲ್ಲಿ ಕೆಲಸ ಮಾಡುವ ಕುಣಬಿ ಮಹಿಳೆಯರ ಕೆಲಸವನ್ನು ಸಹ ದುಡಿಮೆಯೆಂದು ಹಾಗೆಯೇ ಮನೆ ಆಚೆ ಹೋಗಿ ತಿಂಗಳ ಬಿಡಿಗಾಸಿನ ಸಂಬಳಕ್ಕೆ ಮನೆಕೆಲಸ ಮಾಡುವ ದುಡಿಮೆಗಳೆರಡನ್ನು ಮೌಲ್ಯರೂಪ ದುಡಿಮೆಯೆಂದು ಪರಿಗಣಿಸಲು ಇಚ್ಚಿಸುತ್ತೇನೆ.

**ಸರಕಾರಿ ಕೆಲಸ:** ಇಂದು ಸರಕಾರಿ ನೌಕರಿ ಎಂಬುದು ಬಹುಶಃ ಅಂಚಿನಲ್ಲಿರುವ ಎಲ್ಲಾ ಸಮುದಾಯಗಳಿಗೂ ಕನಸಿನ ಮಾತಾಗಿದೆ. ಸರಕಾರಿ ಉದ್ಯೋಗ ಬೇಕೆಂದರೆ ಕೆಲವೊಂದು ಮಾನದಂಡಗಳಿವೆ. ಶಿಕ್ಷಣ, ನೈಪುಣ್ಯತೆ, ತರಬೇತಿ ಮುಂತಾದವುಗಳನ್ನು ಹೊಂದಿದವರಿಗೆ ಪ್ರಥಮ ಆದ್ಯತೆ. ಇಂದಿನ ಶಿಕ್ಷಣ ಹಣವಂತನಿಗೆ ಮಾತ್ರ ಎನ್ನಲಾಗಿದೆ. ದಿನವೊಂದಕ್ಕೆ ೪೦-೫೦ ರೂಪಾಯಿ ಕೂಲಿ ಹಣ ದೊರೆಯುವ, ಎರಡೊತ್ತಿನ ಗಂಜಿಗೆ ಪರದಾಡುವ ಸಮುದಾಯಗಳು ಹೇಗೆ ತಾನೇ ಉದ್ಯೋಗ ಪಡೆಯಲು ಸಾಧ್ಯ. ಕುಣಬಿಯರಲ್ಲಿ ಉನ್ನತ ಶಿಕ್ಷಣ ಪಡೆದವರು ಅತ್ಯಂತ ವಿರಳ, ಅಲ್ಪ ಸ್ವಲ್ಪ ಶಿಕ್ಷಣ ಪಡೆದವರಿಗೆ ಸರಕಾರಿ ನೌಕರಿ ಸಿಗುವುದು ಕಷ್ಟ. ಬಡತನದ ಕಾರಣಕ್ಕಾಗಿ ಕುಣಬಿ ಸಮುದಾಯದವರು ಶಿಕ್ಷಣ ಪಡೆದಿರುವವರ ಸಂಖ್ಯೆ ಕಡಿಮೆ ಹಾಗೂ

ಇತರೆ ಹಿಂದುಳಿದ ಜಾತಿಗಳ ಪಟ್ಟಿಯಲ್ಲಿರುವುದರಿಂದ ಕರ್ನಾಟಕದ ಪ್ರಭಾವಿ ಹಿಂದುಳಿದ ಸಮುದಾಯಗಳ ಜೊತೆ ಸ್ಪರ್ಧಿಸಬೇಕಿದೆ. ರಾಜಕೀಯ ಬಲವಿಲ್ಲದ ಕಾರಣ ಕರ್ನಾಟಕ ಪ್ರಭಾವಿ ಹಿಂದುಳಿದ ಜಾತಿಗಳ ಜೊತೆ ಕುಣಬಿಗಳು ಸ್ಪರ್ಧಿಸುವುದು ಕಷ್ಟಸಾಧ್ಯ. ಆದಿವಾಸಿಗಳ ಎಲ್ಲ ಲಕ್ಷಣಗಳಿದ್ದಾಗ್ಯೂ ಕುಣಬಿಗಳು ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಸ್ಥಾನ ಪಡೆದಿಲ್ಲ. ಕುಣಬಿಗಳಲ್ಲಿ ಪ್ರೌಢ ಮತ್ತು ಪದವಿಪೂರ್ವ ಹಂತದ ವರೆಗೆ ಶಿಕ್ಷಣ ಪಡೆದವರೇ ಹೆಚ್ಚು. ಇದರಲ್ಲಿ ಕೆಲವರು ಸರಕಾರಿ ಕಛೇರಿಗಳಲ್ಲಿ ಸಣ್ಣ ಪುಟ್ಟ ಕೆಲಸ ಪಡೆದುಕೊಂಡಿದ್ದಾರೆ.

ಕೋಷ್ಟಕ–೪.೫ ರಲ್ಲಿ ಅಂಕಿ–ಅಂಶಗಳು ತೋರಿಸುವಂತೆ ಕುಣಬಿಗಳಲ್ಲಿ ಸರಕಾರಿ ನೌಕರಿ ಪಡೆದವರಲ್ಲಿ ಪುರುಷರೇ ಇದ್ದಾರೆ. ನಾನು ಸರ್ವೆ ಮಾಡಿದ ೧೦೦೦ ಕುಟುಂಬಗಳ ೫೮೯೦ ಜನಸಂಖ್ಯೆಯಲ್ಲಿ ಸರಕಾರಿ ನೌಕರಿಯಲ್ಲಿರುವವರು ಕೇವಲ ೧೨ ಜನ ಪುರುಷರು ಮಾತ್ರ, ಅದರಲ್ಲಿ ಮಹಿಳೆ ಯಾರೊಬ್ಬರೂ ಸರಕಾರಿ ನೌಕರಿಯನ್ನು ಹೊಂದಿಲ್ಲ. ೧೨ ಜನ ಪುರುಷರಲ್ಲಿ ಒಬ್ಬ ಪ್ರಾಥಮಿಕ ಶಾಲಾ ಶಿಕ್ಷಕ, ಇನ್ನೊಬ್ಬ ಪ್ರೌಢ ಶಾಲಾ ಶಿಕ್ಷಕನಾಗಿರುವು ಬಿಟ್ಟರೆ, ಉಳಿದವರೆಲ್ಲ 'ಸಿ' ಮತ್ತು 'ಡಿ' ದರ್ಜೆಯ ನೌಕರರಾಗಿ ಕೆಲಸ ಮಾಡುತ್ತಿರುವರು.

ಉತ್ತರ ಕನ್ನಡದಲ್ಲಿ 'ಅಭಿವೃದ್ಧಿ'ಯ ಹೆಸರಿನಲ್ಲಿ ಅನೇಕ ಯೋಜನೆಗಳು ಜಾರಿಯಾಗಿವೆ, ಕಾಳಿ ಮತ್ತು ಅದರ ಉಪನದಿಗಳ ವಿದ್ಯುತ್ ಯೋಜನೆಗಳು, ಕೈಗಾ ಅಣು ವಿದ್ಯುತ್ ಯೋಜನೆ, ಸೀಬರ್ಡ್ ನೌಕಾ ನೆಲೆ, ಅಣಶಿ ನ್ಯಾಷನಲ್ ಪಾರ್ಕ, ಗಣಿಗಾರಿಕೆ ಇತ್ಯಾದಿ ಕುಣಬಿಗಳ ಚಿಕ್ಕಚಿಕ್ಕ ಕೃಷಿ ಜಮೀನನ್ನು ನುಂಗಿ ಹಾಕಿವೆ. 'ಅಣಶಿ ನ್ಯಾಷನಲ್ ಪಾರ್ಕ' ಎಂದು ಪರಿವರ್ತಿಸಿ ಸರಕಾರ ಆಜ್ಞೆ ಹೊರಡಿಸಿತು. ಆ ವ್ಯಾಪ್ತಿಯ ಅರಣ್ಯದೊಳಗೆ ಇರುವ ಕುಟುಂಬಗಳು ಕೂಡ ಹೊರಗೆ ಬರಬೇಕಾಯಿತು. ಆದರೆ ಈ ಯೋಜನೆಗಳಿಂದ ತೊಂದರೆಗೊಳಗಾದ ಯಾವ ಕುಣಬಿಗಳಿಗೂ ಅನುಕಂಪದ ಆಧಾರದಲ್ಲಿ ಒಂದು ಚಿಕ್ಕ ಕೆಲಸವೂ ದೊರೆತಿಲ್ಲ. ಸರಕಾರಿ ನೌಕರಿ ಸಿಗದಿರುವುದಕ್ಕೆ ಮುಖ್ಯ ಕಾರಣ ಬಡತನದ ಕಾರಣಕ್ಕಾಗಿ ಶಿಕ್ಷಣ ಪಡೆಯದೇ ಇರುವುದು. ಶಿಕ್ಷಣ ಪಡೆದರೂ ಸೂಕ್ತ ಸಾಂವಿಧಾನಿಕ ಮೀಸಲಾತಿ ದೊರೆಯದೇ ಇರುವುದು ಇನ್ನೊಂದು ಮಹತ್ವದ ಕಾರಣವಾಗಿದೆ. ಅದರಲ್ಲೂ ಕುಣಬಿ ಮಹಿಳೆಯರು ಸರಕಾರಿ ನೌಕರಿ ಪಡೆಯುವುದು ಕನಸಿನ ಮಾತಾಗಿದೆ. ಕುಣಬಿ ಮಹಿಳೆಯರಲ್ಲಿ ಶಿಕ್ಷಣ ಪಡೆದವರ ಸಂಖ್ಯೆ ತುಂಬಾ ಕಡಿಮೆ. ಶಿಕ್ಷಣ ಪಡೆದ ಕೆಲವರು ಅಸಂಘಟಿತ ವಲಯಗಳಲ್ಲಿ ಕೆಲಸ ಮಾಡುತ್ತಿದ್ದಾರೆ.

**ಇತರೆ ಉದ್ಯೋಗಿಗಳು:** ಕುಣಬಿಗಳಲ್ಲಿ ಭೂರಹಿತರೇ ಹೆಚ್ಚೆಂದು ಈ ಹಿಂದೆ ನೋಡಿದ್ದೇವೆ. ಇದರಿಂದಾಗಿ ಕೆಲಸ ಹುಡುಕಿಕೊಂಡು ಕುಣಬಿಗಳು ಕೊಪ್ಪಗಳಿಂದ ದೂರದ ಪಟ್ಟಣಗಳಿಗೆ ವಲಸೆ ಹೋಗಿರುವುದು ಕಂಡುಬರುತ್ತದೆ.

ಹೀಗಾಗಿ ಇತರೇ ಉದ್ಯೋಗಿಗಳಾಗಿ ಮಾಡುವ ಕುಣಬಿಗಳಲ್ಲಿ ೧೪೯ ಪುರುಷ ಸಂಖ್ಯೆ ಮತ್ತು ೯೩ ಮಹಿಳೆಯರದು ಎಂಬುದಲ್ಲಿ ಕೋಷ್ಟಕ-೪.೫ ರಲ್ಲಿ ಈ ಹಿಂದೆ ನೋಡಿದ್ದೇವೆ. ಇಲ್ಲಿ ಪುರುಷರ ಸಂಖ್ಯೆ ಬಹಳ ಇರುವುದಕ್ಕೆ ಮುಖ್ಯ ಕಾರಣ ಅವರಿಗೆ ಸಿಕ್ಕಿರುವ ಅಲ್ಪಸ್ವಲ್ಪ ಶಿಕ್ಷಣ. ಪ್ರೌಢ ಮತ್ತು ಪದವಿಪೂರ್ವ ಹಂತದವರೆಗೆ ಶಿಕ್ಷಣ ಪಡೆದ ಬಹುಪಾಲು ಕುಣಬಿ ಪುರುಷರು ಹೀಗೆ ಅನೇಕ ಬಗೆಯ ತಾತ್ಕಾಲಿಕ ಉದ್ಯೋಗಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ.

**ಕೋಷ್ಟಕ-೪.೫**

**ಕುಣಬಿದಾರರು ತಮ್ಮ ಉದ್ಯೋಗ ಬಗ್ಗೆ ನೀಡಿರುವ ಅಭಿಪ್ರಾಯಗಳು**

| ಕ್ರಸಂ. | ಉದ್ಯೋಗ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| ೧ | ಕೃಷಿ/ಸಾಗುವಳಿ | ೧೦೩ | ೩೪ |
| ೨ | ಕೂಲಿ/ಕೃಷಿ ಕಾರ್ಮಿಕ | ೧೩೫ | ೪೫ |
| ೩ | ಖಾಸಗಿ ಸಂಸ್ಥೆಗಳಲ್ಲಿ ದುಡಿತ | ೧೭ | ೬ |
| ೪ | ಸರಕಾರಿ ಉದ್ಯೋಗ | ೩ | ೧ |
| ೫ | ಕರಕುಶಲ ಕಲೆ | ೧೮ | ೬ |
| ೬ | ವ್ಯಾಪಾರ | ೫ | ೨ |
| ೭ | ಅನ್ವಯವಾಗದಿದ್ದವರು | ೧೯ | ೬ |
| | ಒಟ್ಟಾರೆ | ೩೦೦ | ೧೦೦ |




ಮೇಲ್ಕಾಣಿಸಿದ ೪.೫ ಕೋಷ್ಟಕವು ವ್ಯಕ್ತಿ ಅಧ್ಯಯನದಿಂದ ಕಂಡುಬಂದ ಮಾಹಿತಿದಾರರ ಮುಖ್ಯ ವೃತ್ತಿ ಹಾಗೂ ಉಪವೃತ್ತಿಯ ಪ್ರಮಾಣವನ್ನು ತೋರಿಸುತ್ತದೆ. ಈ ಅಂಕಿ-ಅಂಶಗಳು ಹೇಳುವಂತೆ ಇಲ್ಲಿಯೂ ಸಹ ಕುಣಬಿ ಸಮುದಾಯದ ಜನರು ಹೆಚ್ಚಿನ ೧೦೩ (ಪ್ರತಿಶತ ೩೪ ರಷ್ಟು) ಜನ ಹೆಚ್ಚಿನ ಪ್ರಾಮುಖ್ಯತೆಯನ್ನು ಕೃಷಿ ಮತ್ತು ೧೩೫ (ಪ್ರತಿಶತ ೪೫ ರಷ್ಟು) ಜನ ಕೃಷಿ, ಕೂಲಿ ಕಸಬುಗಳಿಗೆ ನೀಡಿದ್ದು, ಪ್ರತಿಶತ ೭೯ ರಷ್ಟು ಜನ ಈ ವ್ಯವಸಾಯದ ಉತ್ಪನ್ನದ

ಮೇಲೆಯೇ ಅವಲಂಬಿತರಾಗಿದ್ದಾರೆ. ಪ್ರತಿಶತ ೧ ರಷ್ಟು ಜನ ಸರಕಾರಿ ಉದ್ಯೋಗ, ತಮ್ಮ ಸಾಂಪ್ರದಾಯಿಕ ಕರಕುಶಲ ಕಲೆಗಳಲ್ಲಿ ೧೮ (ಪ್ರತಿಶತ ೬ರಷ್ಟು) ಜನರು (ಕುಟುಂಬಗಳು) ಕರಕುಶಲತೆ ಹಾಗೂ ಬುಟ್ಟಿ ಹೆಣೆಯುವಿಕೆಯನ್ನು ತಮ್ಮ ಉಪಕಸುಬನ್ನಾಗಿ ಸ್ವೀಕರಿಸಿದ್ದು, ಕೇವಲ ೫ (ಪ್ರತಿಶತ ೨ ರಷ್ಟು) ಜನ ವ್ಯಾಪಾರವನ್ನು ಸಹ ಉಪಕಸುಬನ್ನಾಗಿ ಮಾಡುತ್ತಿದ್ದೇವೆಂದು ಒಪ್ಪಿಕೊಂಡಿದ್ದಾರೆ. ಈ ಎಲ್ಲಾ ವಿವರ-ಚರ್ಚೆಯ ಅಂಶಗಳಿಂದ ಸ್ಪಷ್ಟವಾಗಿ ಗೊತ್ತಾಗುವುದೇನೆಂದರೆ, ಬಹು ಸಂಖ್ಯಾತ ಕುಟುಂಬಗಳು ಭೂಮಿಯನ್ನೇ ತಮ್ಮ ಜೀವನೋಪಾಯಕ್ಕಾಗಿ ಅವಲಂಭಿಸಿದ್ದರೂ, ಇತರ ಉಪವೃತ್ತಿಗಳನ್ನು ತಮ್ಮ ಜೀವನ ನಿರ್ವಹಣೆಗಾಗಿ ಕೈಗೊಂಡರು.

ಅಧ್ಯಯನದ ಪ್ರಕಾರ ಕೃಷಿ ಕಾರ್ಮಿಕರು ಅಧಿಕ ಸಂಖ್ಯೆಯಲ್ಲಿದ್ದು, ಖಾಸಗಿ ಸಂಸ್ಥೆಗಳಲ್ಲಿ, ಸರಕಾರಿ ಉದ್ಯೋಗ, ಕರಕುಶಲ ಕಲೆ ಮತ್ತು ವ್ಯಾಪಾರಗಳಲ್ಲಿ ಜನರು ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡು ಬಂದಿದೆ. ಇದರಿಂದ ಸಮುದಾಯದವರು ಆಧುನಿಕ ಶೈಲಿಗೆ ಹೊಂದಿಕೊಂಡಿರುವುದು ಅಧ್ಯಯನದ ಮುಖಾಂತರ ಕಂಡುಬರುತ್ತದೆ.

**೪.೬ ಗೃಹೋಪಯೋಗಿ ವಸ್ತುಗಳು**

ಗೃಹೋಪಯೋಗಿ ವಸ್ತುಗಳನ್ನು ಖರೀದಿಸುವುದೆಂದರೆ, ಉಚ್ಚಮ ಸಾಮಾಜಿಕ, ಆರ್ಥಿಕ ಪ್ರತಿಷ್ಠೆಯ ಸಂಕೇತವಾಗಿದ್ದು ಜನರ ಉತ್ತಮ ಜೀವನ ಮಟ್ಟವನ್ನು ತೋರುವುದು. ಬುಡಕಟ್ಟು ಸಮುದಾಯದ ಕುಟುಂಬದಲ್ಲಿ ಬಂಗಾರ, ಬೆಳ್ಳಿ, ಸ್ಟೀಲ್ ಪಾತ್ರೆ ಹಾಗೂ ಪ್ಲಾಸ್ಟಿಕ್ ದಿನೋಪಯೋಗಿ ವಸ್ತುಗಳು ಉಪಯೋಗ ಅವರ ಆರ್ಥಿಕ ಮಟ್ಟವನ್ನು ಬಿಂಬಿಸುತ್ತದೆ.

ಗೃಹೋಪಯೋಗಿ ಸಲಕರಣೆಗಳು ಹಾಗೂ ಪಾತ್ರೆ-ಪಗಡಿಗಳಿಗೆ ಸಂಬಂಧಿಸಿದಂತೆ, ಕುಣಬಿ ಸಮುದಾಯ ಅಡುಗೆ ಮನೆಯಲ್ಲಿ ಮಣ್ಣಿನ ಕುಡಿಕೆ, ಪಾತ್ರೆಗಳನ್ನೇ ಉಪಯೋಗಿಸುತ್ತಾರೆ. ಸಾಮಾನು ಸರಂಜಾಮು ಸಂಗ್ರಹಣೆಗೆ ಮಣ್ಣಿನ ಗಡಿಗೆಯ ಬಳಕೆ ಸಾಮಾನ್ಯ. ಈ ಮಣ್ಣಿನ ಪಾತ್ರೆ-ಪಗಡಗಳನ್ನು ಸ್ಥಳೀಯ ಕುಂಬಾರರು ತಯಾರು ಮಾಡುತ್ತಾರೆ. ಈಗ ಕುಣಬಿಗಳು ಅಲ್ಯುಮಿನಿಯಂ ಪಾತ್ರೆ, ಸ್ಟೀಲ್ ತಾಟು, ಟೇಬಲ್, ಬೆಂಚು, ರೇಡಿಯೊ, ಪಂಪಸೆಟ್ ಮುಂತಾದವುಗಳ ಬಳಕೆಯನ್ನು ಆರಂಭಿಸಿದ್ದಾರೆ. ನೀರು ಸಂಗ್ರಹಕ್ಕಾಗಿ ವಿವಿಧ ಆಕಾರದ ಪ್ಲಾಸ್ಟಿಕ್ ಡ್ರಮ್ ಹಾಗೂ ತೊಟ್ಟಿಗಳನ್ನು ಹೊಂದಿರುತ್ತಾರೆ. ಪ್ರತಿಯೊಂದು ಮನೆಗೂ ಬೀಸುವ ಕಲ್ಲು ಇದ್ದು, ಹೊರಗಿಣ ವರಾಂಡದಲ್ಲಿ ಸ್ಥಾಪಿಸಿರುತ್ತಾರೆ. ಈಗ ಅವರ ಮನೆಗಳಿಗೆ ವಿದ್ಯುತ್ ಸಂಪರ್ಕವನ್ನೂ ಬರದಿರುವುದರಿಂದ ತಗಡಿನ ಚಿಮಣಿ ದೀಪವನ್ನು ಸಂಜೆಗತ್ತಲು ಆವರಿಸಿದೊಡನೆ ದೀಪದ ಬೆಳಕೆಗಾಗಿ ಉಪಯೋಗಿಸುವರು. ಕೆಲವು ಮನೆಗಳಲ್ಲಿ ಕಂದಿಲನ್ನು ಬಳಸುವರು. ಈಗ ಸಾಂಪ್ರದಾಯಿಕ ಗುರಿಗಳು ಮಳೆ-ಉಡುಪು ಬದಲಾಗಿ ಆಧುನಿಕ ಶೈಲಿಯ ಕೊಡುಗೆಗಳು

ಬಳಕೆಗೆ ಬಂದಿವೆ. ಅಲಂಕಾರ ಸಾಮಗ್ರಿಗಳೆನ್ನಿಸಿದ ಕನ್ನಡಿ, ಹಣಿಗೆ, ಸೋಪು, ಸ್ನೋ, ಪೌಡರಗಳು ಈ ಮನೆಮನೆಯಲ್ಲಿ ರಾರಾಜಿಸುತ್ತಿವೆ. ಈ ಮುಂಚೆ ಹಿರಿಯರ ಕಾಲದಲ್ಲಿ ಇವು ಪ್ರತಿಬಂಧಕ್ಕೊಳಗಾಗಿದ್ದವು. ಟಿ.ವಿ., ಟೇಪ್ ರಿಕಾರ್ಡ್‌ರ, ಫ್ಯಾನ್, ಇಸ್ತ್ರಿಪೆಟ್ಟಿಗೆಗಳು ಕೂಡ ವಿದ್ಯುತ್ ಸಂಪರ್ಕ ಹೊಂದಿದ ಮನೆಗಳಲ್ಲಿ ವಿರಾಜಮಾನವಾಗಿವೆ.

ಕೋಷ್ಟಕ–೪.೬ ರಲ್ಲಿ ಕುಣಬಿ ಸಮುದಾಯದವರು ಉಪಯೋಗಿಸುತ್ತಿರುವ ಗೃಹೋಪಯೋಗಿ ವಸ್ತುಗಳ ವಿವರಗಳನ್ನು ಕೊಡಲಾಗಿದ್ದು, ಒಂದು ಕುಟುಂಬದ ಸ್ಥಾನಮಾನ, ಅವರ ಅಂತಸ್ಥು ಮುಂತಾದವುಗಳ ಬಗ್ಗೆ ತಿಳಿದುಕೊಳ್ಳಬೇಕೆಂದರೆ ಸಾಮಾನ್ಯವಾಗಿ ಅವರು ಉಪಯೋಗಿಸುವ ಗೃಹೋಪಯೋಗಿ ವಸ್ತುಗಳನ್ನು ಅವಲೋಕಿಸಬೇಕಾಗುತ್ತದೆ. ಯಾವ ಮನುಷ್ಯ ಶ್ರೀಮಂತನಾಗಿದ್ದಾನೆ, ಯಾರು ಮಧ್ಯಮ ಕುಟುಂಬದಲ್ಲಿದ್ದಾರೆ ಹಾಗೂ ಯಾರು ಬಡತನದಿಂದ ಬಳಲುತ್ತಿದ್ದಾರೆ ಎಂಬುದನ್ನು ಅತಿ ಸರಳವಾಗಿ ಅವರ ಜೀವನ ಶೈಲಿಯಿಂದ ತಿಳಿದುಕೊಳ್ಳಬಹುದು.

**ಕೋಷ್ಟಕ–೪.೬**

**ಕುಣಬಿ ಸಮುದಾಯದವರು ಉಪಯೋಗಿಸುತ್ತಿದ್ದ ಗೃಹೋಪಯೋಗಿ ವಸ್ತುಗಳ ವಿವರ**

| ೧ | ವಸ್ತುಗಳು | ಸಂಖ್ಯೆ | ಪ್ರತಿಶತ |
|---|---|---|---|
| ೧ | ರೇಡಿಯೊ | ೩೧ | ೬ |
| ೨ | ಟೇಪ್‌ರಿಕಾರ್ಡರ್ | ೭ | ೨ |
| ೩ | ದೂರದರ್ಶನ | ೭೮ | ೧೬ |
| ೪ | ದೂರವಾಣಿ/ಮೊಬೈಲ್ | ೧೪೭ | ೩೧ |
| ೫ | ಸೈಕಲ್ | ೮೯ | ೧೮ |
| ೬ | ದ್ವಿಚಕ್ರ ವಾಹನ | ೧೦೦ | ೨೧ |
| ೭ | ನಾಲ್ಕು ಚಕ್ರ ವಾಹನ | ೨೭ | ೬ |
| | ಒಟ್ಟಾರೆ | ೪೭೭ | ೧೦೦ |



ಕೋಷ್ಟಕ ೪.೬ನ್ನು ಗಮನಿಸಿದಾಗ ಅಧ್ಯಯನ ಕೈಗೊಂಡ ಸಾವಿರ ಕುಟುಂಬದಲ್ಲಿ ಕುಣಬಿ ಸಮುದಾಯದವರು ಗೃಹೋಪಯೋಗಿ ವಸ್ತುಗಳ ವಿವರವನ್ನು ತಿಳಿದಾಗ, ಸಮುದಾಯವು ಅವಶ್ಯಕ ಚಿರಾಸ್ತಿಗಳನ್ನು ಹೊಂದಿದ್ದು, ಅದರಲ್ಲಿ ಹೆಚ್ಚಿನ ಸಂಖ್ಯೆಯ ಚಿರಾಸ್ತಿಗಳು ಸಂಪರ್ಕ ಸಾಧನಗಳಾಗಿವೆ. ಸೈಕಲ್, ದ್ವಿಚಕ್ರ ವಾಹನ ಮತ್ತು ನಾಲ್ಕು ಚಕ್ರ ವಾಹನ ಪ್ರತಿಶತ ೪೫ ರಷ್ಟು ಇದ್ದು ಸಾರ್ವಜನಿಕ ಸಾರಿಗೆ ವ್ಯವಸ್ಥೆ ಭದ್ರವಾಗಿಲ್ಲದಿರುವುದು ಕಂಡುಬರುತ್ತದೆ. ಅಂದರೆ ಸಮುದಾಯದವರು ಸಂಚಾರಕ್ಕೆ ಮೇಲಿನ ಪರಿಕರಗಳನ್ನು ಹೊಂದಿರುತ್ತಾರೆ.

ಸಂಪರ್ಕ ಸಾಧನಗಳಾದ ರೇಡಿಯೊ, ದೂರದರ್ಶನ ಮತ್ತು ದೂರವಾಣಿ ಹೊಂದಿದ್ದು, ಅವುಗಳು ಪ್ರತಿಶತ ೫೩ ರಷ್ಟಿದೆ. ಈ ಸಮುದಾಯವು ಅರಣ್ಯ ಪ್ರದೇಶದಲ್ಲಿ ವಾಸವಾಗಿದ್ದರೂ ಕೂಡ ಸಂಚಾರಿ ದೂರವಾಣಿ ಪ್ರತಿಶತ ೩೧ ರಷ್ಟು, ಹಾಗೂ ದೂರದರ್ಶನ ಪ್ರತಿಶತ ೧೬ ರಷ್ಟು ಸಂಪರ್ಕ ಸಾಧನಗಳನ್ನು ಹೊಂದಿರುತ್ತಾರೆ. ಬಹುಶಃ ಖಾಸಗಿ ಸಂಪರ್ಕ ಸಾಧನ ಕಂಪನಿಗಳು ಇಂತಹ ಹಿಂದುಳಿದ ಪ್ರದೇಶದಲ್ಲಿಯೂ ಸಹ ವ್ಯವಸ್ಥಿತ ಸಂಪರ್ಕ ಜಾಲವನ್ನು ಏರ್ಪಡಿಸಿ ಜನರಿಗೆ ಮಾಹಿತಿ ತಲುಪುವಂತೆ ಮಾಡಿವೆ. ಈ ಕೋಷ್ಟಕದಿಂದ ತಿಳಿದುಬರುವುದೇನೆಂದರೆ ಜೀವನಕ್ಕೆ ಅತಿ ಅವಶ್ಯಕವಾದ ವಸ್ತುಗಳನ್ನು ತಮ್ಮ ಸಾಮಾಜಿಕ ಪರಿವರ್ತನೆಯಲ್ಲಿ ತಮ್ಮ ಸ್ಥಾನಮಾನ, ಅಂತಸ್ತುಗಳನ್ನು ಹೆಚ್ಚಿಸಿಕೊಳ್ಳುವುದರ ಜೊತೆಗೆ ಸಮಾಜದಲ್ಲಿಯ ಬದಲಾವಣೆಯನ್ನು ಕಂಡುಕೊಂಡು, ಅವರು ಸಹ ಎಲ್ಲರಂತೆ ಉತ್ತಮ ಜೀವನ ನಡೆಸುತ್ತಿದ್ದಾರೆ. ಉಳಿದವರು ಇವರಂತೆ ಮುಂದೆ ಬರಲು ಪರಿಶ್ರಮ ಪಡುತ್ತಿರುವುದು ಕಂಡುಬರುತ್ತದೆ.

**ಕುಣಬಿಯರ ಮನೆ ಮಾದರಿಗಳು** : ಮಾನವನಿಗೆ ಜೀವಿಸಲು ಅತ್ಯಾವಶ್ಯಕವಾದವುಗಳಲ್ಲಿ ವಸತಿಯು ಒಂದು ತನ್ನ ಅತ್ಯಗತ್ಯವಾದ ಪೂರೈಕೆಗಳಿಗನುಗುಣವಾಗಿ ಸಮಾಜದಲ್ಲಿ ಜೀವಿಸಲು ಮತ್ತು ಆಶ್ರಯವನ್ನು ಹೊಂದಲು ಗುಡಿಸಲು, ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಿರುವುದನ್ನು ಕಾಣಬಹುದು.

ಈ ಕೆಳಗಿನ ೪.೭ ಕೋಷ್ಟಕವು ಮಾದರಿ ಅಧ್ಯಯನ ಕೈಗೊಂಡ ಸಾವಿರ ಕುಟುಂಬದಲ್ಲಿ ಅವರು ಸ್ವಂತ ಮನೆಗಳನ್ನು ಹೊಂದಿರುವವರ ವಿವರವನ್ನು ತಿಳಿಯಲಾಗಿದೆ. ಸಮುದಾಯದ ಪ್ರತಿಶತ ೯೦ ಕುಟುಂಬಗಳು ಮನೆಯ ಸ್ವಂತ ಮಾಲಿಕತ್ವ ಹೊಂದಿದ್ದು ಉಳಿದ ಪ್ರತಿಶತ ೧೦ ರಷ್ಟು ಸರಕಾರದ್ದಾಗಿರುತ್ತದೆ ಎಂಬುದನ್ನು ಕಾಣಬಹುದು.

**ಕೋಷ್ಟಕ-೪.೭**
**ಕುಣಬಿ ಸಮುದಾಯದ ಮನೆಯ ಮಾಲಿಕತ್ವದ ವಿವರ**

| ಕ್ರ.ಸಂ. | ಮಾಲಿಕತ್ವ | ಕುಟುಂಬಗಳ ಸಂಖ್ಯೆ | ಪ್ರತಿಶತ |
|---|---|---|---|
| ೧ | ಸ್ವಂತದ್ದು | ೯೦೩ | ೯೦ |
| ೨ | ಸರಕಾರದ್ದು | ೯೭ | ೧೦ |
| | ಒಟ್ಟಾರೆ | ೧೦೦೦ | ೧೦೦ |

ಇದಲ್ಲದೆ ಈ ಕುಣಬಿ ಕುಟುಂಬ ವರ್ಗಗಳಲ್ಲಿ ಬಹುತೇಕ ಸ್ವಂತ ಮನೆಗಳ ಮಾಲಿಕತ್ವ ಹೊಂದಿರುವವರು, ಉಳಿದ ೯೭ ಕುಟುಂಬದವರು ಸರಕಾರದ ಹಕ್ಕುಪತ್ರವನ್ನು ಹೊಂದಿದವರಾಗಿದ್ದಾರೆ. ಭೂಮಿ ಇಲ್ಲದವರು ಸಹ ತಾವು ಸಾಗುವಳಿ ಮಾಡುವ ಭೂ ಮಾಲಿಕನ ಭೂಮಿಯಲ್ಲಿ ತಮ್ಮ ಸ್ವಂತ ಮನೆಗಳನ್ನು ಕಟ್ಟಿಕೊಂಡು ವಾಸಿಸುವರು, ಉಳಿದವರು ಸರಕಾರಕ್ಕೆ ಸೇರಿದ, ಕೃಷಿಯೇತರ ಭೂಮಿಯಲ್ಲಿ ತಮ್ಮ ಮನೆಗಳನ್ನು ಕಟ್ಟಿಕೊಂಡಿರುವರು. ಆದರೆ ಅವರ ವಾಸದ ಮನೆಗಳು ಗಟ್ಟಿಮುಟ್ಟಾಗಿರದೆ ಅತಿ ಕೆಳಮಟ್ಟದಲ್ಲಿ ಕಳಪೆ ಕಾಮಗಾರಿಯಾಗಿವೆ.

**ಕೋಷ್ಟಕ-೪.೮**
**ಕುಣಬಿ ಸಮುದಾಯದ ಮನೆಗಳ ಮಾದರಿ**

| ಕ್ರ.ಸಂ. | ಮನೆಗಳ ಮಾದರಿ | ಕುಟುಂಬಗಳ ಸಂಖ್ಯೆ | ಪ್ರತಿಶತ |
|---|---|---|---|
| ೧ | ಹುಲ್ಲು ಗುಡಿಸಲು | ೧೭೭ | ೧೮ |
| ೨ | ಹಂಚು | ೮೨೩ | ೮೨ |
| | ಒಟ್ಟಾರೆ | ೧೦೦೦ | ೧೦೦ |



ಈ ಸಮುದಾಯದವರು ಕಚ್ಚಾ ಮನೆಗಳನ್ನು ಹೊಂದಿದ್ದು ಅದರಲ್ಲಿ ಹಂಚು ಹೊದಿಕೆಯ ಮನೆಗಳು ಹೆಚ್ಚಾಗಿ ಕಂಡು ಬರುತ್ತವೆ. ಆದರೆ ಪಕ್ಕಾ ಮನೆಗಳು ಇಲ್ಲದಿರುವುದು ಇವರ ಬಡತನವನ್ನು ಎತ್ತಿ ತೋರುತ್ತದೆ. .

**ಕೋಷ್ಟಕ-೪.೮.೧**
**ಪರಿಗಣನೆಯಲ್ಲಿ ಮನೆಗಳ ವರ್ಗೀಕರಣ**

| ಕ್ರ.ಸಂ. | ಮನೆಗಳ ಸ್ವರೂಪ | ಮಾಹಿತಿದಾರರ ಅಭಿಪ್ರಾಯ | ಪ್ರತಿಶತ |
|---|---|---|---|
| ೧ | ಹುಲ್ಲು ಗುಡಿಸಲು | ೧೨೧ | ೪೦ |
| ೨ | ಹಂಚಿನ ಮನೆ | ೧೫೩ | ೫೧ |
| ೩ | ಭಾಗಶಃ ಹಂಚು/ಹುಲ್ಲು ಹೊದಿಕೆ | ೨೬ | ೯ |
| | ಒಟ್ಟಾರೆ | ೩೦೦ | ೧೦೦ |




ಕೋಷ್ಟಕ ೪.೮ ರ ಸಮೀಕ್ಷೆಯಂತೆ, ಈ ಸಮುದಾಯವು ಅರಣ್ಯ ಪ್ರದೇಶದಲ್ಲಿ ವಾಸಿಸುವುದರಿಂದ ಹಾಗೂ ಮಳೆ ಪ್ರಮಾಣವು ಹೆಚ್ಚಿರುವುದರಿಂದ ಪ್ರಮುಖವಾಗಿ ೮೨೩ (ಪ್ರತಿಶತ ೮೨ ರಷ್ಟು) ಕುಟುಂಬಗಳು ಹಂಚಿನ ಮನೆಗಳನ್ನು ಹೊಂದಿರುತ್ತವೆ. ಕೋಷ್ಟಕ ೪.೮.೧ ರ ವ್ಯಕ್ತಿಗತ ಅಧ್ಯಯನ ವಿಧಾನದಿಂದ ಕಂಡುಕೊಂಡಿರುವಂತೆ ೧೫೩ (ಪ್ರತಿಶತ ೫೧ ರಷ್ಟು) ಕುಟುಂಬಗಳು ಹಂಚಿನ ಹೊಂದಿರುವುದು ಕಂಡುಬರುತ್ತದೆ. ಹುಲ್ಲು ಗುಡಿಸಲು ಹೊಂದಿರುವ ಕುಟುಂಬಗಳು ೧೭೭ (ಪ್ರತಿಶತ ೧೮ ರಷ್ಟು) ಇದ್ದು, ವ್ಯಕ್ತಿ ಅಧ್ಯಯನದಲ್ಲಿ ಪ್ರತಿಶತ ೪೦ ರಷ್ಟು

ಇದು ಹೆಚ್ಚಾಗಿದೆ. ಈ ಸಮುದಾಯದ ಆರ್ಥಿಕ ಸ್ಥಿತಿಗತಿ 'Strong and Sand' ಇರಲಾರದ ಕಾರಣದಿಂದ ವಾಸಿಸುವ ಮನೆ ಅಷ್ಟೊಂದು ಉತ್ತಮ ಸ್ಥಿತಿಯಲ್ಲಿಲ್ಲ. ಸರಕಾರಿ ಮಹತ್ತರ ವಸತಿ ಯೋಜನೆಗಳಾದ ಇಂದಿರಾ ಆವಾಸ, ಅಂಬೇಸ್ಕರ ವಸತಿ ಯೋಜನೆ ಮತ್ತು ಜನರ ವಸತಿ ಯೋಜನೆಗಳು ತಲುಪಿರುವುದಿಲ್ಲ.

ಈಗ ವಿದ್ಯುತ್ ಸಂಪರ್ಕ ವಿಷಯಕ್ಕೆ ಬಂದಾಗ, ಈ ಸಮುದಾಯ ನಾಡಿನ ಜನರಿಗೆ ವಿದ್ಯುಚ್ಛಕ್ತಿ ಒದಗಿಸಲು ಕೃಷಿ ಭೂಮಿ ಕಳೆದುಕೊಂಡು ಮತ್ತು ಕುಟುಂಬಗಳನ್ನು ಸ್ಥಳಾಂತರಗೊಳಿಸಿದರೂ, ನಾಲ್ಕು ತಾಲೂಕುಗಳ ೪೨ ಕೊಪ್ಪಗಳಲ್ಲಿನ ೧೦೦೦ ಕುಟುಂಬಗಳಲ್ಲಿ, ೫೩೨ (ಪ್ರತಿಶತ ೫೩.೨ ರಷ್ಟು) ಸಂಸಾರಗಳು ಬೇಕಾಗುವ ವಿದ್ಯುತನ್ನು ಪಡೆದಿರುವರು. ೮೪ ಕುಟುಂಬಗಳು (ಪ್ರತಿಶತ ೮.೪ ರಷ್ಟು) ಮಾತ್ರ ಸಮಗ್ರ ವಿದ್ಯುತ್ (All Electrive) ಸರಕಾರದಿಂದ ಭಾಗ್ಯಜ್ಯೋತಿ ಯೋಜನೆಯಡಿಯಲ್ಲಿ ವಿದ್ಯುಚ್ಛಕ್ತಿ ಸಂಪರ್ಕ ಹೊಂದಿರುವರು. ಪ್ರತಿಶತ ೯೩ ರಷ್ಟು ಕುಟುಂಬಗಳು ಬಡತನ ರೇಖೆಗಿಂತ ಕೆಳಮಟ್ಟದಲ್ಲಿದ್ದರೂ ಸಹ ಅವರಿಗೆ ಸರಕಾರದ ಸೌಲಭ್ಯದಿಂದ ವಂಚಿತರಾಗಿದ್ದಾರೆ, ಒಂದು ನಿರಾಶಾದಾಯಕ ಸಂಗತಿ ಎಂದರೆ, ಅತಿ ಕಡುಬಡವರಾದ ಬಹುಸಂಖ್ಯಾತ ಫಲಾನುಭವಿಗಳು ೩೮೪ (ಪ್ರತಿಶತ ೩೮.೪ ರಷ್ಟು) ಇನ್ನೂ ವಿದ್ಯುತ್ ಸಂಪರ್ಕವನ್ನೇ ಪಡೆದಿಲ್ಲ. ಇನ್ನೂ ಕೆಲವೆಡೆಗೆ ವಿದ್ಯುತ್ ಸೌಲಭ್ಯವು ಕುಣಬಿ ಸಮುದಾಯದ ವಲಸೆ ಪ್ರದೇಶ (Settlement) ಗಳಿಗೆ ತಲುಪಿರುವುದಿಲ್ಲ. ಇನ್ನೊಂದು ದುರದೃಷ್ಟಕರ ವಿಷಯವೆಂದರೆ ಹುಲ್ಲು ಹೊದಿಕೆಯ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲಿಕ್ಕಾಗದು. ಈ ಸಂಗತಿಗಳೇ ಕುಣಬಿ ಸಮುದಾಯದ ಕೆಳಮಟ್ಟದ ಜೀವನ ವಿಧಾನ ಹಾಗೂ ದುಃಸ್ಥಿರ ವಾಸ ಸ್ಥಿತಿಗೆ ಕಾರಣೀಭೂತವಾಗಿವೆ.

**ಕೋಷ್ಟಕ–೪.೯**
**ಮೂಲಭೂತ ಸೌಕರ್ಯಗಳ ವಿವರ**

| ಕ್ರಸಂ. | ಮೂಲಭೂತ ಸೌಕರ್ಯ | ಕುಟುಂಬಗಳ ಸಂಖ್ಯೆ | ಪ್ರತಿಶತ |
|---|---|---|---|
| ೧ | ಸ್ನಾನಗೃಹ | ೬೧ | ೬ |
| ೨ | ನಳ | ೩೨ | ೩ |
| ೩ | ಶೌಚಾಲಯ | ೫೩ | ೫ |
| ೪ | ಮೂಲಭೂತ ಸೌಲಭ್ಯ ಇರದ ಮನೆಗಳು | ೮೫೪ | ೮೬ |
| | ಒಟ್ಟಾರೆ | ೧೦೦೦ | ೧೦೦ |




ಮತ್ತೊಂದು ಸ್ಪಷ್ಟ ಸಂಗತಿಯೆಂದರೆ, ಈ ಸಮುದಾಯದಲ್ಲಿ ಪ್ರತಿಶತ ೮೬ ರಷ್ಟು ಮೂಲಭೂತ ಸೌಲಭ್ಯದಿಂದ ವಂಚಿತರಾಗಿರುವುದು ಕಂಡುಬರುತ್ತದೆ. ಕೆಲವೇ ಕೆಲವು ಬೆರಳೆಣಿಕೆಯಷ್ಟು ಕುಟುಂಬಗಳು ಸ್ನಾನಗೃಹ, ನಳ ಮತ್ತು ಶೌಚಾಲಯ ಹೊಂದಿದ್ದು ಅದರ ಶೇಕಡಾವಾರು ೬, ೩ ಮತ್ತು ೫ ಅನುಕ್ರಮವಾಗಿದೆ. ಇದರಿಂದ ಗೊತ್ತಾಗುವುದೇನೆಂದರೆ ಬೆಟ್ಟದ ತಪ್ಪಲು ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಜನರಿಗೆ ಆಧುನಿಕ ಶೌಚಾಲಯ ಪದ್ಧತಿ ಹಾಗೂ ನೂತನ ಸ್ವಚ್ಛತಾ ವ್ಯವಸ್ಥೆಗಳ ಪ್ರಜ್ಞೆ ಹಾಗೂ ಅವಶ್ಯಕತೆ ಅಷ್ಟೊಂದು ಕಾಣಸಿಗುವದಿಲ್ಲ. ಅವರ ಬಡತನ ಹಾಗೂ ಅಜ್ಞಾನಗಳು ಇದಕ್ಕೆ ಕಾರಣವಾಗಿರಬಹುದು. ಅದಾಗ್ಯೂ ಕೆಲವು ಸುಶಿಕ್ಷಿತ ಕುಣಬಿ ಕುಟುಂಬಗಳು ಹಳ್ಳಿ ಅಥವಾ ನಗರಗಳಲ್ಲಿ ವಾಸಿಸುತ್ತಿದ್ದುದರಿಂದ ಆಧುನಿಕ ಶೌಚಾಲಯ ನಿರ್ಮಾಣ ಮಾಡಿಕೊಂಡಿರುವರು. ಶಿಕ್ಷಣ ಮತ್ತು ಆರ್ಥಿಕ ಸುಧಾರಣೆ ಇರಲಾರದ ಹೊರತು ಮೂಲಭೂತ ಸೌಕರ್ಯ ಹೊಂದಿಸಿಕೊಳ್ಳಲು ಮತ್ತು ಹೊಂದಲು ರಾಜಕೀಯ ಬೆಂಬಲ ಮತ್ತು ಇಚ್ಛಾಶಕ್ತಿ ಈ ಸಮುದಾಯದವರಿಗೆ ಅತಿ ಅವಶ್ಯಕ.

**ಕೋಷ್ಟಕ–೪.೧೦**
**ಕುಣಬಿಯರ ಸಾಮಾಜಿಕ ಭದ್ರತಾ ಯೋಜನೆಗಳ ವಿವರ**

| ಕ್ರಸಂ. | ವಿವರ | ಜನಸಂಖ್ಯೆ | | | |
|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಪ್ರತಿಶತ |
| ೧ | ವೃದ್ಧರ ಗುಂಪು | ೧೯೯ | ೧೫೮ | ೩೫೭ | ೬೫ |
| | ವೃದ್ಧಾಪ್ಯ ವೇತನ | ೧೨೨ | ೭೨ | ೧೯೪ | ೩೫ |
| ೨ | ವಿಧುರ/ವಿಧವೆಯರು | ೩೭ | ೯೮ | ೧೩೫ | ೬೪ |
| | ವಿಧವಾ ವೇತನ | ೦ | ೭೫ | ೭೫ | ೦೪ |
| ೩ | ಅಂಗವಿಕಲ | ೩೮ | ೩೧ | ೬೯ | ೧೦೦ |
| | ಅಂಗವಿಕಲ ವೇತನ | ೩೮ | ೩೧ | ೬೯ | ೧೦೦ |

ಈ ಕೋಷ್ಟಕದಲ್ಲಿ (೪.೧೦) ತೋರಿಸಿದಂತೆ ಕುಣಬಿ ಕುಟುಂಬಗಳು. ಸರಕಾರದ ಸಾಮಾಜಿಕ ಭದ್ರತಾ ಯೋಜನೆಗಳಾದ, ವೃದ್ಧಾಪ್ಯ ವೇತನ, ವಿಧವಾ ವೇತನ, ಅಂಗವಿಕಲ ವೇತನ ಹೊಂದಿರುತ್ತಾರೆ. ಪ್ರತಿಶತ ೩೫ ರಷ್ಟು ಜನರು ವೃದ್ಧಾಪ್ಯ ವೇತನ, ಶೇಕಡ ೪ ರಷ್ಟು ವಿಧವಾ ವೇತನ, ಪ್ರತಿಶತ ೧೦೦ ರಷ್ಟು ಅಂಗವಿಕಲ ವೇತನ. ಈ ಅಧ್ಯಯನದಲ್ಲಿ ಅಂಗವಿಕಲರಿಗೆ ಪೂರ್ತಿಯಾಗಿ ಸಾಮಾಜಿಕ ಭದ್ರತೆ ಸಿಕ್ಕಿರುತ್ತದೆ. ಆದರೆ ವೃದ್ದಾಪ್ಯ ವೇತನ ಮತ್ತು ವಿಧವಾ ವೇತನ ಸಂಪೂರ್ಣವಾಗಿ ಸಿಕ್ಕಿರುವುದಿಲ್ಲ.

**ಕೋಷ್ಟಕ–೪.೧೧**
**ಆರ್ಥಿಕ ಮಟ್ಟದ ವಿವರ**

| ಕ್ರ.ಸಂ. | ವಿವರ | ಸಂಖ್ಯೆ | ಪ್ರತಿಶತ |
|---|---|---|---|
| ೧ | ಬಡತನ ರೇಖೆಗಿಂತ ಮೇಲ್ಮಟ್ಟವರು | ೭೨ | ೭ |
| ೨ | ಬಡತನ ರೇಖೆಗಿಂತ ಕೆಳಮಟ್ಟವರು | ೯೭೮ | ೯೩ |
| | ಒಟ್ಟಾರೆ | ೧೦೦೦ | ೧೦೦ |




**ಕೋಷ್ಟಕ–೪.೧೧.೧**
**ಕುಣಬಿಯರ ಜನಸಂಖ್ಯೆ ಮತ್ತು ಕುಟುಂಬ ಸಂಖ್ಯೆಗಳ ವಿವರ**

| ಕ್ರ.ಸಂ. | ವಿವರ | ಸಂಖ್ಯೆ |
|---|---|---|
| ೧ | ಕುಟುಂಬ | ೧೦೦೦ |
| ೨ | ಮನೆಗಳ ಸಂಖ್ಯೆ | ೧೦೦೦ |
| ೩ | ಜನಸಂಖ್ಯೆ | ೫೮೯೦ |
| ೪ | ಕುಟುಂಬದ ಗಾತ್ರ | ೫.೮೯ |

ಕೋಷ್ಟಕ ೪.೧೧ರ ಸಮೀಕ್ಷೆಯಂತೆ ಕುಣಬಿ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನವನ್ನು ಉತ್ತರ ಕನ್ನಡ ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿ ಕೈಗೊಳ್ಳಲಾಗಿದೆ. ಅಧ್ಯಯನಕ್ಕಾಗಿ ಒಟ್ಟಾರೆ ೪೨ ಗ್ರಾಮಗಳ ಮಾದರಿಗಳನ್ನು ಆಯ್ಕೆ ಮಾಡಿಕೊಂಡು ಅದರಲ್ಲಿ ೧೦೦೦ ಕುಟುಂಬಗಳನ್ನು ಸಮೀಕ್ಷಗೆ ಒಳಪಡಿಸಲಾಗಿದೆ. ಸಮೀಕ್ಷಗೆ ಒಳಪಟ್ಟ ಕುಟುಂಬಗಳಲ್ಲಿ ಸುಮಾರು ೯೨೮ (ಪ್ರತಿಶತ ೯೩ ರಷ್ಟು) ಕುಟುಂಬಗಳು ಬಡತನ ರೇಖೆಗಿಂತ ಕೆಳಮಟ್ಟದವರಾಗಿದ್ದು, ಉಳಿದ ೭೨ ರಷ್ಟು ಕುಟುಂಬಗಳು (ಪ್ರತಿಶತ ೭ ರಷ್ಟು) ಆರ್ಥಿಕವಾಗಿ ಬಡತನ ರೇಖೆಗಿಂತ ಅಲ್ಪ ಮೇಲ್ಪಟ್ಟವರಾಗಿದ್ದಾರೆ.

ಕೋಷ್ಟಕ ೪.೧೧.೧ ರ ಸಮೀಕ್ಷೆಗೆ ಒಳಪಟ್ಟ ೧೦೦೦ ಕುಟುಂಬಗಳಲ್ಲಿ ೫೮೯೦ ಜನಸಂಖ್ಯೆ ಇದ್ದು, ಕುಟುಂಬದ ಗಾತ್ರ ಅಂದಾಜು ೬ ಇದೆ. ಈ ಕುಟುಂಬದ ಗಾತ್ರ ರಾಜ್ಯದ ಮತ್ತು ದೇಶದ ಗಾತ್ರಕ್ಕಿಂತ ಹೆಚ್ಚು ಇದ್ದು ಬಹುಶಃ ಕುಣಬಿ ಸಮುದಾಯವು ಆರ್ಥಿಕವಾಗಿ ಹಿಂದುಳಿದಿರುವ ಕಾರಣವು ಇರಬಹುದು.

### ೪.೭ ಕುಣಬಿ ಸಮುದಾಯದ ಆರ್ಥಿಕತೆ : ವರ್ತಮಾನದ ಸ್ಥಿತಿಗತಿ

**ಕುಟುಂಬದ ಮಾಸಿಕ ಆದಾಯ**

ಮನುಷ್ಯನಿಗೆ ಬದುಕಲು ಆತನ ಮೂಲಭೂತ ಬೇಡಿಕೆಗಳಾದ ಆಹಾರ, ಬಟ್ಟೆ ಹಾಗೂ ವಸತಿಗಳು ಅತಿ ಅವಶ್ಯಕವಾಗಿವೆ. ಅಲ್ಲದೆ ಶಿಕ್ಷಣ, ಉದ್ಯೋಗಗಳ ಜೊತೆಗೆ ಆ ಕುಟುಂಬವು ಸರಳ ಹಾಗೂ ಸಂತೋಷದ ಜೀವನ ಸಾಗಿಸಬೇಕಾದರೆ, ಆ ಕುಟುಂಬದ ಆದಾಯವು ಅತಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಒಂದು ಕುಟುಂಬದ ಆದಾಯ ಅತ್ಯಂತ ಕಡಿಮೆ ಇದ್ದರೆ, ಆ ಕುಟುಂಬವು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ, ಆದರೆ ಒಂದು ಕುಟುಂಬದ ಆದಾಯ ಉತ್ತಮವಾಗಿದ್ದರೆ ಮುಂದೆ ಬರುವ ಸಮಸ್ಯೆಗಳನ್ನು ನೆಮ್ಮದಿಯ ಜೀವನ ನಡೆಸಲು ಅನುಕೂಲವಾಗುತ್ತದೆ.

ಕೆಳಗಿನ ಪಟ್ಟಿಯಲ್ಲಿ ಇರುವ ವಿವರಗಳು ಕುಟುಂಬಗಳ ಮಾಸಿಕ ಆದಾಯದ ವಿವರಗಳನ್ನು ತೋರಿಸುತ್ತದೆ. ಕುಟುಂಬದ ಮಾಸಿಕ ಆದಾಯದಿಂದ ನಾವು ಕುಣಬಿಯರ ಆರ್ಥಿಕ ಸ್ಥಿತಿಗತಿಗಳು ಮತ್ತು ಅದರಲ್ಲಾಗಿರುವ ಬದಲಾವಣೆಗಳನ್ನು ತಿಳಿಯಬಹುದು. ಇಲ್ಲಿ ಕುಣಬಿಯರ, ಕೃಷಿ ಚಟುವಟಿಕೆಗಳ ಆದಾಯ, ಕಾರ್ಮಿಕ ವೃತ್ತಿಯ ಆದಾಯ, ಕರಕುಶಲ ಚಟುವಟಿಕೆಗಳ ಆದಾಯ, ಕಾಡಿನ ವಿವಿಧ ಸಂಪನ್ಮೂಲಗಳಿಂದ ಗಳಿಸಿದ ಆದಾಯಗಳೆಲ್ಲವುಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

### ಕೋಷ್ಟಕ-೪.೧೨
### ಕುಣಬಿ ಸಮುದಾಯದ ಮಾಸಿಕ ವರಮಾನದ ಸ್ಥಿತಿಗತಿ

| ಕ್ರ.ಸಂ. | ವರಮಾನ | ಕುಟುಂಬಗಳ ಸಂಖ್ಯೆ | ಪ್ರತಿಶತ |
|---|---|---|---|
| ೧ | ೧೫೦-೩೦೦ | ೭೫ | ೮ |
| ೨ | ೩೦೧-೫೦೦ | ೧೫೩ | ೧೪ |
| ೩ | ೫೦೧-೭೫೦ | ೧೯೪ | ೧೯ |
| ೪ | ೭೫೧-೧೦೦೦ | ೨೪೫ | ೨೫ |
| ೫ | ೧೦೦೧-೨೫೦೦ | ೨೨೬ | ೨೩ |
| ೬ | ೨೫೦೧-೫೦೦೦ | ೭೯ | ೮ |
| ೭ | ೫೦೦೧ ಮೇಲ್ಪಟ್ಟು | ೨೮ | ೩ |
| | ಒಟ್ಟಾರೆ | ೧೦೦೦ | ೧೦೦ |




ಈ ಕೋಷ್ಟಕದಲ್ಲಿ (೪.೧೨) ತೋರಿಸಿದಂತೆ ಕುಣಬಿ ಸಮುದಾಯದ ಮುಖ್ಯವಾಗಿ ಕೃಷಿ ಮತ್ತು ಕೃಷಿಕೂಲಿ ಅವಲಂಭಿಸಿರುವುದರಿಂದ ಮಾಸಿಕ ವರಮಾನದ ಸ್ಥಿತಿ ಶೋಚನೀಯವಾಗಿದೆ. ಬುಡಕಟ್ಟು ಬಹುಸಂಖ್ಯಾತ ಕುಟುಂಬಗಳ (೨೪೫-೨೫ ಪ್ರತಿಶತ) ಸಂಸಾರ ಮಾಸಿಕ ಆದಾಯ ರೂಪಾಯಿ ೭೫೧ ರಿಂದ ೧೦೦೦ ವರೆಗೆ ಇರುತ್ತದೆ. ೨೨೬ ಕುಟುಂಬಗಳ (ಪ್ರತಿಶತ ೨೩ ರಷ್ಟು) ಮಾಸಿಕ ಆದಾಯ ರೂಪಾಯಿ ೧೦೦೧ ರಿಂದ ೨೫೦೦ ವರೆಗೆ ಇರುವುದು. ಇನ್ನಿತರ ೭೫ ಕುಟುಂಬಗಳ ಮಾಸಿಕ ಆದಾಯ ರೂಪಾಯಿ ೧೫೦ ರಿಂದ ೩೦೦ ರೊಳಗಿರುವುದು. ೧೫೩ ಕಟುಂಬಗಳು ರೂಪಾಯಿ ೩೦೧ ರಿಂದ ೫೦೦ ಮಧ್ಯೆ ಮಾಸಿಕ ಆದಾಯ ಹೊಂದಿರುವರು. ೭೯ ಕುಟುಂಬಗಳು ಮಾತ್ರ ರೂಪಾಯಿ ೨೫೦೧ ರಿಂದ ೫೦೦೦

ಶ್ರೇಣಿಯಲ್ಲಿದೆ. ಕೊನೆಗೆ ೨೮ ಕುಟುಂಬಗಳು (ಪ್ರತಿಶತ ೩ ರಷ್ಟು) ಮಾತ್ರ ರೂಪಾಯಿ ೫೦೦೧ ಮೇಲ್ಪಟ್ಟು ಮಾಸಿಕ ಆದಾಯ ಹೊಂದಿರುವರು. ಒಟ್ಟಾರೆ ಸಮೀಕ್ಷಿತ ಕುಟುಂಬಗಳ ಹೆಚ್ಚಿನ ಸಂಖ್ಯೆ ಕುಟುಂಬಗಳು ಅತಿ ಕಡುಬಡವರಾಗಿದ್ದು ಸರಕಾರದ ಅಳತೆ ಗೋಲಮಾನದ ಬಡತನ ರೇಖೆಗಿಂತ ಅತಿ ಕೆಳಗಿದ್ದಾರೆ.

**ಕೋಷ್ಟಕ–೪.೧೩**
**ಮಾಸಿಕ ಆದಾಯದ ಪರಿಗಣನೆಯಲ್ಲಿ ಕುಟುಂಬದ ವರ್ಗೀಕರಣ**

| ಕ್ರ.ಸಂ. | ಮಾಸಿಕ ಆದಾಯ | ಕುಟುಂಬಗಳು | ಪ್ರತಿಶತ | ಪ್ರತಿ ಕುಟುಂಬದ ಆದಾಯ | ಒಟ್ಟು ಆದಾಯ |
|---|---|---|---|---|---|
| ೧ | ೧೫೦–೩೦೦ | ೨೦೫ | ೬೮ | ೨೨೫ | ೪೬೧೨೫ |
| ೨ | ೩೦೧–೫೦೦ | ೪೮ | ೧೬ | ೪೦೧ | ೧೯೨೨೪ |
| ೩ | ೫೦೧–೭೫೦ | ೧೬ | ೫ | ೬೨೬ | ೧೦೦೦೮ |
| ೪ | ೭೫೧–೧೦೦೦ | ೧೨ | ೪ | ೮೭೬ | ೧೦೫೦೬ |
| ೫ | ೧೦೦೧–೨೫೦೦ | ೮ | ೩ | ೧೭೫೧ | ೧೪೦೦೪ |
| ೬ | ೨೫೦೧–೫೦೦೦ | ೫ | ೨ | ೩೭೫೧ | ೧೮೭೫೩ |
| ೭ | ೫೦೦೧ ಮೇಲ್ಪಟ್ಟು | ೬ | ೨ | ೫೦೦೦ | ೩೦೦೦೦ |
| | ಒಟ್ಟಾರೆ | ೩೦೦ | ೧೦೦ | | |




ಈ ಮೇಲೆ ಕಾಣಿಸಿದ ಅಂಕಿ–ಅಂಶಗಳು (ಕೋಷ್ಟಕ ೪.೧೩) ತೋರುವಂತೆ ವ್ಯಕ್ತಿಯ ಅಧ್ಯಯನ ವಿಧಾನದಲ್ಲಿ ಕಂಡುಕೊಂಡಂತೆ ಕೇವಲ ಪ್ರತಿಶತ ೨ ಕುಟುಂಬಗಳು ರೂಪಾಯಿ ೫೦೦೦ ಮೇಲ್ಪಟ್ಟು ಮಾಸಿಕ ವರಮಾನವನ್ನು ಹೊಂದಿವೆ. ಸಮೀಕ್ಷೆ ವಿಧಾನದಲ್ಲಿಯೂ ಈ

ಸ್ಥಿತಿಗತಿ ಸಾಬೀತಾಗಿದೆ. ಮೇಲಿನ ಕೋಷ್ಟಕದಲ್ಲಿ ಕಂಡುಬರುವಂತೆ ಅತಿ ಹೆಚ್ಚಿನ ಕುಟುಂಬಗಳು ಕಡಿಮೆ ವರಮಾನವನ್ನು ಹೊಂದಿವೆ.

**ತಮ್ಮ ಉದ್ಯೋಗಗಳ ಬಗ್ಗೆ ಕುಣಬಿಯರ ಅಭಿಪ್ರಾಯಗಳು**

ಈ ಬುಡಕಟ್ಟು (ಕುಣಬಿ) ಕುಟುಂಬಗಳು ತಮ್ಮ ಪ್ರಶಕ್ತ ಕಸಬುಗಳಲ್ಲಿ ಮುಂದುವರೆಯಲು ಬಯಸುತ್ತಾರೆಯೇ? ಅಥವಾ ಉದ್ಯೋಗದಲ್ಲಿ ಬದಲಾವಣೆ ಬಯಸಿದ್ದಾರೆಯೇ ಎಂಬ ಸಂಗತಿಯನ್ನು ಮುಖ್ಯವಾಗಿ ತಿಳಿಯುವುದು ಅವಶ್ಯವೆನಿಸಿದೆ. ಈ ಬಗ್ಗೆ ಮಾಹಿತಿದಾರರನ್ನು (Respondent) ಕೇಳಿದಾಗ, ೧೨೯ (ಪ್ರತಿಶತ ೪೩) ಜನರು ಸಧ್ಯದ ಕಸುಬನ್ನೇ ಮುಂದುವರೆಸ ಬಯಸಿದರು. ೧೭೧ ಜನರು (ಪ್ರತಿಶತ ೫೭) ತಮ್ಮ ಉದ್ಯೋಗದಲ್ಲಿ ಬದಲಾವಣೆ ಬಯಸಲು ಇಚ್ಚಿಸಿದರು. ಈ ಬದಲಾವಣೆ ಬಯಸುವ ಉದ್ಯೋಗಿಗಳು ಸಧ್ಯದ ಕಸಬುಗಳ ಹಾಗೂ ಸಂಬಳಗಳ ಬಗ್ಗೆ ಅತೃಪ್ತಿ ವ್ಯಕ್ತಪಡಿಸಿದರು. ಇದರಿಂದ ತಿಳಿಯುವುದೇನೆಂದರೆ ಕುಣಬಿಗಳಲ್ಲಿ ಸಾಂಪ್ರದಾಯಿಕ ಚಟುವಟಿಕೆಗಳ ಬಗ್ಗೆ ತೀವ್ರ ಆಸಕ್ತಿ ಇರದೇ ಉತ್ತಮ ಸಂಬಳ-ಸವಲತ್ತು ದೊರೆಯುವ ಆಕರ್ಷಕ ಉದ್ಯೋಗ ಬಯಸುತ್ತಾರೆ. ತಮ್ಮ ಸಾಂಪ್ರದಾಯಿಕ ಕಸಬುಗಳಿಗೆ ಅಂಟಿಕೊಳ್ಳದೆ ಲಾಭದಾಯಕ ಕಸಬುಗಳತ್ತ ಕುಣಬಿಯರು ವಾಲುತ್ತಿರುವುದನ್ನು ನಾವು ಕಾಣಬಹುದು.

ಈ ಸಮುದಾಯದ ಸದಸ್ಯರನ್ನು ಉದ್ಯೋಗ ಬದಲಾವಣೆಯ ಕಾರಣಗಳನ್ನು ಕೇಳಿದಾಗ, ೧೧೧ (ಪ್ರತಿಶತ ೩೭) ಕುಟುಂಬಗಳ ಸದಸ್ಯರು ತಮ್ಮ ಜೀವನ ಮಟ್ಟ ಸುಧಾರಣೆಗಾಗಿ ಕಸಬು ಬದಲಾವಣೆ ಆಪೇಕ್ಷಿಸುವುದಾಗಿ ತಿಳಿಸಿದರು. ೩೬ (ಪ್ರತಿಶತ ೧೨) ಜನರು ಮಾತ್ರ ಸಧ್ಯದ ಉದ್ಯೋಗವು ಕಠಿಣ ಮತ್ತು ಶ್ರಮದಾಯಕವಾಗಿದ್ದರಿಂದ ಹೊಸ ಉದ್ಯೋಗ ಬಯಸುವುದಾಗಿ ಹೇಳಿದರು. ಈ ತರಹದ ಜನರು ಸಾಮಾನ್ಯವಾಗಿ ಕಲ್ಲು-ಗಣಿಗಾರಿಕೆ, ಬಾವಿ ತೋಡುವಿಕೆಯಂತಹ ಕಠಿಣ ಶ್ರಮದ ಕೆಲಸ ನಿರ್ವಹಿಸುತ್ತಿದ್ದಾರೆ. ೨೪ (ಪ್ರತಿಶತ ೮) ಜನರು ತಮ್ಮ ಉದ್ಯೋಗ ಅನಾಕರ್ಷಕವು, ಲಾಭದಾಯಕವು ಅಲ್ಲದ್ದರಿಂದ ಬೇರೆ ಕೆಲಸ ಬಯಸುವುದಾಗಿ ತಿಳಿಸುತ್ತಾರೆ. ಒಟ್ಟಾರೆ ಈ ಅಂಶವನ್ನು ಗಮನಿಸಿದಾಗ ಆರ್ಥಿಕ ಸಂಗತಿಯೇ ಉದ್ಯೋಗ ನಿರ್ವಹಣೆಯ ಅತೃಪ್ತಿ ಹಾಗೂ ಅಸಮಾಧಾನಕ್ಕೆ ಕಾರಣವೆನ್ನಬಹುದು.

ಇನ್ನೊಂದೆಡೆಗೆ ತಮ್ಮ ಕೆಲಸದಲ್ಲಿ ಬದಲಾವಣೆ ಬಯಸದೆ ಇರುವ ವ್ಯಕ್ತಿಗಳನ್ನು ಪ್ರಶ್ನಿಸಿದಾಗ ೧೨೯ (ಪ್ರತಿಶತ ೪೩) ಜನರು ಹೇಳುವುದೆಂದರೆ ತಮಗೆ ಜಾಣ್ಮೆ ಅಥವಾ ಕೌಶಲ್ಯದ ಕೊರತೆ ಹಾಗೂ ಹಣದ ಕೊರತೆ ಇರುವದರಿಂದ, ಪರ್ಯಾಯ ಉದ್ಯೋಗದ ಇಚ್ಚೆ ಇಲ್ಲವೆಂದು ತಿಳಿಸಿದರು. ಕೆಲವೊಂದು ಜನರು ತಮ್ಮ ಜನರಿಂದಲೇ ಸಹಾಯ, ಸಹಕಾರ, ಬೆಂಬಲ ಹಾಗೂ

ಸರಕಾರದ ರಕ್ಷೆ ಇರದೇ ಇರುವುದರಿಂದ ಅಸಹಾಯಕತೆ ವ್ಯಕ್ತಪಡಿಸಿದರು. ತಮ್ಮ ನಿರಕ್ಷರತೆಯ ನಿಮಿತ್ತ ಉದ್ಯೋಗ ಬದಲಾವಣೆಯಲ್ಲಿ ಆಸಕ್ತಿ ತೋರಲಿಲ್ಲ.

ಹೀಗಾಗಿ ಒಟ್ಟಾರೆ ಕುಣಬಿಯರ ಉದ್ಯೋಗದ ಆಸೆ, ಆಕಾಂಕ್ಷೆಗಳನ್ನು ಗಮನಿಸಿದಾಗ, ಶಿಕ್ಷಣದ ಕೊರತೆ, ತರಬೇತಿ ಮತ್ತು ಕೌಶಲ್ಯದ ಕೊರತೆ, ಕಡಿಮೆ ಆದಾಯ ಹಾಗೂ ಸರಕಾರದ ಹಾಗೂ ಸಮಾಜದ ಪ್ರತಿಷ್ಠಿತರ ಬೆಂಬಲ ಹಾಗೂ ಪ್ರೋತ್ಸಾಹದ ಕೊರತೆಯಿಂದ ಉದ್ಯೋಗದಲ್ಲಿ ಬದಲಾವಣೆ ಹಾಗೂ ಜೀವನಮಟ್ಟ ಸುಧಾರಣೆಯಲ್ಲಿ ಆಸಕ್ತಿ ತೋರಿರುವುದಿಲ್ಲ.

**ಮಕ್ಕಳ ಉದ್ಯೋಗಾವಕಾಶಗಳ ಬಗ್ಗೆ ಮಾಹಿತಿದಾರರ (ಪಾಲಕರ) ಅಭಿಪ್ರಾಯಗಳು**

ಮನುಷ್ಯನ ಬಯಕೆಗಳು ಅವನ ಎಚ್ಚರಿಕೆಯ ನಡೆಯನ್ನು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳನ್ನು ಮತ್ತು ನೇರ ಚಲನೆಯನ್ನು ಪ್ರತಿಬಿಂಬಿಸುತ್ತವೆ. ಈ ದಿಸೆಯಲ್ಲಿ ಮುಖ್ಯವಾಗಿ ಕುಣಬಿಯರಿಗೆ ತಮ್ಮ ಮಕ್ಕಳ ಮುಂದಿನ ಜೀವನದ ಉದ್ಯೋಗಗಳ ಬಗ್ಗೆ ಮಾಹಿತಿದಾರರ ಆಶಯಗಳನ್ನು ಪರಿಶೀಲಿಸುವುದು ಅವಶ್ಯಕವಾಗಿದೆ. ಇಲ್ಲಿಯ ಆಶ್ಚರ್ಯಕರ ಸಂಗತಿಯೆಂದರೆ ಬಹುತೇಕ ಕುಣಬಿಯರು (ಮಾಹಿತಿದಾರರು, Respondent) ತಮ್ಮ ಮಕ್ಕಳ ಉದ್ಯೋಗಗಳ ಬಗ್ಗೆ ಯಾವುದೇ ರೀತಿಯ ನಿರ್ಧಿಷ್ಟ ಗೊತ್ತು-ಗುರಿ, ಕಲ್ಪನೆ, ಆಸೆಗಳನ್ನಾಗಲಿ, ಬಯಕೆಗಳನ್ನಾಗಲಿ ಹಾಗೂ ಪ್ರಾಮುಖ್ಯತೆಗಳನ್ನು ಮಕ್ಕಳ ಉದ್ಯೋಗಾವಕಾಶಗಳ ಬಗ್ಗೆ ಹೊಂದಿಲ್ಲ.

**ಕೋಷ್ಟಕ-೪.೧೪**
**ಮಕ್ಕಳ ಉದ್ಯೋಗದ ಬಗ್ಗೆ ಕುಣಬಿಯರ (ಪಾಲಕರ) ಅಭಿಪ್ರಾಯಗಳು**

| ಕ್ರ.ಸಂ. | ಅಭಿಪ್ರಾಯಗಳು | ಸಂಖ್ಯೆ | ಪ್ರತಿಶತ |
|---|---|---|---|
| ೧ | ಕೃಷಿ | ೧೨೯ | ೪೩ |
| ೨ | ದೈಹಿಕ ಕೆಲಸಗಳು | ೧೫ | ೫ |
| ೩ | ವ್ಯಾಪಾರ | ೬೯ | ೨೩ |
| ೪ | ಸರಕಾರಿ ಉದ್ಯೋಗ | ೬೦ | ೨೦ |
| ೫ | ಉತ್ತರಿಸಲಾಗದವರು | ೨೭ | ೯ |
| | ಒಟ್ಟಾರೆ | ೩೦೦ | ೧೦೦ |

ಈ ಮೇಲೆ ಕಾಣಿಸಿದ ಅಂಕಿ-ಅಂಶಗಳು (ಕೋಷ್ಟಕ ೪.೧೪) ತೋರುವಂತೆ ಸುಮಾರು ಪ್ರತಿಶತ ೪೮ ರಷ್ಟು ಮಾಹಿತಿದಾರರು, ತಮ್ಮ ಮಕ್ಕಳು ಸಾಂಪ್ರದಾಯಿಕ ಉದ್ಯೋಗಗಳೆನಿಸಿದ ಕೃಷಿ, ಕೂಲಿ-ನಾಲಿ, ಮಾನವ-ದುಡಿಮೆ, ಹಳ್ಳ-ಕೆರೆ-ಬಾವಿ ತೋಡುವಿಕೆ, ಕಟ್ಟಿಗೆ ಕೊರೆಯುವಿಕೆ ಹಾಗೂ ಗಣಿಗಾರಿಕೆ, ಕಲ್ಲು ಬಂಡೆ ಅಗಿಯುವಿಕೆ ಮುಂತಾದವುಗಳನ್ನು ಮುಂದುವರೆಸಿಕೊಂಡು

ಹೋಗಬೇಕೆಂಬ ಆಶಯ ಹೊಂದಿರುತ್ತಾರೆ. ಮಕ್ಕಳು ಪಾಲಕರ ಉದ್ಯೋಗವನ್ನು ಮುಂದುವರೆಸಬೇಕೆಂಬುದೆ ಅವರ ಇಚ್ಛೆ. ೬೯ (ಪ್ರತಿಶತ ೨೩) ಪಾಲಕರು ತಮ್ಮ ಮಕ್ಕಳು ವ್ಯಾಪಾರ-ವಹಿವಾಟು ಮಾಡಬೇಕೆಂದು ಬಯಸಿದರೆ, ಕಾಲು ಭಾಗ ಜನ ಪಾಲಕರು (ಪ್ರತಿಶತ ೨೦) ತಮ್ಮ ಮಕ್ಕಳು ಸರಕಾರಿ ಉದ್ಯೋಗ ಪಡೆಯಬೇಕೆಂದು ಇಚ್ಛಿಸುತ್ತಾರೆ. ೨೭ ಜನರು (ಪ್ರತಿಶತ ೯) ಮಾತ್ರ ಯಾವುದೇ ನಿರ್ಧಿಷ್ಟ ಉದ್ಯೋಗದ ಆಶಯಗಳನ್ನು ವ್ಯಕ್ತಪಡಿಸುವುದಿಲ್ಲ.

ಇನ್ನೊಂದು ಮಹತ್ವದ ಸಂಗತಿ ಎಂದರೆ ಸಮೀಕ್ಷಿತ ವ್ಯಕ್ತಿಗಳ ತಮ್ಮ ಸಾಧ್ಯತೆ, ಕಾರ್ಯಕ್ಷಮತೆ ಹಾಗೂ ಕಾರ್ಯ ವೈಖರಿ ಹಾಗೂ ತಿಳುವಳಿಕೆಯನ್ನು ಅವಲಂಬಿಸಿ, ಮಕ್ಕಳ ಉದ್ಯೋಗದ ಆಶಯಗಳನ್ನು ಹಾಗೂ ಸಮಾಜದ ಉದ್ಯೋಗಾವಕಾಶಗಳನ್ನು ವ್ಯಕ್ತಪಡಿಸಿರುವರು.

**ಕೋಷ್ಟಕ-೪.೧೫**

**ಸಾಂಪ್ರದಾಯಿಕ ಕುಣಬಿ ಉದ್ಯೋಗ ಪಾಲನೆಯ ಬಗ್ಗೆ ಪಾಲಕರು ಹೊಂದಿರುವ ಅಭಿಪ್ರಾಯಗಳು**

| ಕ್ರಸಂ. | ಗ್ರಹಿಕೆಗಳು | ಮಾಹಿತಿದಾರರ ಅಭಿಪ್ರಾಯಗಳು | ಪ್ರತಿಶತ |
|---|---|---|---|
| ೧ | ಹೆಚ್ಚಿನ ಆದಾಯ ಮೂಲ | ೭೦ | ೨೩.೪೦ |
| ೨ | ವಂಶಪಾರಂಪರ್ಯ/ಧಾರ್ಮಿಕ | ೮೪ | ೨೮.೦೦ |
| ೩ | ಬಿಡುವಿನ ಸಮಯದ ಚಟುವಟಿಕೆ | ೩೯ | ೧೩.೦೦ |
| ೪ | ಬುಡಕಟ್ಟು ಜನಾಂಗದ ಹೆಗ್ಗುರುತು | ೨೭ | ೯.೦೦ |
| ೫ | ಅನ್ವಯವಾಗದಿರುವಿಕೆ | ೮೦ | ೨೬.೬೦ |
| | ಒಟ್ಟಾರೆ | ೩೦೦ | ೧೦೦.೦೦ |

ಈ ಮೇಲೆ ಕಾಣಿಸಿದ (ಕೋಷ್ಟಕ ೪.೧೫) ವ್ಯಕ್ತಿಯ ಅಧ್ಯಯನದಲ್ಲಿ, ತೋರಿಸಿದಂತೆ ಮಾಹಿತಿದಾರರು ಕೆಲವು ಕಾರಣಗಳನ್ನು ನೀಡುತ್ತವೆ. ೮೪ (ಪ್ರತಿಶತ ೨೮) ಜನರು ಸಾಂಪ್ರದಾಯಿಕ ಉದ್ಯೋಗದ ಬಗ್ಗೆ ಅಚಲ ಧಾರ್ಮಿಕ ನಿಷ್ಠೆ ವ್ಯಕ್ತಪಡಿಸಿದ್ದಾರೆ. ೭೦ (ಪ್ರತಿಶತ ೨೩.೪೦) ಜನರು ಸಾಂಪ್ರದಾಯಿಕ ಉದ್ಯೋಗಗಳನ್ನು ಹೆಚ್ಚಿನ ಆದಾಯ ಮೂಲಗಳೆಂದು ಪರಿಗಣಿಸಿದ್ದಾರೆ. ಇತರ ೩೯ ಜನರು (ಪ್ರತಿಶತ ೧೩) ಸಾಂಪ್ರದಾಯಿಕ ಉದ್ಯೋಗವನ್ನು ಬಿಡುವಿನ ಸಮಯದ ಉಪಚಟುವಟಿಕೆಯೆಂದು ಗ್ರಹಿಸಿದ್ದಾರೆ. ಉಳಿದ ೨೭ ಜನರು (ಪ್ರತಿಶತ ೯) ಮಾತ್ರ ಸಾಂಪ್ರದಾಯಿಕ ಉದ್ಯೋಗವನ್ನು ತಮ್ಮ ಜನಾಂಗದ ವಿಶಿಷ್ಟ ಹೆಗ್ಗುರುತಾಗಿ ಮುಂದುವರೆಸಬಯಸುತ್ತಾರೆ.

ಅನಂತರ ಮಾಹಿತಿದಾರನು ಅವರ ಮಕ್ಕಳ ವೃತ್ತಿ ಬದಲಾವಣೆಯ ಇಚ್ಛೆಯ ಬಗ್ಗೆ ಕೇಳಿದಾಗ, ೬೦ ಜನರು (ಪ್ರತಿಶತ ೨೦) ತಮ್ಮ ಸಾಂಪ್ರದಾಯಿಕ ವೃತ್ತಿಗಳಾದ ಬೇಟೆ ಹಾಗೂ ಕುಶಲ ಕಲೆಗಳನ್ನು ಮುಂದೆವರೆಸುವಲ್ಲಿ ಇರುವ ತೊಂದರೆಗಳೆಂದರೆ ಕಾಡು ಪ್ರಾಣಿಗಳ ಇಳಿಮುಖತೆ,

ಸರಕಾರದ ನಿರ್ಬಂಧನೆ ಮತ್ತು ಕರಕುಶಲ ಕಚ್ಚಾ ವಸ್ತುಗಳ ಕೊರತೆಯೇ ಮುಖ್ಯವಾಗಿದೆ ಎಂದರು. ೩೩ ಜನರು (ಪ್ರತಿಶತ ೧೧) ಬೇಟೆಗಾರಿಕೆಯು ಹಿಂಸಾತ್ಮಕ ಕಾರ್ಯವಾಗಿದ್ದು ಕಾನೂನು ನಿರ್ಬಂಧನೆಗೆ ಒಳಪಟ್ಟಿದೆ ಎನ್ನುತ್ತಾರೆ. ಇನ್ನುಳಿದವರು ಕುಲಕಸುಬುಗಳಲ್ಲಿ ತಮಗೆ ಆಸಕ್ತಿಯೂ ಇಲ್ಲ ಮತ್ತು ಅವುಗಳನ್ನು ಈಗ ಕಲಿಸುವವರೂ ಇಲ್ಲ ಎಂದು ಪ್ರತಿಕ್ರಿಯಿಸಿರುವರು.

ಈ ಅಂಕಿ-ಅಂಶಗಳಿಂದ ಗೊತ್ತಾಗುವ ಸಂಗತಿ ಎಂದರೆ, ಸಾಂಪ್ರದಾಯಿಕ ಕಲೆಗಳು ನಶಿಸುವ ದಾರಿಯತ್ತ ನಡೆದಿವೆ. ಬುಡಕಟ್ಟು ಸಮುದಾಯದಲ್ಲಿ ಐಕ್ಯತೆ ಹಾಗೂ ಸಾಂಘಿಕ ಮನೋಭಾವದ ಕೊರತೆ, ಕಚ್ಚಾ ವಸ್ತು ಕೊರತೆ, ಅರಣ್ಯ ನಾಶ ಹಾಗೂ ಕಾನೂನಿನ ನಿರ್ಬಂಧಗಳು ಸಾಂಪ್ರದಾಯಿಕ ಕಲೆ ಹಾಗೂ ಉದ್ಯೋಗಗಳ ಅವನತಿಗೆ ಕಾರಣೀಭೂತವಾಗಿವೆ.

**ಕೋಷ್ಟಕ-೪.೧೬**
**ಕುಣಬಿ ಸಮುದಾಯದ ಸಾಲದ ವಿವರ**

| ಕ್ರ.ಸಂ. | ಸಾಲದ ಮೊತ್ತ | ಕುಟುಂಬಗಳ ಸಂಖ್ಯೆ | ಪ್ರತಿಶತ |
|---|---|---|---|
| ೧ | ೩೦೦೦ ರಿಂದ ೫೦೦೦ | ೨೯ | ೩ |
| ೨ | ೫೦೦೧ ರಿಂದ ೧೦೦೦೦ | ೪೬ | ೪ |
| ೩ | ೧೦೦೦೧ ರಿಂದ ೨೫೦೦೦ | ೫೩ | ೫ |
| ೪ | ೨೫೦೦೧ ರಿಂದ ೫೦೦೦೦ | ೨೭ | ೩ |
| ೫ | ೫೦೦೦೧ ರಿಂದ ೧೦೦೦೦೦ | ೨೬ | ೩ |
| ೬ | ೧೦೦೦೦೦ ಮೇಲ್ಪಟ್ಟು | ೧೦ | ೧ |
| ೭ | ಸಾಲ ಇರದ ಕುಟುಂಬಗಳು | ೮೦೯ | ೮೧ |
| | ಒಟ್ಟಾರೆ | ೧೦೦೦ | ೧೦೦ |



ಈ ಮೇಲೆ ತೋರಿಸಿದ ೪.೧೬ ಕೋಷ್ಠಕದಲ್ಲಿ ಸಮೀಕ್ಷೆಗೆ ಒಳಪಟ್ಟ ಕುಣಬಿ ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಾಲವಿರದ ಕುಟುಂಬಗಳು ೮೮೯ (ಪ್ರತಿಶತ ೮೧) ಇರುತ್ತವೆ. ಪ್ರತಿಶತ ೭ ಕುಟುಂಬಗಳು ರೂಪಾಯಿ ೩೦೦೦ ರಿಂದ ರೂಪಾಯಿ ೧೦೦೦೦ ವರೆಗೆ ಸಾಲದ ಮೊತ್ತವನ್ನು ಹೊಂದಿವೆ. ಉಳಿದ ಕುಟುಂಬಗಳು ರೂಪಾಯಿ ೨೫೦೦೦ ರಿಂದ ೫೦೦೦೦ ಮೇಲ್ಪಟ್ಟು ಸಾಲ ಹೊಂದಿದ ೨೭ (ಪ್ರತಿಶತ ೩) ಕುಟುಂಬಗಳಾಗಿವೆ. ಕೇವಲ ೧೦ (ಪ್ರತಿಶತ ೧) ಕುಟುಂಬ ಮಾತ್ರ ರೂಪಾಯಿ ಒಂದು ಲಕ್ಷ ಮೇಲ್ಪಟ್ಟು ಸಾಲ ಹೊಂದಿದೆ.

ಆಶ್ಚರ್ಯಕರ ಸಂಗತಿಯೆಂದರೆ ಕುಣಬಿ ಸಮುದಾಯ ರಾಷ್ಟ್ರೀಯ/ಪ್ರಾಂತೀಯ ಗ್ರಾಮೀಣ ಬ್ಯಾಂಕಿನಿಂದ ಯಾವುದೇ ಸಾಲ ಸೌಲಭ್ಯವನ್ನು ಪಡೆದಿರುವುದಿಲ್ಲ. ಈ ಸಮುದಾಯವನ್ನು ಆರ್ಥಿಕ ಸೇರ್ಪಡೆಗೆ ಅವಕಾಶವಿರುತ್ತದೆ. ಕಾರಣ ಈ ಸಮುದಾಯವು ಶೈಕ್ಷಣಿಕ, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ದೃಷ್ಟಿಯಿಂದ ಬಹಳ ಹಿಂದುಳಿದಿದ್ದು, ಸಂಬಂಧಿಸಿದ ರಾಷ್ಟ್ರೀಕೃತ ಬ್ಯಾಂಕುಗಳು ಸಮುದಾಯವನ್ನು ಆರ್ಥಿಕವಾಗಿ ಬಲಪಡಿಸಲು ಮುಂದೆ ಬರುವುದು ಅವಶ್ಯಕವಿದೆ.

ಅಧ್ಯಯನದ ಮುಖಾಂತರ ತಿಳಿದುಬರುವುದೇನೆಂದರೆ ಸಾಲ ಇರದ ಕುಟುಂಬಗಳು ಪ್ರತಿಶತ ೮೧ ರಷ್ಟು ಇರುತ್ತವೆ. ಏಕೆಂದರೆ ಈ ಕುಟುಂಬಗಳಿಗೆ ಸಾಲ ತೆಗೆದುಕೊಳ್ಳಲು ಯಾವುದೇ ಭದ್ರತೆ ಇಡಲು ಇವರಲ್ಲಿ ವಸ್ತುಗಳು ಇಲ್ಲದಿರುವುದೇ ಇದಕ್ಕೆ ಮುಖ್ಯ ಕಾರಣವಾಗಿದೆ. ಆದ್ದರಿಂದ ಯಾವುದೇ ಬ್ಯಾಂಕುಗಳು ಮತ್ತು ಲೇವಾದೇವಿಗಳು ಇವರಿಗೆ ಸಾಲ ಕೊಡಲು ಮುಂದೆ ಬರುವುದಿಲ್ಲ.

**ಉಳಿತಾಯ ಮತ್ತು ಹೂಡಿಕೆ ಪ್ರವೃತ್ತಿ**

ಗುಡ್ಡಗಾಡು (ಕುಣಬಿ) ಸಮುದಾಯದ ಉಳಿತಾಯ ಹಾಗೂ ಹಣ ಹೂಡಿಕೆಯ ಮನೋಭಾವದ ಸಮೀಕ್ಷೆಯನ್ನು ಕೈಗೊಂಡಾಗ ೧೧೭ (ಪ್ರತಿಶತ ೩೯) ಜನ ಮಾಹಿತಿದಾರರು ಪೋಷ್ಟ್ ಆಫೀಸ್, ವಾಣಿಜ್ಯ ಬ್ಯಾಂಕು ಹಾಗೂ ಸಹಕಾರಿ ಸಂಘಗಳಲ್ಲಿ ತಮ್ಮ ಉಳಿತಾಯ ಖಾತೆ ಹೊಂದಿರುವುದಾಗಿ ತಿಳಿಸಿದರು. ಉಳಿದ ೧೮೩ (ಪ್ರತಿಶತ ೬೧) ಜನರು ಯಾವುದೇ ಬ್ಯಾಂಕಿನಲ್ಲಿ ತಾವು ಉಳಿತಾಯ ಖಾತೆ ಹೊಂದಿಲ್ಲವೆಂದು ಹೇಳಿದರು. ತದ್ವಿರುದ್ಧವಾಗಿ ಸಾಲ ಸೌಲಭ್ಯ ಪಡೆಯುವುದಕ್ಕಾಗಿ ಅನೇಕ ಕುಟುಂಬಗಳು ಉಳಿತಾಯ ಖಾತೆ ತೆರೆಯಲು ಇಚ್ಛಿಸಿದ್ದು ತಿಳಿಯುತ್ತದೆ. ಇದನ್ನು ನೋಡಿದಾಗ, ಬಹುಸಂಖ್ಯಾತ ಕುಟುಂಬಗಳಿಗೆ ಆಧುನಿಕ ಉಳಿತಾಯ ಪದ್ಧತಿಗಳ ಅರಿವೇ ಇರುವುದಿಲ್ಲ. ಇನ್ನೊಂದು ಸಂಗತಿಯೆಂದರೆ ಕನಿಷ್ಠ ಆದಾಯ, ಅನಿಶ್ಚಿತ ಕೂಲಿ–ನಾಲಿ, ದೊಡ್ಡ ಕುಟುಂಬ, ಅರೆ–ಉದ್ಯೋಗ ಸ್ಥಿತಿಯೇ ಕುಣಬಿಯರು ಉಳಿತಾಯ ಮಾಡಲು

ಸಾಧ್ಯವಿಲ್ಲದಿರುವುದು ಕಂಡುಬರುತ್ತದೆ. ಆದಾಗ್ಯೂ ಇಂದಿನ ದಿನಗಳಲ್ಲಿ ಕುಣಬಿಯರು ಉಳಿತಾಯದ ಕಡೆ ಗಮನ ಹರಿಸುತ್ತಿರುವುದು ಕಂಡುಬರುತ್ತದೆ.

**ಉಪಸಂಹಾರ**

ಈ ಸಂಶೋಧನಾ ಅಧ್ಯಯನದಿಂದ ಕಂಡುಬಂದ ಸಂಗತಿಯೆಂದರೆ ಕುಣಬಿ ಸಮುದಾಯದವರು ಆರ್ಥಿಕವಾಗಿ ಹಿಂದುಳಿದವರಾಗಿರುವರು. ಬಹು ಕಾಲದಿಂದಲೂ ಅಲೆಮಾರಿಗಳಾಗಿ, ಬದಲಾಯಿಸುವ ಕೃಷಿ ಪದ್ಧತಿಯನ್ನು ಅನುಸರಿಸಿಕೊಂಡು ಬಂದು, ಒಂದು ಕಾಡಿನಿಂದ ಮತ್ತೊಂದು ಕಾಡಿಗೆ ಅಲೆಯುತ್ತಿರುವುದೆ, ಅವರು ಆರ್ಥಿಕವಾಗಿ ಹಿಂದುಳಿಯುವುದಕ್ಕೆ ಕಾರಣ. ಹಾಗಿದ್ದರೂ ಅವರು ಕೃಷಿಕರಾಗಿಯೂ ಮತ್ತು ಕೂಲಿಕಾರ್ಮಿಕರಾಗಿಯೂ ಸ್ಥಿರವಾಗಿ ನಿಂತಿರುವರು. ಕುಣಬಿಯರು ತಮ್ಮ ಜೀವನ ನಿರ್ವಹಣೆಗೆ, ಕೃಷಿ ಸಾಗುವಳಿ, ಕಾಡಿನಲ್ಲಿಯ ವಸ್ತುಗಳ ಸಂಗ್ರಹಣೆ, ಕರಕುಶಲ ಕಸಬುಗಳು, ಪ್ರಾಣಿ ಸಾಕಾಣೆ, ಕಾಡಿನ ಔಷಧೀಯ ಸಸ್ಯಗಳನ್ನು ಮತ್ತು ಬೇರುಗಳನ್ನು ಮಾರಾಟ ಮಾಡುವುದರ ಮೇಲೆ ಅವಲಂಭಿಸಿರುವರು. ಸರಕಾರದ 'ಫಾರೆಸ್ಟ್ ಆ್ಯಕ್ಟ್' ನಿಯಮಗಳಿಂದಾಗಿ, ಕಾಡುಗಳ ನಾಶದಿಂದಾಗಿ ಕುಣಬಿಯರು, ಕಾಡುಗಳನ್ನು ಬಿಟ್ಟು ಬೆಟ್ಟ-ಗುಡ್ಡ ಪ್ರದೇಶಗಳಲ್ಲಿ ನೆಲೆಸಲು ಆರಂಭಿಸಿರುವರು.

ನಗರೀಕರಣದಿಂದಾಗಿ ಕಾಡುಗಳು ನಾಶವಾಗುತ್ತಿದ್ದು, ಔಷಧೀಯ ಸಸ್ಯಗಳ ಕೊರತೆಯಾಗುತ್ತಿದೆ. ಕಾರಣ ಹಿಂದಿನಿಂದಲೂ ನಡೆದು ಬಂದಿರುವ ಕುಲಕಸಬುಗಳು ನಿಧಾನವಾಗಿ ನಶಿಸಿ ಹೋಗುತ್ತಿವೆ. ಬೇಟೆಗಾರಿಕೆಯನ್ನು ಕುಣಬಿಯರು ಇಂದು ಬರಿ ಧಾರ್ಮಿಕ ಸಾಂಪ್ರದಾಯದಂತೆ ಆಚರಿಸುತ್ತಿರುವರು. ಕಾಡಿನ ಕಾನೂನುಗಳು ಹೆಚ್ಚಾಗಿರುವುದರಿಂದ, ಬಲೆ ಮಾಡಲು ಬೇಕಾದ ಕಾಡಿನ ವಸ್ತುಗಳನ್ನು ಸಂಗ್ರಹಿಸುವುದು ಕುಣಬಿಯರಿಗೆ ಕಷ್ಟವಾಗುತ್ತಿದೆ. ಬೇಟೆಗಾರಿಕೆಯನ್ನು ಮತ್ತು ಪ್ರಾಣಿ ಹಿಂಸೆಯನ್ನು ನಿಷೇಧಿಸಿರುವುದರಿಂದ ಕುಣಬಿಯರ ಬೇಟೆಯಾಡುವ ಚಟುವಟಿಕೆಗಳು ಬಹಳ ಕಡಿಮೆಯಾಗಿವೆ.

ಬೇಟೆಯಲ್ಲದೆ ಕುಣಬಿಯರು ಕರಕುಶಲ ವಸ್ತುಗಳನ್ನು ಬಿದರಿನಿಂದ ಮಾಡುವುದರಲ್ಲಿ ನಿಪುಣರು. ಅವರು ಮಾಡಿದ ಬುಟ್ಟಿ, ಮತ್ತಿತರ ವಸ್ತುಗಳನ್ನು ಧಾರ್ಮಿಕ ಕಾರ್ಯಗಳಿಗೆ, ದಿನಬಳಿಕೆಗೆ ಬಳಸಲಾಗುತ್ತಿದೆ. ಕುಣಬಿ ಯುವಕರು ಈ ಕರಕುಶಲ ಕೆಲಸವನ್ನು ಕಲಿಯುವುದರಲ್ಲಿ ಆಸಕ್ತಿ ಹೊಂದಿಲ್ಲ. ಇಂದು ಕುಣಬಿಯರು ತಾವೇ ಭೂಮಿಯ ಒಡೆಯರಾಗುತ್ತಿದ್ದಾರೆ. ಬಹುತೇಕ ಕುಣಬಿಯರು ಸಾಗುವಳಿ ಭೂಮಿಯನ್ನು ವ್ಯವಸಾಯ ಮಾಡುತ್ತಿರುವರು. ಸಾಗುವಳಿಗೆ ಯೋಗ್ಯದಿಂದ ಭೂಮಿ ಹೆಚ್ಚೆಂದರೆ ಒಂದು ಎಕರೆಯಷ್ಟನ್ನು ನಾವು ಕುಣಬಿ ಮನುಷ್ಯರ ಹತ್ತಿರ ಕಾಣಬಹುದು. ಆದರೆ ಸಾಗುವಳಿಗೆ ಯೋಗ್ಯವಲ್ಲದ ಭೂಮಿಯನ್ನು ಕುಣಬಿಯರಲ್ಲಿ

ಇರುವುದನ್ನು ಕಾಣುತ್ತೇವೆ. '೧೯೬೧ ನೇ ಭೂ ಸುಧಾರಣಾ ಕಾಯ್ದೆ' (Land Reforms Act) ಪ್ರಕಾರ ಕರ್ನಾಟಕದಲ್ಲಿ ಅನೇಕ ಕುಣಬಿಯರು ತಾವು ಸಾಗುವಳಿ ಮಾಡುತ್ತಿದ್ದ ಭೂಮಿಯ ಒಡೆತನವನ್ನು ಹೊಂದಿರುವರು.

ಹಳೆಯ ಕೃಷಿ ಪದ್ಧತಿಗಳನ್ನು ಬಳಸುತ್ತಿದ್ದರೂ ಸಹ, ನಿಧಾನವಾಗಿ ಇಂದಿನ ಕುಣಬಿಯರು ಹೊಸ ಕೃಷಿ ವಿಧಾನಗಳನ್ನು ಅನುಸರಿಸಲು ಆರಂಭಿಸಿರುವರು. ಕುಣಬಿಯರ ಹಳ್ಳಿಗಳಲ್ಲಿ ನೀರಿನ ಕೊರತೆ ಬಹಳವಾಗಿ ಎದ್ದುಕಾಣುತ್ತದೆ. ಸಾಕು ಪ್ರಾಣಿಗಳನ್ನು ಬಹಳ ಬಡತನದಲ್ಲಿ ಅವರು ಸಾಕುತ್ತಿರುವರು. ಸರಕಾರದಿಂದ ಲಭ್ಯವಿರುವ ಅನೇಕ ಉಪಯುಕ್ತ ಸೌಲಭ್ಯಗಳು ಇಂದಿಗೂ ಬಹಳಷ್ಟು ಕುಣಬಿಯರಿಗೆ ತಿಳಿದಿಲ್ಲ. ಬಹುತೇಕ ಕುಣಬಿಯರು ಕೂಲಿ ಮಾಡಿ, ಕರಕುಶಲ ಕಸಬುಗಳನ್ನು ಮಾಡುತ್ತ ತಮ್ಮ ಜೀವನ ನಿರ್ವಹಣೆ ಮಾಡುತ್ತಿರುವರು.

ಇದೀಗ ಕುಣಬಿ ಸಮುದಾಯದ ಸುಧಾರಣೆಗಾಗಿ ಸ್ಥಳೀಯ ಬ್ಯಾಂಕು ಹಾಗೂ ಸೇವಾ ಸಹಕಾರಿ ಸಂಘ ಸಂಸ್ಥೆಗಳು ಅನೇಕ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೆತ್ತಿಕೊಂಡಿದೆ. ದಾಂಡೇಲಿಯ Green India Tribal Empowerment, 'ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ' ಕುಣಬಿ ಸಮುದಾಯದವರ ಅಭಿವೃದ್ಧಿಗಾಗಿ ಜಿಲ್ಲೆಯ ಇತರಡೆಗಳಲ್ಲಿಯು ಈ ಚಟುವಟಿಕೆಗಳು ಸಾಗಿವೆ. ಆದರೂ ಕುಣಬಿ ಸಮುದಾಯದ ಉದ್ಯಮಶೀಲತೆ ಹಾಗೂ ಪ್ರೇರಣೆಯ ಅಭಿವೃದ್ಧಿಗಾಗಿ ಸ್ವಯಂಸೇವಾ ಸಂಘಟನೆಗಳು ಆರ್ಥಿಕ ಸಂಸ್ಥೆಗಳು ವಿಶೇಷ ಆಂದೋಲನ ಕೈಗೊಳ್ಳಬೇಕಾಗಿದೆ.

ವಿದ್ಯಾರ್ಥಿ ಮತ್ತು ರೈ ರವರ ಅಭಿಪ್ರಾಯದಂತೆ, 'ಬುಡಕಟ್ಟು ಸಮುದಾಯದಲ್ಲಿ ಸರಳ ನಿರ್ಧಿಷ್ಟ ಆರ್ಥಿಕ ಬದಲಾವಣೆಯನ್ನು ಕಾಣುವುದು ಕಠಿಣವೆನಿಸಿದರೂ, ಸ್ಥಳೀಯ ಪರಿಸರದಲ್ಲಿ ತ್ವರಿತಗತಿಯ ಬದಲಾವಣೆ ಸಾಗಿದೆ. ಈ ಬದಲಾವಣೆಯನ್ನು ಸ್ಪಷ್ಟವಾಗಿ ಗುರುತಿಸುವುದೇನೆಂದರೆ ನೂತನ ಆರ್ಥಿಕ ಯೋಜನೆಗಳನ್ನು ಜಾರಿಗೊಳಿಸುವುದು ಒಂದೆಡೆಯಾದರೆ, ಇನ್ನೊಂದೆಡೆಗೆ ನೂತನ ಅರ್ಥಶಾಸ್ತ್ರದ ವ್ಯಾಖ್ಯೆಯ ಉದಯವಾಗಿ ಸ್ಪಷ್ಟ ಪರಿಣಾಮಗಳು ಗೋಚರಿಸತೊಡಗಿವೆ'.

ಈ ಸಮಗ್ರ ಚರ್ಚೆಯ ನಿರ್ಧಿಷ್ಟ ಅಂಶಗಳನ್ನು ಗಮನಿಸಿದಾಗ, ಸಮುದಾಯ ಅಭಿವೃದ್ಧಿ ಚಟುವಟಿಕೆಗಳ ಅನುಷ್ಠಾನ, ಭೂ ಸುಧಾರಣೆ ಕಾಯ್ದೆ, ನಗರೀಕರಣ, ಶಿಕ್ಷಣ ಸೌಲಭ್ಯ, ಸಾರಿಗೆ ಸಂಪರ್ಕ ಸುಧಾರಣೆ, ವಾಣಿಜ್ಯ ಬ್ಯಾಂಕು ಹಾಗೂ ಸಹಕಾರಿ ಸಂಘಗಳ ಸ್ಥಾಪನೆ, ಮಾರುಕಟ್ಟೆ ಅಭಿವೃದ್ಧಿ ಯೋಜನೆಗಳ ಚಾಲನೆಯಿಂದಾಗಿ ಕುಣಬಿಯರ ಜೀವನ ಶೈಲಿಯಲ್ಲಿಯೂ ಆರ್ಥಿಕ ಸುಧಾರಣೆ ಕಾಣತೊಡಗಿದರೂ, ಅವರ ಸರಾಸರಿ ಮಾಸಿಕ ಆದಾಯ, ಅವರು ಬಡತನ ರೇಖೆಗಿಂತ ಕೆಳಮಟ್ಟದಲ್ಲಿ ಇರುವುದನ್ನು ತೋರಿಸುತ್ತದೆ. ಕೆಳಮಟ್ಟದ ಆರ್ಥಿಕ ಸ್ಥಿತಿ, ಶೈಕ್ಷಣಿಕವಾಗಿ

ಹಿಂದುಳಿದಿರುವಿಕೆ, ನೀರಾವರಿ ಸೌಲಭ್ಯಗಳ ಅಭಾವ, ಸಾಗುವಳಿಗೆ ಯೋಗ್ಯವಲ್ಲದ ಭೂಮಿಯನ್ನು ಪಡೆದಿರುವುದು ಮತ್ತು ಪರಿಶಿಷ್ಟ ಪಂಗಡದವರಿಗೆ ಸಿಗುವ ಸರಕಾರಿ ಸೌಲಭ್ಯಗಳು ಕುಣಬಿಯರಿಗೆ ದೊರಕದೇ ಇರುವುದು, ಅವರ ಇಂದಿನ ಬಡತನಕ್ಕೆ ಕಾರಣ ಎಂದು ಹೇಳಬಹುದು.

## ಟಿಪ್ಪಣಿಗಳು

೧. ಬೋರಲಿಂಗಯ್ಯ ಹಿ.ಚಿ., ಡಾ. ಪ್ರಭಾಕರ ಎ.ಎಸ್. ಚಂದ್ರಶೇಖರ ಟಿ.ಆರ್. – 'ಬುಡಕಟ್ಟು ಅಭಿವೃದ್ಧಿ : ಕೆಲವು ಟಿಪ್ಪಣಿಗಳು', (ಲೇಖನ) ಬುಡಕಟ್ಟು ಅಧ್ಯಾಯ–೨, ಪುಟ ೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ, ೨೦೦೪.

2. Vidyarthi and Rai B.K. 'The Tribal Culture of India', Concept Publication, Delhi, p. 140, 1977.

3. Fuch Stephen,'The Aboriginal Tribes of India', McMillan,Delhi,p.48, 1973.

4. Thurston Edger, 'Caste and Tribes of South India', Government Press, Madras, p. 102, 1909.

5. Mann R.S. 'Anthropological and Sociological Theory', Approaches and Applications. Rawat, Jaipur, pp. 113-114, 1984.

೬. ತಿಳುವಳಿಕೆ ನೀಡಿದವರು – ಪರಮೇಶ್ವರ ರಾಮಾ ಕುಣಬಿ, ಕಟ್ಟಿಗೆ ಗ್ರಾಮ, ಯಲ್ಲಾಪುರ ತಾಲೂಕು.

೭. ತಿಳುವಳಿಕೆ ನೀಡಿದವರು – ರುಕ್ಮಿಣಿ ಬಿಕ್ಕು ಕುಣಬಿ, ಅರೆಬೈಲ ಗ್ರಾಮ, ಯಲ್ಲಾಪುರ ತಾಲೂಕು.

೮. ತಿಳುವಳಿಕೆ ನೀಡಿದವರು – ನಿಂಗಣ್ಣ ತಮ್ಮಯ್ಯ ಕುಣಬಿ, ಶೀಡಿಗುಳೆ ಗ್ರಾಮ, ಅಂಕೋಲಾ ತಾಲೂಕು.

9. Singh K.S. 'Economics of the Tribes and their Transformation', Vol. XIX, New Delhi, p. 131, 1982.

೧೦. ತಿಳುವಳಿಕೆ ನೀಡಿದವರು – ಮಹೇಂದ್ರ ಕುಮಾರ ಬಿ.ಪಿ., ಗಿರಿಜನ ಅಭಿವೃದ್ಧಿ ನಿರ್ದೇಶಕರು, ದಾಂಡೇಲಿ.

11. Pratap Sinh Velip Kankar 'The Kurmis-Kunbis of India',Pritam Prakashan, Margao, Goa, p. 8, 2006.

೧೨. ತಿಳುವಳಿಕೆ ನೀಡಿದವರು – ಗೋವಿಂದ ಶೆಡ್ಡು ವೇಳಿಪ್ (ಬುದ್ದಿವಂತ), ಕುಂಡಲ ಗ್ರಾಮ, ಜೋಯಿಡಾ ತಾಲೂಕು.

೧೩. ತಿಳುವಳಿಕೆ ನೀಡಿದವರು – ಸುಭಾಷ ಗಾವುಡ (ಕುಣಬಿ ಸಮುದಾಯದ ರಾಜ್ಯ ಕಾರ್ಯದರ್ಶಿ), ಘಟ್ಟಾವು ಗ್ರಾಮ, ಜೋಯಿಡಾ ತಾಲೂಕು.

೧೪. ತಿಳುವಳಿಕೆ ನೀಡಿದವರು – ಮಾಬಳೂ ಬಾರಕೆಲೋ ಖಂಡಲಕರ, ಕುಂಡಲ ಗ್ರಾಮ, ಜೋಯಿಡಾ ತಾಲೂಕು.

೧೫. ತಿಳುವಳಿಕೆ ನೀಡಿದವರು – ಗಂಗೆ ಕುಣಬಿ (ಗಿಡಮೂಲಿಕೆ ಔಷಧಿ), ಮಾವಿನಮನೆ ಗ್ರಾಮ, ಯಲ್ಲಾಪುರ ತಾಲೂಕು.

೧೬. ತಿಳುವಳಿಕೆ ನೀಡಿದವರು – ನೆಮ್ಮ ರಾಮು ಕುಣಬಿ, ಹರೂರ ಗ್ರಾಮ, ಕಾರವಾರ ತಾಲೂಕು.

17. Vidyarthi and Rai B.K. 'The Tribal Culture of India', Concept Publication, Delhi, P. 131, 1977.

೧೮. ಬೋರಲಿಂಗಯ್ಯ ಹಿ.ಚಿ. 'ಗಿರಿಜನ ನಾಡಿಗೆ ಪಯಣ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಬೆಂಗಳೂರು, ೨೦೦೬.

೧೯. Dinakar Desai, Vakkals 'The Aboriginals of Kanara', ಉಲ್ಲೇಖ: ವಿಷ್ಣುನಾಯಕ, 'ದುಡಿಯುವ ಕೈಗಳ ಹೋರಾಟದ ಕಥೆ', ಪು. ೧೪, ೨೦೦೪.

20. Damble C.B. 'Land Reforms and Changing Agrarian Relations in Dakshina Kannada District', Ph.D. Thesis, Dept. of Sociology, University of Pune, p. 61, 1989.

೨೧. ತಿಳುವಳಿಕೆ ನೀಡಿದವರು – ಗೋವಿಂದ ಮಾಳು ಕುಣಬಿ (ಕೃಷಿಕೂಲಿ), ದೇವಸಗದ್ದೆ ಗ್ರಾಮ, ಯಲ್ಲಾಪುರ ತಾಲೂಕು.

೨೨. ತಿಳುವಳಿಕೆ ನೀಡಿದವರು – ಶ್ರೀಮತಿ ಕೆರಗಿ ರಾಮಾ ಕುಣಬಿ (ಕೃಷಿಕೂಲಿ), ಲಕ್ಕೆಮನೆ ಗ್ರಾಮ, ಅಂಕೋಲಾ ತಾಲೂಕು.

೨೩. ತಿಳುವಳಿಕೆ ನೀಡಿದವರು – ಶ್ರೀಮತಿ ಗೌರಿಕೃಷ್ಣ ಕುಣಬಿ (ಸ್ವಸಹಾಯ ಸಂಘದ ಅಧ್ಯಕ್ಷೆ), ಇಡಿಕೆಮನೆ ಗ್ರಾಮ, ಯಲ್ಲಾಪುರ ತಾಲೂಕು.

೨೪. ತಿಳುವಳಿಕೆ ನೀಡಿದವರು – ಬಧೋ ನಾಗು ಕಾಲೇಕರ (ಉಳವಿ ಕ್ಷೇತ್ರದ ಗ್ರಾಮಪಂಚಾಯತಿ ಸದಸ್ಯ) ಚಂದ್ರಾಳಿ ಗ್ರಾಮ, ಜೋಯಿಡಾ ತಾಲೂಕು.

೨೫. ಕ್ಷೇತ್ರಕಾರ್ಯದ ಮಾಹಿತಿ

೨೬. ಕರ್ನಾಟಕ ಹಿಂದುಳಿದ ವರ್ಗ ಆಯೋಗ, ೧೯೮೧.

೨೭. ಕಿಟೆಲ್, 'ಕನ್ನಡ–ಇಂಗ್ಲೀಷ್' ನಿಘಂಟು, ಸಂ. ೧, ಪು. ೧೬೬, ೧೯೬೮.

28. Nanjundayya and Iyyar, 'The Mysore Tribes and Castes', Vol. II, p. 74, 1928.

29. Fuch Stephen, 'The Aboriginal Tribes of India', p. 42, 1973.

೩೦. ಕ್ಷೇತ್ರಕಾರ್ಯ – ತಿಳುವಳಿಕೆ ನೀಡಿದವರು – ಮಾಣಿ ರಾಮಾ ಕುಣಬಿ, ಯಲ್ಲಾಪೂರ.

೩೧. ಕ್ಷೇತ್ರಕಾರ್ಯ – ತಿಳುವಳಿಕೆ ನೀಡಿದವರು – ನಿಂಗಣ್ಣ ತಮ್ಮಯ್ಯ ಕುಣಬಿ, ಅಂಕೋಲಾ.

೩೨. ಕ್ಷೇತ್ರಕಾರ್ಯ – ತಿಳುವಳಿಕೆ ನೀಡಿದವರು – ಕೃಷ್ಣ ಗಾಂವಕರ, ಕಾರವಾರ.

33. Fuch Stephen, 'The Aboriginal Tribes of India', Mac Millan, p. 37, 1973.

34. Rajyalakshmi P. 'Tribal Food Habits', 1991.

35. Shashi Bairathi, 'Tribal Culture Economy and Health', p. 113, 1991.

೩೬. ಅದೇ ಲೇಖಕರ ಪು. ೧೦೫.

37. Thurston, 'Caste and Tribes of South India', Government Press, Madras, P. 100, 1909.

38. Anantha Krishna Iyer L.K. 'The Mysore Tribals and Castes', Vol. I, p. 257, 1935.

39. Joshi Eshwara N. 'Dakshina Kannadada Kudubiyaru', p. 38, 1983.

40. Nayak Sridhar P. 'Nagareekatheya Naduve Nelesiyu Evaradu Vichitra Nadavalike', p. 25, 1982.

41. Horskovits Melville J. 'Cultural Anthropology', p. 156, 1974.

೪೨. ಕ್ಷೇತ್ರ ಕಾರ್ಯದ ಮಾಹಿತಿ.

43. P. Sarokhen 'Sociological Theories of Today', p. 15, 1966.

44. Kochar and Pandya 'Modernization and Social Change', p. 11, 1992.

೪೫. ಕ್ಷೇತ್ರಕಾರ್ಯದ ತಿಳುವಳಿಕೆ ನೀಡಿದವರು – ಶ್ರೀ ಸುಭಾಷ ಗಾವಡಾ ಕುಂಬಾರವಾಡ, ಜೋಯಿಡಾ.
೪೬. ಕ್ಷೇತ್ರಕಾರ್ಯದ ತಿಳುವಳಿಕೆ ನೀಡಿದವರು – ಶ್ರೀಮತಿ ರುಕ್ಮಿಣಿ ಬಿಕ್ಕು ಕುಣಬಿ, ಆರೆಬೈಲ್, ಯಲ್ಲಾಪುರ.
೪೭. ಕ್ಷೇತ್ರಕಾರ್ಯದ ತಿಳುವಳಿಕೆ ನೀಡಿದವರು – ಶ್ರೀ ಬಿಕ್ಕು ಕುಪ್ಪ ಕುಣಬಿ, ಕೋಟೆಮನೆ, ಯಲ್ಲಾಪುರ.
48. Vidyarthi and Rai B.K. 'The Tribal Culture of India', pp. 163-164, 1977.
೪೯. ಅದೇ ಲೇಖಕರು, ಪು. ೧೮೮.
೫೦. ಕ್ಷೇತ್ರಕಾರ್ಯದ – 'ವ್ಯಕ್ತಿ ಅಧ್ಯಯನ ವಿಧಾನ' ಮಾಹಿತಿ.
೫೧. ಕ್ಷೇತ್ರಕಾರ್ಯದ – 'ಮನೆವಾರು ಸಮೀಕ್ಷೆ'
52. Vidyarthi and Rai B.K. 'The Tribal Culture of India', p. 280, 1977.
53. Majumdar D.N. and Madan T.N. 'An Introduction to Social Anthropology', P. 150, 1956.
54. Singh Yogendra 'Modernization of Indian Tradition', p. 78, 1986.
55. Durkheim Emile 'The Elementary Forms of Religious Life', p. 169, 1912.
55. Vidyarthi and Rai B.K. 'The Tribal Culture of India', p. 244, 1977.
57. Fuch Stephen, 'The Original Tribes', p. 68, 1973.
೫೮. ಕ್ಷೇತ್ರಕಾರ್ಯದ ತಿಳುವಳಿಕೆ ನೀಡಿದವರು – ರಾಮ, ಮಹಾದೇವ ಮಿರಾಶಿ, ಕುಂಡಲ, ಜೋಯಿಡಾ.
೫೯. ಬಿ.ಪಿ. ಮಹೇಂದ್ರಕುಮಾರ, 'ಬುಡಕಟ್ಟು ಅಧ್ಯಯನ' ಸಂಚಿಕೆ–೪.

## ಅಧ್ಯಾಯ ೫

# ಕುಣಬಿ ಸಮುದಾಯದ ಹೋರಾಟಗಳು ಮತ್ತು ಸಂಘಟನೆಗಳು

## ಅಧ್ಯಾಯ ೫

# ಕುಣಬಿ ಸಮುದಾಯದ ಹೋರಾಟಗಳು ಮತ್ತು ಸಂಘಟನೆಗಳು

ಭಾರತ ಜಾತ್ಯಾತೀತ ರಾಷ್ಟ್ರವೆಂದು ಘೋಷಿಸಿಕೊಂಡಿದ್ದರೂ ಇಂದು ಭಾರತದ ಸಣ್ಣ ಗ್ರಾಮದಿಂದ ಹಿಡಿದು ಪಾರ್ಲಿಮೆಂಟಿನವರೆಗೂ ರಾಜಕಾರಣ ಮಾಡುವವರು ಒಂದು ಸಮುದಾಯದಿಂದ ಬಲಿಷ್ಠರಿರಬೇಕು ಇಲ್ಲವೆ ಬಂಡವಾಳಶಾಹಿಗಳಾಗಿರಬೇಕು. ಎರಡೂ ಬಲಗಳಿಲ್ಲದವರು ರಾಜಕೀಯ ಪ್ರವೇಶ ಮಾಡದ ಸ್ಥಿತಿಗೆ ಈ ವ್ಯವಸ್ಥೆ ತಲುಪಿಬಿಟ್ಟಿದೆ.

ಇನ್ನು ಕೆಳವರ್ಗಗಳ ಸ್ಥಿತಿಯಂತು ತುಂಬಾ ಶೋಚನೀಯವಾಗಿದೆ. ರಾಜಕೀಯ ವ್ಯವಸ್ಥೆಯಲ್ಲಿ ಮೀಸಲಾತಿ ಸೌಲಭ್ಯ ಕಲ್ಪಿಸಿದ ತರುವಾಯ ಕೆಳ ಸಮುದಾಯಗಳಿಗೆ ರಾಜಕೀಯ ಪ್ರವೇಶ ಮಾಡಲು ಸಾಧ್ಯವಾಗಿದೆಯಾದರೂ ಅದರಲ್ಲಿ ಅಸಹಾಯಕರು ಮತ್ತು ಹಿಂದುಳಿದವರಿಗೆ ಇನ್ನೂ ಪ್ರವೇಶ ದೊರೆಯದಾಗಿದೆ. ಕೇವಲ ಆರ್ಥಿಕವಾಗಿ ಬಲಾಢ್ಯರಾದ ಮತ್ತು ಮುಂಗೈ ಜೋರಿರುವವರಿಗೆ ಮಾತ್ರ ಮೀಸಲಾತಿ ಅಡಿಯಲ್ಲಿ ರಾಜಕೀಯ ಪ್ರವೇಶ ಮಾಡಲು ಸಾಧ್ಯವಾಗಿದೆ. ಮುಖ್ಯವಾಗಿ ಅಲ್ಪಸಂಖ್ಯಾತರು ಅದರಲ್ಲಿ ಜಾತಿಯಿಂದ ಅಲ್ಪಸಂಖ್ಯಾತರಾದ ಹಿಂದುಳಿದ ವರ್ಗಗಳು ಇಂದು ರಾಜಕೀಯ ಸ್ಥಾನಮಾನಗಳನ್ನು ಗಳಿಸಿಕೊಳ್ಳುವುದು ಕನಸಿನ ಮಾತೇ ಆಗಿದೆ.

ಕುಣಬಿಯರದ್ದು ಒಂದು ವಿಶಿಷ್ಟ ಸಮುದಾಯ. ಅವರ ವಾಸಸ್ಥಳಗಳು ಕಾಡಿನ ಗರ್ಭದ ಅಲ್ಲೊಂದು ಇಲ್ಲೊಂದು ಕಡೆ, ಒಟ್ಟಾರೆ ಸೇರುವುದು ಹಬ್ಬ, ಜಾತ್ರೆ, ಮದುವೆ ಸಮಾರಂಭಗಳಲ್ಲಿ ಮಾತ್ರ, ಜೊತೆಗೆ ಅರೆಅಲೆಮಾರಿ ಪ್ರವೃತ್ತಿ ಈ ಎಲ್ಲಾ ಕಾರಣಗಳಿಂದ ಇವರಲ್ಲಿ ಸಂಘಟನೆಯೇ ಇರಲಿಲ್ಲ ಎನ್ನಬಹುದು. ಆದರೆ ಇತ್ತೀಚಿಗಿನ ವರ್ಷಗಳಲ್ಲಿ ಅಲ್ಲಲ್ಲಿ ಒದಗಿದ ಸಾರಿಗೆ ಸೌಲಭ್ಯ, ಸ್ವಯಂಸೇವಾ ಸಂಸ್ಥೆಗಳ ಪ್ರಭಾವ ಹಾಗೂ ಅಲ್ಪ ಪ್ರಮಾಣದ ಶಿಕ್ಷಣ ಅವರಲ್ಲಿ ಎಚ್ಚರವನ್ನುಂಟು ಮಾಡಿದೆ. 'ಗ್ರೀನ್ ಇಂಡಿಯಾ' ಎಂಬ ಸ್ವಯಂ ಸೇವಾ ಸಂಸ್ಥೆ ತನ್ನೆಲ್ಲ ವೈಚಾರಿಕ ಕಾರ್ಯಕ್ರಮಗಳ ಮೂಲಕ ಅವರಲ್ಲಿ ಸಂಘಟನೆಯ ಶಕ್ತಿಯನ್ನು ತುಂಬಿದೆ. ಇವೆಲ್ಲದರ ಜೊತೆಗೆ ದಿನೇ ದಿನೇ ಬರ್ಬರವಾಗುತ್ತಿರುವ ಬದುಕು ಹಾಗೂ ಆಡಳಿತದ ನಿರ್ಲಕ್ಷ್ಯಧೋರಣೆ ಅಭಿವೃದ್ಧಿ ಯೋಜನೆಗಳ ದುಃಸ್ಥಿತಿ ಮತ್ತು ರಾಜಕೀಯದ ಚದುರಂಗದಾಟ ಇವರು ಸಂಘಟನೆಗೊಳ್ಳಲೇಬೇಕಾದ ಅನಿವಾರ್ಯ ಪರಿಸ್ಥಿತಿಯನ್ನು ಉಂಟುಮಾಡಿದೆ. ಇವೆಲ್ಲದರ ಪರಿಣಾಮವಾಗಿ 'ಉತ್ತರ ಕನ್ನಡ ಜಿಲ್ಲಾ ಕುಣಬಿ ಸಂಘ' ಅಸ್ತಿತ್ವಕ್ಕೆ ಬಂದಿದೆ. ಈ ಸಂಘಕ್ಕೆ ಪೂರಕವಾಗಿ ನಿಂತಿರುವ 'ಉತ್ತರ ಕನ್ನಡ ಜಿಲ್ಲಾ ಬುಡಕಟ್ಟು ಅಭಿವ್ಯಕ್ತಿ ವೇದಿಕೆ' ಕುಣಬಿಯರ ಪ್ರತಿಭಟನೆಗಳಿಗೆ ಸಹಕಾರ ನೀಡುತ್ತದೆ.

ರಾಮ ಮನೋಹರ ಲೋಹಿಯಾ ರವರು ಭಾರತ ಸ್ವತಂತ್ರವಾದ ಕೆಲವೇ ವರ್ಷಗಳಲ್ಲಿ ಹೇಳಿದ ಮಾತುಗಳು ಹೀಗಿವೆ 'ರಾಜಕೀಯ ಪಕ್ಷಗಳಲ್ಲಿ ಅಧಿಕಾರದ ಹುದ್ದೆಗಳನ್ನು ಸೂಕ್ತ ಪ್ರಮಾಣದಲ್ಲಿ ನೀಡಬೇಕಾಗಿದೆ. ಸಮಿತಿಗಳನ್ನು ರಚಿಸುವಾಗ ಶೂದ್ರ, ಹರಿಜನ ಮತ್ತು ಬುಡಕಟ್ಟು ಸಮುದಾಯದವರಿಗೆ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡಬೇಕಾಗಿದೆ. ಅಗಸ, ಕ್ಷೌರಿಕ, ಗಾಣಿಗ, ಕಮ್ಮಾರ ಮತ್ತು ಇತರ ಹಿಂದುಳಿದ ಜಾತಿಗಳಲ್ಲಿ ನೂರಾರು ಸಮಸ್ಯೆಗಳಿವೆ. ಅವರ ಕೇರಿಗಳಿಗೆ ಒಳ್ಳೆಯ ರಸ್ತೆಗಳು ಆಗಬೇಕು, ಸುಲಭ ಬೆಲೆಗೆ ಕಚ್ಚಾವಸ್ತುಗಳು ದೊರೆಯಬೇಕು, ಪೋಲೀಸರ ದಬ್ಬಾಳಿಕೆ ನಿಲ್ಲಬೇಕು, ಇವರಿಗೆ ಎಲ್ಲಾ ಮೂಲಭೂತ ಸೌಲಭ್ಯಗಳನ್ನು ದೊರಕಿಸಿಕೊಟ್ಟು ಆ ಮೂಲಕ ಅವರ ವಿಶ್ವಾಸವನ್ನು ಗಳಿಸಿಕೊಂಡು ಈ ನತದೃಷ್ಟ ಸಮುದಾಯಗಳ (ಜಾತಿಗಳ) ಸಂಘಟನೆಯನ್ನು ರಾಜಕೀಯ ಕ್ಷೇತ್ರದೊಳಗೆ ತರುವುದರಿಂದ ಬಹುಜನ ಸಮಾಜ ರೂಪಿತವಾಗಬಲ್ಲದು'[1] ಎಂದು ತಿಳಿಸಿದ್ದಾರೆ.

ಇಂದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು ಮೀಸಲಾತಿ ಸೌಲಭ್ಯ ಪಡೆಯುತ್ತಿರುವುದರಿಂದ ಆ ಮೀಸಲಾತಿ ಅಡಿಯಲ್ಲಿ ಕೆಲವರಾದರೂ ರಾಜಕೀಯ ಸ್ಥಾನಮಾನಗಳನ್ನು ಗಳಿಸಿಕೊಳ್ಳುವಂತಾಗಿದೆ ಎಂಬುದು ನಿಜ. ಆದರೆ ಆ ಮೀಸಲಾತಿ ಸೌಲಭ್ಯವನ್ನು ಪಡೆಯುತ್ತಿರುವ ಬಹುತೇಕ ಜಾತಿಗಳಲ್ಲಿ ಕೆಲವೇ ಕೆಲವು ಜಾತಿಗಳು, ಜನರು ಮಾತ್ರ ರಾಜಕೀಯ ಪ್ರವೇಶ ಪಡೆದಿದ್ದಾರೆ. ಮೀಸಲಾತಿ ಸೌಲಭ್ಯ ಪಡೆಯುತ್ತಿರುವ ದುರ್ಬಲ ವರ್ಗಗಳು ರಾಜಕೀಯ ಮೀಸಲಾತಿ ಪಡೆಯುವುದು ಸಾಧ್ಯವಾಗುತ್ತಿಲ್ಲ. ಕೆಲವು ವರ್ಗಗಳಂತೂ ಮತದಾರರ ಪಟ್ಟಿಯಲ್ಲಿ ಸೇರಲೂ ಸಹ ಸಾಧ್ಯವಾಗದಂತಹ ಸ್ಥಿತಿ ಇದೆ.

ಬಹುತೇಕ ನಿರ್ಲಕ್ಷಿತ ಜಾತಿ ಬುಡಕಟ್ಟುಗಳು ಭಾರತದಲ್ಲಿ ಇನ್ನೂ ಇವೆ. ಅವುಗಳ ಕುರಿತು ಸರಕಾರ ಗಮನವನ್ನೇ ಹರಿಸುತ್ತಿಲ್ಲ. ಅಂತಹ ನಿರ್ಲಕ್ಷಿತ ಜಾತಿ ಬುಡಕಟ್ಟುಗಳು ಸ್ವತಃ ತಾವು ನಿರ್ಲಕ್ಷಿತರು ಎಂದು ಹೇಳಿಕೊಳ್ಳಲು ಸಾಧ್ಯವಾಗದಂತಹ ಅಸಾಯಕರಾಗಿದ್ದಾರೆ.

ಯಾವುದೇ ಸಮಾಜ ತೀರಾ ಅಭದ್ರತೆಯತ್ತ ಸಾಗಿದಾಗ ಅಥವಾ ನಿರಂತರ ಆತಂಕಗಳನ್ನು ಎದುರಿಸಿದಾಗ ಅನಿವಾರ್ಯವಾಗಿ ಪ್ರತಿಭಟನೆಯತ್ತ ಮುಖ ಮಾಡುತ್ತದೆ. ದಟ್ಟಾರಣ್ಯದ ಹಲವು ಕಡೆ ಚದುರಿದಂತೆ ವಾಸ ಮಾಡುವ ಕುಣಬಿ ಸಮುದಾಯದ ಸಂಘಟನೆ ಸುಲಭದ ಮಾತಲ್ಲ. ಆದರೆ ಅವರ ಅಸ್ತಿತ್ವದ ಉಳಿವಿಗಾಗಿ ಅದು ಅನಿವಾರ್ಯವಾಗಿತ್ತು. ಕೆಲವು ಪ್ರಗತಿಪರ ಸಂಘಟನೆಗಳ ಹಾಗೂ ಸಮಾಜ ಚಿಂತಕರ ಸಣ್ಣ ಒತ್ತಾಸೆಯೂ ಕಾರಣವಾಗಿ ಕುಣಬಿ ಸಮುದಾಯದಲ್ಲಿ ಸೌಮ್ಯ ಸ್ವರೂಪದ ಹೋರಾಟಗಳು ಆರಂಭವಾದವು. ತಮ್ಮ ಹಕ್ಕನ್ನು ಇನ್ನೊಬ್ಬರು ನೀಡುವ ದಾನ ಎಂದು ತಿಳಿಯುತ್ತಿದ್ದ ಮುಗ್ಧ ಕುಣಬಿ ಯುವಕರಲ್ಲಿ ಎಚ್ಚರದ ಬೆಳ್ಳಿ

ಕಿರಣಗಳು ಮೂಡಿವೆ. ದಿನಾಂಕ ೨೧-೦೨-೨೦೦೨ ರಲ್ಲಿ ವಿಜಯ ಕರ್ನಾಟಕ ದಿನಪತ್ರಿಕೆ ಪ್ರಕಟವಾದ ಲೇಖನ ಇಂಥ ಹೋರಾಟಗಳಿಗೆ ಒಂದು ಸಾಕ್ಷಿಯಂತಿದೆ.

**೫.೧ ಕುಮರಿ ಬೇಸಾಯಕ್ಕೆ ನಡೆದ ಹೋರಾಟಗಳು**

'ಬೆಟ್ಟಗಳ ಇಳಿಜಾರಿನ ಪ್ರದೇಶಗಳಲ್ಲಿ ನೆಲವನ್ನು ಊಳದೆ ಯಾವುದೇ ತರಹದ ನೇಗಿಲಿನಂತಹ ಸಲಕರಣೆಗಳನ್ನು ಭೂಮಿಯ ಎದೆಗೆ ಚುಚ್ಚದೇ ನೇರವಾಗಿ ರಾಗಿ, ನವಣೆ, ಸಜ್ಜೆಗಳನ್ನು ಮಳೆಗಾಲದಲ್ಲಿ ಚೆಲ್ಲಿ ಬೇರೆ ವಿಧದ ಇತರ ಕಳೆಗಳೊಂದಿಗೆ ಸಹಜವಾಗಿ ನೈಸರ್ಗಿಕವಾಗಿ ಬೆಳೆಯುವ ವಿಶಿಷ್ಟ ಬೇಸಾಯವೇ ಕುಮರಿ ಬೇಸಾಯ'.[೨]

ಉತ್ತರ ಕನ್ನಡದ ಕನ್ನಡ ಜಿಲ್ಲೆಯ ಕುಣಬಿಗಳು ಈ ಬೇಸಾಯವನ್ನು ರೂಢಿಸಿಕೊಂಡಿರುವರು. ಜೋಯಿಡಾ ತಾಲೂಕಿನ ವಾಸವಾಗಿರುವ ಕುಣಬಿಗಳೇ ಹೆಚ್ಚಾಗಿ ಈ ಬೇಸಾಯವನ್ನು ಹೊಂದಿರುವರು. ಹೀಗೆ ಒಂದು ಅಂದಾಜಿನ ಪ್ರಕಾರ ಇಡೀ ಜೋಯಿಡಾ ತಾಲೂಕಿನಲ್ಲಿ ಸುಮಾರು ೮೦೦೦ ಎಕರೆ ಜಮೀನು ಕುಮರಿ ಬೇಸಾಯಕ್ಕೊಳಪಟ್ಟಿದೆ. ಇದರಲ್ಲಿ ಕುಂಡಳ ಗ್ರಾಮದ್ದೇ ಮೇಲುಗೈ. ಅಲ್ಲಿ ೮೦೦ ಎಕರೆ ಕುಂಬರಿ ಇದೆ. ಅಣಸಿಯ ಭಾಗದಲ್ಲಿ ೪೦೦ ಎಕರೆ, ವರಂಜೋಲ್ ಭಾಗದಲ್ಲಿ ३೦೦ ಎಕರೆ, ಪಾಲ್ಡಿ ಭಾಗದಲ್ಲಿ ೪೦೦ ಎಕರೆ, ಅನುಮೋಡ ಭಾಗದಲ್ಲಿ ೧೦೦ ಎಕರೆ, ಮೂಡಿಯೇ ಭಾಗದಲ್ಲಿ ೫೦ ಎಕರೆ, ದೂಧಮೊಳೆ ಭಾಗದಲ್ಲಿ ೮೦ ಎಕರೆ, ಡಿಗ್ಗಿ ಭಾಗದಲ್ಲಿ ೧೦೦ ಎಕರೆ ಹೀಗೆ ಪ್ರತಿ ಹಳ್ಳಿಗೆ ಕನಿಷ್ಟ ೫೦ ರಿಂದ ೧೦೦ ಎಕರೆಯಂತೆ ಒಟ್ಟು ೮೦೦೦ ಎಕರೆ ಭಾಗದಲ್ಲಿ ಜೋಯಿಡಾ ರೈತರು ಕುಮರಿ ಬೇಸಾಯ ನಡೆಸಿಕೊಂಡು ಬರುತ್ತಿದ್ದಾರೆ. ಇಂಥ ವಿಶಿಷ್ಟ, ಕುಣಬಿ ಸಮುದಾಯ ಮಾತ್ರ ನಡೆಸಿಕೊಂಡು ಬರುವ ಬೇಸಾಯ ಪದ್ಧತಿಗೆ ಸರಕಾರದಿಂದ ಪ್ರತಿಬಂಧಗಳ ಬಗೆಗೆ ಅಲ್ಲಲ್ಲಿ ತಮ್ಮ ಬೇಸಾಯ ಪದ್ಧತಿಯನ್ನು ಉಳಿಸಿಕೊಳ್ಳಲು ಹೋರಾಟಗಳು ಈ ಸಮುದಾಯಗಳಲ್ಲಿ ಆರಂಭವಾದವು.

೧೯೮೭ ರಿಂದಲೂ ಜೋಯಿಡಾದ ಕೆಲವು ಭಾಗದ ರೈತರು ಮತ್ತು ಕೆಲವು ರಾಜಕೀಯ ಮುಖಂಡರೂ ಕುಮರಿ ಹಕ್ಕಿಗಾಗಿ ಪ್ರತಿಭಟಿಸುತ್ತಲೇ ಬಂದಿದ್ದಾರೆ, ಆದರೆ ಅವರೆಲ್ಲರ ಹೋರಾಟಗಳು ಮಾಹಿತಿರಹಿತ ವಿಕೇಂದ್ರಿಕೃತ ಪ್ರತ್ಯೇಕ ಸಂಘಟನೆಗಳಾಗಿದ್ದವು. 'ಕುಮರಿ ಹಕ್ಕಲ ಹೋರಾಟ ಸಮಿತಿ, ಜೋಯಿಡಾ' ಎಂಬ ಹೆಸರಿನಲ್ಲಿ ಸಮಿತಿಯೊಂದನ್ನು ರಚಿಸಿಕೊಂಡು ನಿರಂತರ ಹೋರಾಟದಲ್ಲಿ ತೊಡಗಿವೆ. ೧೯೮೭ ರಲ್ಲಿ ಈಗಿನ ಹಾಲಿ ತಾ.ಪ. ಅಧ್ಯಕ್ಷ ಕೃಷ್ಣ ದೇಸಾಯಿಯ ಅಧ್ಯಕ್ಷತೆಯಲ್ಲಿ ಕುಮರಿ ಬೇಸಾಯಗಾರರಿಂದ ಸಂಘಟನೆಗೊಂಡು ಹೋರಾಟ ಪ್ರಾರಂಭವಾಗಿದ್ದರೂ, ತಾಲೂಕಿನ ಪೂರ್ಣ ವ್ಯಾಪ್ತಿಗೆ ಒಳಪಡದ ಕಾರಣ ಗುರಿ ತಲುಪಲಾಗಲಿಲ್ಲ. ೧೯೯೨ ರಲ್ಲಿ ಹಾಗೂ ೧೯೯೪ ರಲ್ಲಿ ಆಗಿನ ರಾಜಕೀಯ ಧುರೀಣ ನಾಗೋಡ

ದೇಸಾಯಿಯವರ ಮುಂಚೂಣಿಯಲ್ಲಿ ಅನಮೋಡ್‌ದಲ್ಲಿ ಆಗಿನ ಸಿ.ಡಿ.ಎಫ್. ಮಲ್ಲರೆಡ್ಡಿಯವರನ್ನು ಕರೆಸಿ ಚಳುವಳಿ ಮಾಡಿದ್ದಾರೆ. ಆಗ ಆಗಮಿಸಿದ್ದ ಮಲ್ಲರೆಡ್ಡಿಯವರು ಜನರ ಪ್ರಶ್ನೆಗೆ ಕುಮರಿ ಜಾಗವನ್ನು ನಾವೆಲ್ಲಿ ಕಸಿದುಕೊಂಡಿದ್ದೇವೆಂದು ಮರುಪ್ರಶ್ನೆ ಹಾಕಿದ್ದನ್ನು ಜನರು ಈಗಲೂ ಜ್ಞಾಪಿಸಿಕೊಳ್ಳುತ್ತಾರೆ. ಈ ಬಗ್ಗೆ ಕೊನೆಯ ಪ್ರಯತ್ನ ಮತ್ತು ಹೋರಾಟವನ್ನು ನಡೆಸಿದರೂ ಜೋಯಿಡಾದ ಹಿಂದುಳಿದವರಿಗಾಗಿ ದುಡಿದ ವಿಶಿಷ್ಟ ವ್ಯಕ್ತಿತ್ವದ ದಿ. ವಸಂತ ಆಸ್ನೋಟಿಕರವರು. ೧೯೯೯ರಲ್ಲಿ ತಿನ್ನಘಾಟನಲ್ಲಿ ಡಿ.ಎಫ್.ಓ. ಮಾಲಖೇಡರವರೊಂದಿಗೆ ದೀರ್ಘವಾಗಿ ಚರ್ಚಿಸಿ ಮಾಹಿತಿಗಳನ್ನು ಪಡೆದುಕೊಂಡು ಕುಮರಿ ಜಾಗ ಬಿಟ್ಟು ಕೊಡಲು ಆದೇಶಿಸಿದ್ದರೂ.

೧೯೮೬ ರಿಂದಲೂ ಕೈಗೆ ನಿಲುಕದ ಕುಮರಿ ಕೈಬಿಟ್ಟಿತೆಂದು ನಿರಾಶರಾಗಿದ್ದ ಕುಣಬಿ ಜನರ ಆಸೆಗೆ ಚಿಗುರೊಡೆದ ವಿಚಾರವೆಂದರೆ ಮಾಜಿ ಬೃಹತ ಮತ್ತು ಮಧ್ಯಮ ಕೈಗಾರಿಕೆ ಸಚಿವರಾದ ಸನ್ಮಾನ್ಯ ಶ್ರೀ ಆರ್.ವ್ಹಿ. ದೇಶಪಾಂಡೆಯವರು ೨೫-೦೧-೨೦೦೧ ರಂದು ಅನುಮೋಡದಲ್ಲಿ 'ಕುಮರಿಯ ಬಗ್ಗೆ ಅರಣ್ಯ ಇಲಾಖೆಯ ಬಗ್ಗೆ ಚರ್ಚೆ ಮಾಡಿದ್ದೇನೆ, ಕುಮರಿ ಜಾಗ ನಮ್ಮದೇ, ಇದರಿಂದ ವಂಚಿತರಾದ ರೈತರು ನಾಳೆಯಿಂದಲೇ ತಮ್ಮ ದಾಖಲೆಗಳ ಸಮೇತ ಸ್ಥಳೀಯ ವಲಯ ಅರಣ್ಯಾಧಿಕಾರಿ ಕಚೇರಿಗೆ ಅರ್ಜಿ ಸಲ್ಲಿಸಿಕೊಳ್ಳಿ' ಎಂಬ ಘೋಷಣೆ ಮಾಡಿದ್ದರು,ಇನ್ನು ಜಾರಿಗೆ ಬರದೆ ಹಾಗೇ ಇದೆ.

ಈ ಘೋಷಣೆಯಿಂದ ಜಾಗೃತಗೊಂಡ ಕುಮರಿ ವಂಚಿತ ಬಡರೈತರು ಸ್ಥಳೀಯ 'ಗಿರಿಜನ ಅಭಿವೃದ್ಧಿ ಸೇವಾ ಸಂಸ್ಥೆಯಾದ ಗ್ರೀನ್ ಇಂಡಿಯಾ' ಸಹಾಯದೊಂದಿಗೆ ಕುಮರಿ ಒಡೆತನದ ಪಟ್ಟಿಯನ್ನು ದಾಖಲೆಗಳ ಸಮೇತ ಪ್ರತಿಜ್ಞಾ ಪತ್ರದ ಮೂಲಕ ಆರ್.ಎಫ್.ಓ. ಕಚೇರಿಗೆ ಸಲ್ಲಿಸಿದ್ದಾರೆ. ಅಲ್ಲಿಂದ ಇಲ್ಲಿಗೆ ೧೦ ವರ್ಷ ಸಂದಿದೆ, ಯಾವುದೇ ಬದಲಾವಣೆಯಾಗಿಲ್ಲ, ಈ ಬಗ್ಗೆ ಸಂಬಂಧಪಟ್ಟ ಆರ್.ಎಫ್.ಓ. ಅವರುಗಳನ್ನು ವಿಚಾರಿಸಲಾಗಿ ನಮಗ್ಯಾರಿಗೂ ಈ ವಿಚಾರದ ಬಗ್ಗೆ ಯಾವುದೇ ಆದೇಶಗಳು ಬಂದಿಲ್ಲ ಎಂದು ತಿಳಿಸಿದರು. ಕಳೆದ ೧೮ ವರ್ಷಗಳಿಂದ ರೋಸಿಹೋದ ಕುಮರಿ ವಂಚಿತ, ನೊಂದ ರೈತರುಗಳು 'ಗ್ರೀನ್ ಇಂಡಿಯಾ ಸಂಸ್ಥೆಯ' ಸಹಯೋಗದೊಂದಿಗೆ ಒಟ್ಟಿಗೆ ಸೇರಿ ಕುಮರಿ ಹಕ್ಕಲ ಹೋರಾಟ ಸಮಿತಿಯನ್ನು ರಚಿಸಿಕೊಂಡಿದ್ದಾರೆ. ೨೯ನೇ ನವ್ಹೆಂಬರ ೨೦೦೧ ರಂದು ಸುಮಾರು ೨-೩ ಸಾವಿರ ಜನರು ಒಟ್ಟಿಗೆ ಸೇರಿ ಬೃಹತ್ ಮೆರವಣಿಗೆ ನಡೆಸಿ ವಿಶಿಷ್ಟ ರೀತಿಯ ಮುಖಾಮುಖಿ ಕಾರ್ಯಕ್ರಮ ಹಮ್ಮಿಕೊಳ್ಳುವುದರ ಮೂಲಕ ಕುಮರಿ ಚಳುವಳಿಗೆ ಹೊಸ ಚಾಲನೆ ಮತ್ತು ಜಿಲ್ಲಾ ವ್ಯಾಪ್ತಿಯಾದ್ಯಂತ ಕುಮರಿ ಹಕ್ಕಿಗಾಗಿ ಚಳುವಳಿ ತೀವ್ರ ಹೋರಾಟಗಳು ಈ ಸಮುದಾಯದಲ್ಲಿ ಆರಂಭವಾದವು.

ನವ್ಹೆಂಬರ ೨೯ರ ಮುಖಾಮುಖಿ ಕಾರ್ಯಕ್ರಮದ ಚರ್ಚೆಯ ತೀರ್ಮಾನದಂತೆ ಹೋರಾಟ ಸಮಿತಿಯ ಪದಾಧಿಕಾರಿಗಳು, ಗ್ರೀನ್ ಇಂಡಿಯಾ ಸಂಸ್ಥೆ ಮತ್ತು ಜನ ಪ್ರತಿನಿಧಿಗಳು ಡಿಸೆಂಬರ ೪ ರಂದು ಜಿಲ್ಲಾಧಿಕಾರಿಗಳೊಟ್ಟಿಗೆ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ವಿಶೇಷ ಸಭೆ ಇಟ್ಟುಕೊಳ್ಳಲಾಗಿತ್ತು. ಸಚಿವರು ಮತ್ತು ಅರಣ್ಯ ಇಲಾಖೆಯ ಪರವಾಗಿ ಆಗಮಿಸಿದ್ದ ಹಳಿಯಾಳದ ಡಿ.ಎಫ್.ಓ. ಮಾಲಖೇಡ್‌ರವರು ಅಂತಿಮವಾಗಿ ಕುಮರಿ ಜಮೀನು ರೈತರುಗಳದ್ದೇ, ಅದನ್ನು ಅವರಿಗೆ ಬಿಟ್ಟುಕೊಡಬೇಕು. ಹೋರಾಟ ಸಮಿತಿ ಮತ್ತು ಗ್ರೀನ್ ಇಂಡಿಯಾ ಕುಮರಿ ವಂಚಿತರ ಸರ್ವೆ ನಂಬರ ಯಾರ‍್ಯಾರು ಕುಮರಿ ಫಲಾನುಭವಿಗಳು ಇರುವರು ಅವರ ಕುಮರಿ ಪಟ್ಟಿಯನ್ನು ಪ್ರತಿಜ್ಞಾ ಪತ್ರದ ಮೂಲಕ ಸಲ್ಲಿಸಬೇಕೆಂದೂ, ಅದರ ಪ್ರಕಾರ ೮೦೦೦ ಸಾವಿರ ಎಕರೆ ಕುಮರಿ ಜಮೀನನ್ನು ಜನಗಳಿಗೆ ಬಿಟ್ಟಕೊಡಲಾಗುವುದೆಂದು ತೀರ್ಮಾನ ಮಾಡಲಾಯಿತು.

೨೪ನೇ ಡಿಸೆಂಬರ ೨೦೦೧ ರಂದು ಮಾಜಿ ಸಂಸದ ಸದಸ್ಯ ಹಾಗೂ ರಾಷ್ಟ್ರೀಯ ಭಾ.ಜ.ಪ. ಯುವಮೋರ್ಚಾ ಅಧ್ಯಕ್ಷ ಅಣಸಿಯಲ್ಲಿ ಕುಮರಿ ಹಕ್ಕಿಗಾಗಿ ಮತ್ತೊಂದು ಹೋರಾಟವನ್ನು ಹಮ್ಮಿಕೊಳ್ಳಲಾಗಿತ್ತು.

೧೯೮೬ ರಿಂದ ಅರಣ್ಯ ಇಲಾಖೆ ಸಾಂಪ್ರದಾಯಿಕ ಕುಮರಿ ಜಾಗೆ, ಆಹಾರ ಮತ್ತು ಸಂಸ್ಕೃತಿಯನ್ನು ಕಸಿದುಕೊಂಡಿದೆ. ೧೮೮೯ ರಲ್ಲಿ ಬ್ರಿಟೀಷ್ ಸರಕಾರದಿಂದ ಕಾನೂನು ಬದ್ಧವಾಗಿ ಮಾನ್ಯತೆ ಪಡೆದುಕೊಂಡಿದೆ. ಅರಣ್ಯ ಇಲಾಖೆಯ ಕಾಯ್ದೆ ಪ್ರಕಾರ ೧೯೭೮ರೊಳಗೆ ಅತಿಕ್ರಮಣ ಮಾಡಿದ ಜಮೀನನ್ನು ರೈತರಿಗೆ ಬಿಟ್ಟುಕೊಡಬೇಕೆಂಬ ಆದೇಶದಂತೆ ಕುಮರಿ ಜಮೀನನ್ನು ಕುಣಬಿಯರಿಗೆ ಬಿಟ್ಟುಕೊಡದೇ ತುಂಬಾ ಅನ್ಯಾಯ ಮಾಡಿದೆ. ಈ ಬಗ್ಗೆ 'ಕುಮರಿ ಹಕ್ಕಲ ಹೋರಾಟ ಸಮಿತಿ, ಜೋಯಿಡಾ', 'ಗ್ರೀನ್ ಇಂಡಿಯಾ ಸಂಸ್ಥೆ' ಮತ್ತು ಜನಪ್ರತಿನಿಧಿಗಳ ಹೋರಾಟ ಸಮಿತಿಯ ಅಧ್ಯಕ್ಷರು ಚರ್ಚಿಸಿದರೂ ಇನ್ನೂವರೆಗೆ ಕುಂಬರಿ ಸಮಸ್ಯೆಯು ಹಾಗೇ ಇದೆ. ಇಷ್ಟೆಲ್ಲಾ ಆಸೆಗಳನ್ನು ಇಟ್ಟುಕೊಂಡಿದ್ದ ಕುಣಬಿಯರಿಗೆ ಯಾವುದೂ ಫಲಿಸಿಲ್ಲ, ಭೂಮಿ ಪಡೆಯಬೇಕೆಂಬ ಚೋಮನ ಕನಸು ಹಾಗೇ ಉಳಿದಿದೆ.

### ೫.೨ ಅರಣ್ಯ ಹಕ್ಕುಗಳ ಹೋರಾಟಗಳು

ಭಾರತ ಬಹುಸಂಸ್ಕೃತಿಯ ನೆಲೆಗಳ ಬೀಡು. ಆದ್ದರಿಂದ ವೈವಿಧ್ಯತೆಯನ್ನು ರೂಢಿಸಿಕೊಂಡು ಏಣಿ-ಶ್ರೇಣಿಯಿಂದ ಕೂಡಿದ ಸಾಮಾಜಿಕ ವ್ಯವಸ್ಥೆಯಾಗಿದೆ. ಈ ಹಿನ್ನೆಲೆಯಲ್ಲಿ ಅನೇಕ ಜಾತಿಗಳು, ಸಮುದಾಯಗಳು, ಆದಿವಾಸಿಗಳು, ತಮ್ಮದೇ ಆದ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಬದುಕನ್ನು ಸಾಗಿಸುತ್ತಾ ಬಂದಿವೆ. ಆದರೆ ಪ್ರಪಂಚದ ಲೌಕಿಕ-ಸವಲತ್ತುಗಳಿಂದ ವಂಚಿಸಲ್ಪಟ್ಟಿದ್ದರೂ ಸಹ ತಮ್ಮ ಬುಡಕಟ್ಟುಗಳು ತಮ್ಮ ಜಾಣತನದಿಂದ ಸಂಪ್ರದಾಯಗಳನ್ನು ಕಾಪಾಡಿಕೊಂಡು ಬರುವಲ್ಲಿ

ಪ್ರಯತ್ನಿಸುತ್ತಿವೆ. ಇತಿಹಾಸವನ್ನು ತೆರೆದು ನೋಡಿದಾಗ ಬುಡಕಟ್ಟುಗಳು ಹಾಗೂ ಶ್ರಮಿಕ ವರ್ಗಗಳು ತಮ್ಮ ಹುಟ್ಟುವಿಕೆಯಿಂದ ಪ್ರಸ್ತುತ ಕಂಪ್ಯೂಟರ್ ಕಾಲದವರೆಗೂ ಒಂದಲ್ಲಾ ಒಂದು ರೀತಿಯಲ್ಲಿ ಹೀನಾಯ ಸ್ಥಿತಿಯಲ್ಲಿವೆ. ಈ ಹಿನ್ನೆಲೆಯನ್ನು ನಾವು ನೋಡಿದಾಗ ಪುರಾತನ ಕಾಲದಿಂದ ಅನೇಕ ನಿಯಮಗಳು (ಕಾನೂನುಗಳು) ರೂಪಿತವಾಗಿರುವುದು ಧರ್ಮಶಾಸ್ತ್ರಗಳ ಮುಖಾಂತರವೇ ಎಂಬುದನ್ನು ನೋಡಬಹುದು. ಈ ರೀತಿಯಾಗಿ ರೂಪಿತವಾದ ನಿಯಮಗಳು (ಕಾನೂನುಗಳು) ನಮ್ಮ ಬುಡಕಟ್ಟುಗಳನ್ನು ತಮ್ಮ ದಬ್ಬಾಳಿಕೆಯ ಪ್ರಭಾವದಲ್ಲಿಟ್ಟುಕೊಂಡು ತಮ್ಮ ಜಮೀನ್ದಾರಿಕೆಯಲ್ಲಿ ದುಡಿಸಿಕೊಂಡು ಬಂದಿರುವುದನ್ನು ನೋಡಬಹುದು. ಅಂದರೆ ಯಾರು ಓದಬೇಕು? ಯಾರು ಹೋರಾಡಬೇಕು? ಯಾರು ವ್ಯಾಪಾರವನ್ನು ಮಾಡಬೇಕು? ಯಾರು ವ್ಯವಸಾಯ ಮಾಡಬೇಕು? ಎಂದು. ಆದರೆ ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಉಂಟಾದ ಅನೇಕ ರೂಪಾಂತರಗಳು ದೇಶದ ಬುಡಕಟ್ಟುಗಳಿಗೆ ಯಾವತ್ತೂ ಪೂರಕವಾಗಿರದೆ ವಿರೋದ್ಧಾತ್ಮಕವಾಗಿ -ರುವುದು ಸತ್ಯಸಂಗತಿಯಾಗಿದೆ. ಆದ್ದರಿಂದ ಕುಣಬಿ ಸಮುದಾಯವು ಕೂಡ ಇಂತಹ ಸಂದಿಗ್ನತೆಗೆ ಸಿಲುಕಿರುವುದನ್ನು ಕಾಣಬಹುದಾಗಿದೆ.

ಬ್ರಿಟೀಷರು ವ್ಯಾಪಾರಕ್ಕೆಂದು ಭಾರತಕ್ಕೆ ಬಂದ ತರುವಾಯ ಅವರೊಂದಿಗೆ ವಿವಿಧ ಉದ್ದಿಮೆಗಳು ಕಾಲಿರಿಸಿದವು. ಉದ್ದಿಮೆಗಳಿಗೆ ಮತ್ತು ಸಾಗಾಟಕ್ಕೆ ಸಹಾಯಕವಾಗಲೆಂದು ರೈಲು, ರಸ್ತೆಗಳು ಬಂದವು. ತರುವಾಯ ಅವರ ಆಡಳಿತದ ಬಿಗಿ ಹೆಚ್ಚತೊಡಗಿತು.

ಬ್ರಿಟೀಷ್ ಪ್ರಭುತ್ವ ತನ್ನ ಅತಿಯಾದ ಆಸೆಯಿಂದಾಗಿ ಜನ ಸಾಮಾನ್ಯರ ಬದುಕಿನೊಂದಿಗೆ ಆಟವಾಡಿತು. ಬ್ರಿಟೀಷರಿಗೆ ತಾವು ಎಲ್ಲಾ ತಿಳಿದವರು ತಮ್ಮನ್ನು ಮೀರಿಸುವವರು ಯಾರೂ ಇಲ್ಲ ಎಂಬ ದುರಹಂಕಾರ ಇತ್ತು. ಹೀಗಾಗಿ ಅವರ ಕಣ್ಣಿಗೆ ಜನಸಾಮಾನ್ಯರ ಬುಡಕಟ್ಟುಗಳ ಜೀವನ ರೀತಿ ಅರ್ಥವಾಗಲೇ ಇಲ್ಲ.

ಸಾಂಪ್ರದಾಯಿಕವಾಗಿ ಕುಣಬಿಗಳು ಅರಣ್ಯವಾಸಿಗಳಾಗಿದ್ದರು ಬಹಳ ಕಾಲದಿಂದ ಅರಣ್ಯವೇ ಅವರ ಜೀವನ ನಿರ್ವಹಣೆಯ ಆಧಾರವಾಗಿತ್ತು. ಅವರು ಚಿಕ್ಕಪುಟ್ಟ ಅರಣ್ಯ ಉತ್ಪನ್ನಗಳೆನಿಸಿದ ಹಣ್ಣು-ಹಂಪಲ, ಗಡ್ಡೆ-ಗೆಣಸು ಹಾಗೂ ಗಿಡಮೂಲಿಕೆ ಸಸ್ಯಗಳನ್ನು ಸಂಗ್ರಹಿಸುತ್ತಿದ್ದರು. ಇದರೊಟ್ಟಿಗೆ ಉರುವಲುಕಟ್ಟಿಗೆ, ಬಿದಿರು ಮೆಳೆ, ಅರಗು, ನಾರು, ಮೇಣ, ಜೇನುತುಪ್ಪ, ಔಷಧೀಯ ಸಸ್ಯಗಳು, ಗಿಡಬಳ್ಳಿಗಳು, ಹೂಬಳ್ಳಿ ಮುಂತಾದ ವಸ್ತುಗಳೂ ದೊರೆಯುತ್ತಿದ್ದವು. ಈ ರೀತಿ ಅರಣ್ಯ ಉತ್ಪನ್ನಗಳು ಕುಣಬಿಗಳಿಗೆ ಬಹುಮಟ್ಟಿಗೆ ಜೀವನ ನಿರ್ವಹಣೆಗೆ ಆಧಾರವಾಗಿದ್ದವು ಅವರು ಅರಣ್ಯಗಳಲ್ಲಿಯೇ ವಾಸಿಸುತ್ತಿದ್ದಾಗ ತಮ್ಮ ಜೀವನಾವಶ್ಯಕ ವಸ್ತುಗಳನ್ನು ಸರದಿಕೃಷಿ ಮತ್ತು ಆಹಾರ ಸಂಗ್ರಹಣೆಯಿಂದ ಪಡೆಯುತ್ತಿದ್ದರು.

ಅರಣ್ಯ ಸಂಪತ್ತಿನಿಂದಲೇ, ಕೃಷಿ ಉಪಕರಣ, ಗೃಹನಿರ್ಮಾಣ ವಸ್ತುಗಳು, ಉರುವಲು, ಸಂಗೀತ-ವಾದ್ಯ ನಿರ್ಮಾಣ ವಸ್ತುಗಳನ್ನು ಪಡೆಯುವರು. ಅರಣ್ಯದಲ್ಲಿ ಪ್ರಾಣಿ ಬೇಟೆಯಾಡಿ ಮಾಂಸಾಹಾರವನ್ನು ಪಡೆಯುತ್ತಿದ್ದರು.

ವಸಾಹತು ಆಡಳಿತ ಯಾವತ್ತು ಭಾರತವನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡಿತೋ ಅಂದಿನಿಂದ ಅರಣ್ಯವು ಆಸ್ತಿಯಾಗಿ ರೂಪಾಂತರಗೊಂಡಿತು. ಮಾರುಕಟ್ಟೆಯಲ್ಲಿ ಬಿಕರಿಯಾಗುವ 'ವಸ್ತು'ವಾಗಿ ಅರಣ್ಯ ಪರಿಭಾವಿಸಲ್ಪಟ್ಟಿತು. ವಸಾಹತುಶಾಹಿ ಆಳ್ವಿಕೆಯಲ್ಲಿ ಸಮುದಾಯಗಳ ಬದುಕಿನ ಭಾಗವಾಗಿದ್ದ ಅರಣ್ಯವು ಸರಕಾರದ ಖಾಸಗಿ ಆಸ್ತಿಯಾಗಿ ಬದಲಾಯಿತು. ಇದರ ಜೊತೆಗೆ ಸಮುದಾಯ ಮತ್ತು ಅರಣ್ಯಗಳ ನಡುವೆ ಇದ್ದ ಪಾರಂಪರಿಕ ಸಂಬಂಧಗಳಿಗೂ ಈ ಹಂತದಲ್ಲಿ ಸಂಚಕಾರ ಬಂದೊದಗಿತು. ಅರಣ್ಯವು ಕಂಪನಿ ಆಡಳಿತದ ಸಂದರ್ಭದಲ್ಲಿ ಉಪಭೋಗಕ್ಕೆ ಒಳಗಾಗತೊಡಗಿತು. ಅರಣ್ಯವು ವಸಾಹತು ಆಡಳಿತದ ವಿಸ್ತರಣೆಗೆ ಬಳಕೆಯಾಗತೊಡಗಿದ ಮೇಲೆ ಸಮುದಾಯ ಮತ್ತು ಅರಣ್ಯಗಳ ನಡುವಿನ ಪಾರಂಪರಿಕ ಸಂಬಂಧವು ಕ್ರಮೇಣ ನಶಿಸತೊಡಗಿತು. ಅದರಲ್ಲೂ ಅರಣ್ಯಗಳಲ್ಲಿ ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ ಅರಣ್ಯ ನೀತಿಗಳಿಂದ ಅತಂತ್ರ ಸ್ಥಿತಿಗೆ ತಳ್ಳಲ್ಪಟ್ಟಿತು. ಅರಣ್ಯವನ್ನು ಸರ್ವಸ್ವವೆಂದು ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ ಅರಣ್ಯನೀತಿಯಿಂದಾಗಿ ತಮ್ಮ ವಾಸದ ನೆಲೆಗಳಲ್ಲಿಯೇ ಅನ್ಯರಾಗುವ ಬಿಕ್ಕಟ್ಟನ್ನು ಎದುರಿಸಿದರು.

ಈ ಹಂತದಲ್ಲಿ ಅರಣ್ಯದಲ್ಲಿನ ಬುಡಕಟ್ಟುಗಳು ವಸಾಹತು ಆಡಳಿತದ ಈ ಕ್ರಮದ ವಿರುದ್ಧ ಬಂಡೆದ್ದವು. ಭಾರತದ ಬಹುಮುಖ್ಯ ಅರಣ್ಯಗಳ ಉಸ್ತುವಾರಿಯನ್ನು ವಿಶ್ವಬ್ಯಾಂಕ್ ನಂತಹ ಜಾಗತಿಕ ಸಂಸ್ಥೆಗಳು ವಹಿಸಿಕೊಂಡವು. ಜೊತೆಗೆ ಅರಣ್ಯ ಕಾಯ್ದೆಗಳೂ ಸಹ ಹೆಚ್ಚು ಬಿಗಿಯಾದವು. ಅದರಲ್ಲೂ ರಾಷ್ಟ್ರೀಯ ಉದ್ಯಾನಗಳ ಕುರಿತ ಕಾಯ್ದೆಯು ಅರಣ್ಯವನ್ನು ಅದರೊಳಗೆ ಜೀವಿಸುವ ಆದಿವಾಸಿಗಳಿಂದ ರಕ್ಷಿಸಬೇಕು. ರಾಷ್ಟ್ರೀಯ ಉದ್ಯಾನದೊಳಗೆ ಜನವಸತಿಗಳಿರಕೂಡದು ಎಂಬ ನಿಲುವನ್ನು ಉಗ್ರವಾಗಿ ಪ್ರತಿಪಾದಿಸಿತು. ಇದರಿಂದಾಗಿ ಆದಿವಾಸಿಗಳ ಬದುಕೇ ಅತಂತ್ರ ಸ್ಥಿತಿಗೆ ದೂಡಲ್ಪಟ್ಟಿತು. ಶತಮಾನಗಳ ಕಾಲ ತಾವು ಬದುಕಿ ಬಂದಿದ್ದ ಪರಿಸರವನ್ನು ಆದಿವಾಸಿಗಳು ಕಳೆದುಕೊಳ್ಳತೊಡಗಿದರು.

ಒಂದೆಡೆ ಸರಕಾರದ ಉದ್ದೇಶಿತ ಅರಣ್ಯ ಸಂರಕ್ಷಣೆ, ಇನ್ನೊಂದೆಡೆ ಅರಣ್ಯದಲ್ಲಿನ ಆದಿವಾಸಿಗಳ ಅಸ್ತಿತ್ವದ ಪ್ರಶ್ನೆ. ಅರಣ್ಯವನ್ನು ರಕ್ಷಿಸುವ ಮತ್ತು ಅಭಿವೃದ್ಧಿಪಡಿಸುವ ಸರಕಾರದ ಉದ್ದೇಶಗಳಿಗೆ ಮತ್ತು ಆದಿವಾಸಿಗಳ ಸಾಮಾಜಿಕ, ಆರ್ಥಿಕ ಬದುಕಿನ ಅಸ್ತಿತ್ವದ ಕುರಿತ ಬಿಕ್ಕಟ್ಟುಗಳಿಗೆ ಯಾವತ್ತೂ ಅವಲಂಬಿಸಿಕೊಂಡು ಬಂದ ಆದಿವಾಸಿಗಳು ರಾಷ್ಟ್ರೀಯ ಉದ್ಯಾನ ಕಾಯ್ದೆಯ

ಪ್ರಕಾರ ಅರಣ್ಯವನ್ನು ಯಾವ ಕಾರಣಗಳಿಗೂ ಬಳಸುವಂತಿಲ್ಲ. ಅರಣ್ಯದ ಉತ್ಪನ್ನಗಳನ್ನು ಸಂಗ್ರಹಿಸುವ, ಅದನ್ನು ಮಾರಾಟ ಮಾಡುವ ಆದಿವಾಸಿಗಳ ಪಾರಂಪರಿಕ ಹಕ್ಕುಗಳನ್ನು ರಾಷ್ಟ್ರೀಯ ಉದ್ಯಾನ ನೀತಿ ಕಿತ್ತುಕೊಂಡಿತು. ಅಷ್ಟೇ ಅಲ್ಲದೆ ಅರಣ್ಯದಲ್ಲಿ ಜನವಸತಿಗಳಿರಕೂಡದು ಎಂದು ಆದಿವಾಸಿಗಳನ್ನು ರಾಷ್ಟ್ರೀಯ ಉದ್ಯಾನಗಳಿಂದ ಒಕ್ಕಲೆಬ್ಬಿಸುವುದು ಸರ್ವೇಸಾಮಾನ್ಯ ಸಂಗತಿಯಾಯಿತು. ಕುಣಬಿಯರೇ ಹೆಚ್ಚು ವಾಸಿಸುವ ಪ್ರದೇಶದಲ್ಲಿ ಅಣಶಿ ನ್ಯಾಷನಲ್ ಪಾರ್ಕ್ ಸ್ಥಾಪಿಸುವ ಆದೇಶ ಹೊರಬೀಳುತ್ತಿದ್ದಂತೆ ಅರಣ್ಯ ಇಲಾಖೆ ವತಿಯಿಂದ ಕುಣಬಿಯರನ್ನು ಒಕ್ಕಲೆಬ್ಬಿಸುವ ಕಾರ್ಯಾಚರಣೆ ಬಿರುಸುಗೊಂಡಿತು. 'ನಾಗರಿಕ ಜಗತ್ತಿನಿಂದ' ದೂರವಿದ್ದ ಕಾಡನ್ನೇ ಆಶ್ರಯಿಸಿದ್ದ ಸಮುದಾಯಗಳು ಈ ಒಕ್ಕಲೆಬ್ಬಿಸುವಿಕೆಯಿಂದ ದಿಕ್ಕೆಟ್ಟು ಹೋದರು. ಆಗ ಕುಣಬಿ ಸಂಘದ ಕಾರ್ಯದರ್ಶಿಗಳಾದ ಮಹಾಬಳೇಶ್ವರ ಕಾಜೂಗಾರ ಅವರ ನೇತೃತ್ವದಲ್ಲಿ ಅಣಶಿ ನ್ಯಾಷನಲ್ ಪಾರ್ಕಿನ ಹೋರಾಟ ಸಮಿತಿ ರೂಪುಗೊಂಡಿತು, ಇದಕ್ಕೆ 'ಗ್ರೀನ್ ಇಂಡಿಯಾ ಸ್ವಯಂ ಸೇವಾ ಸಂಸ್ಥೆ' ಹೆಗಲಿಗೆ ಹೆಗಲು ಕೊಟ್ಟು ನಿಂತಿತು. ಸಮಿತಿಯ ನಿರಂತರ ಹೋರಾಟದ ಫಲವಾಗಿ ನೂರಾರು ಕುಟುಂಬಗಳ ಒಕ್ಕಲೆಬ್ಬಿಸುವ ಕಾರ್ಯ ನಿಂತಿತಲ್ಲದೇ, ಕುಣಬಿಯರು ಕಾಡಿನ ಶತ್ರುಗಳು ಬದಲಾಗಿ ಅದರ ಮಿತ್ರರು ಮತ್ತು ರಕ್ಷಕರು ಎಂಬುದನ್ನು ಮನಗಾಣಿಸಲಾಯಿತು. ಇಷ್ಟೆಲ್ಲ ಆದರೂ ನ್ಯಾಷನಲ್ ಪಾರ್ಕ್ ಪ್ರದೇಶದ ನಿವಾಸಿಗಳ ತಲೆಯ ಮೇಲೆ ತೂಗುಕತ್ತಿ ನೇತಾಡುತ್ತಲೇ ಇತ್ತು, ಆದರೆ ಇತ್ತೀಚೆಗಷ್ಟೇ ಜಾರಿಗೆ ಬಂದ ಪರಿಶಿಷ್ಟ ವರ್ಗಗಳು ಮತ್ತು ಇತರೆ ಪರಂಪರಾಗತ ಅರಣ್ಯವಾಸಿಗಳ (ಅರಣ್ಯ ಹಕ್ಕುಗಳ ಮಾನ್ಯತೆ) ಬಿಲ್, ೨೦೦೬ ರ ತಿದ್ದುಪಡಿಗಳು ಸಮಾಧಾನದ ಉಸಿರು ಬಿಡುವಂತೆ ಮಾಡಿವೆ. ಕುಣಬಿಗಳು ಈ ಅರಣ್ಯ ನೀತಿಯ ವಿರುದ್ಧ ಹೋರಾಟಗಳನ್ನು ಕೈಗೊಂಡರು.

ಈ ಪ್ರಬಂಧ ಸಿದ್ಧತೆಗಾಗಿ ಕ್ಷೇತ್ರಕಾರ್ಯ ನಡೆಸುತ್ತಿರುವ ೨೦೧೧ನೇ ವರ್ಷವೂ ಪರಿಸ್ಥಿತಿ ಯಥಾಸ್ಥಿತಿಯಲ್ಲಿ ಮುಂದುವರೆದಿದೆಯೇ ಹೊರತು ಒಂದು ಸಣ್ಣ ಆಶಾದಾಯಕ ಬೆಳವಣಿಗೆಯೂ ಆಗಿಲ್ಲ. ಕುಣಬಿಯರ ಭೂಮಿಯ ಕನಸು ಹಾಗೂ ಅರಣ್ಯದಲ್ಲಿ ಮತ್ತೆ ಸ್ವಚ್ಛಂದವಾಗಿ ಓಡಾಡುವ ಕನಸು ಎರಡೂ ಮಡಗಟ್ಟಿ ಕುಳಿತಿವೆ. ಅದು ಸ್ಫೋಟವಾಗಿ ಆಸ್ಫೋಟನೆಗೊಂಡರೆ ಆಶ್ಚರ್ಯವಲ್ಲ ಎಂಬ ಸ್ಥಿತಿಯೂ ನಿರ್ಮಾಣಗೊಂಡಿದೆ. ಈ ಸಂಬಂಧದಲ್ಲಿ ಸರಕಾರ ತಕ್ಷಣವೇ ಸ್ಥಳೀಯರನ್ನೊಳಗೊಂಡ ಉನ್ನತ ಸಮಿತಿಯೊಂದನ್ನು ರಚಿಸಿ ನಿಷ್ಪಕ್ಷಪಾತ ಕ್ರಮಕೈಗೊಳ್ಳುವ ಮೂಲಕ ಶೀಘ್ರವಾಗಿ ಕುಣಬಿಯರ ಈ ಸಮಸ್ಯೆಗಳನ್ನು ಬಗೆಹರಿಸುವ ಅಗತ್ಯವಿದೆ.

## ೫.೩ ಮೀಸಲಾತಿ ಚಳುವಳಿ

ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಇಳಿಜಾರಿಕೆ ಪ್ರದೇಶಗಳ ಕಾಡಿನ ಮಧ್ಯದಲ್ಲಿ ವಾಸಿಸುವವರು ಇವರಾಗಿದ್ದಾರೆ. ಈ ಸಮುದಾಯವು ಪೋರ್ಚುಗೀಸರ ದಾಳಿಯಿಂದ ಬೇಸತ್ತಿರುವುದರಿಂದ ಗೋವೆಯಿಂದ ವಲಸೆ ಬಂದು ಜೀವನವನ್ನು ಇಲ್ಲಿ ಮುಂದುವರಿಸಿವೆ. ಬುಡಕಟ್ಟು ಲಕ್ಷಣಗಳನ್ನು ಹೊಂದಿರುವ ಸಮುದಾಯ ಕುಣಬಿಯರು. ಕುಣಬಿ ಸಮುದಾಯವು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಶೈಕ್ಷಣಿಕವಾಗಿ ತೀರಾ ಹಿಂದುಳಿದ ಸಮುದಾಯವಾಗಿದೆ. ಕುಣಬಿಗಳ ಸಂಸ್ಕೃತಿಯು ನಡೆ-ನುಡಿ, ಆಚರಣೆ, ಜಾನಪದ, ಸಂಪ್ರದಾಯ ಎಲ್ಲಾ ದೃಷ್ಟಿಕೋನದಲ್ಲಿ ನೋಡಿದರೂ ಕೂಡ ನೂರಕ್ಕೆ ನೂರರಷ್ಟು ಬುಡಕಟ್ಟು ಸಂಸ್ಕೃತಿ ಹೊಂದಿದೆ. ಆದ್ದರಿಂದಲೇ ಪಕ್ಕದ ಗೋವಾ ರಾಜ್ಯದಲ್ಲಿ ೨೦೦೩ ಗೆಜೆಟ್ ೧೩-೧೪-೯೦ ಎಸ್.ಡಬ್ಲ್ಯು.ಡಿ., (ವಾಲ್ಯೂಮ್ ೩) ೧೯೦, ಪ್ರಕಾರ ಕುಣಬಿಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಕಾರವಾರ, ಯಲ್ಲಾಪುರ, ಹಳಿಯಾಳ, ಅಂಕೋಲಾ ತಾಲೂಕುಗಳಲ್ಲಿ ವಾಸಿಸುವ ಕುಣಬಿಯರ ಸಮಗ್ರ ಅಭಿವೃದ್ಧಿಗಾಗಿ ಮತ್ತು ಕುಣಬಿಯರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸುವ ಬಗ್ಗೆ ಕಳೆದ ೧೨ ವರ್ಷಗಳಿಂದ 'ಉತ್ತರ ಕನ್ನಡ ಜಿಲ್ಲಾ ಕುಣಬಿ ಸಂಘ', 'ಉತ್ತರ ಕನ್ನಡ ಜಿಲ್ಲಾ ಬುಡಕಟ್ಟು ಅಭಿವ್ಯಕ್ತಿ ವೇದಿಕೆ', ಸರಕಾರದ ಜೊತೆ ಹೋರಾಟ ಮಾಡುತ್ತಾ ಬಂದಿರುತ್ತವೆ.

ಆದರೆ ಬುಡಕಟ್ಟು (ಗಿರಿಜನ) ಸಮುದಾಯರ ಎಲ್ಲಾ ಗುಣಲಕ್ಷಣಗಳನ್ನು ಹೊಂದಿರುವ ಕುಣಬಿಯವರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸದೆ ಸರಕಾರವು ತುಂಬಾ ಅನ್ಯಾಯಮಾಡಿದೆ. ಇದಕ್ಕೆ ಮುಖ್ಯ ಕಾರಣ ಸರಿಯಾದ ಮಾರ್ಗದಲ್ಲಿ ಪ್ರಯತ್ನ ಇಲ್ಲದಿರುವುದು, ನಾಯಕತ್ವದ ಕೊರತೆ, ಜನಪ್ರತಿನಿಧಿಗಳ ತಾತ್ಸಾರ ಎಂದು ಕಾಣುತ್ತದೆ ಎಂದು ಕುಣಬಿ ಜನ ಹೇಳುವದು ಅವರ ಮನದಾಳದ ನೋವನ್ನು ಪ್ರತಿನಿಧಿಸುತ್ತದೆ.

ಪ್ರಾಚೀನ ಬುಡಕಟ್ಟುಗಳ ಅನೇಕ ಲಕ್ಷಣಗಳಲ್ಲಿ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರತಿನಿಧಿಸುತ್ತಿರುವ ತಮ್ಮ ಸಮುದಾಯವನ್ನು ಪರಿಶಿಷ್ಟ ಪಂಗಡವೆಂದು ಗುರುತಿಸಬೇಕೆಂಬುದು ಕುಣಬಿಗಳ ಒತ್ತಾಯ, ಧರಣಿ, ಸತ್ಯಾಗ್ರಹ, ಸಂವಾದ ಹಾಗೂ ಸಂಕೀರ್ಣಗಳ ಮೂಲಕ ಈ ವಿಚಾರವನ್ನು ಸರಕಾರದ ಮುಂದಿಟ್ಟು ಹೋರಾಟ ಮಾಡುತ್ತಿರುವ ಕುಣಬಿ ಸಮುದಾಯ ಇಂದಿಲ್ಲ ನಾಳೆ ಆ ಸೌಲಭ್ಯ ಪಡದೇ ತೀರುತ್ತೇವೆ ಎಂಬ ಆಶಾಭಾವನೆಯಲ್ಲಿದ್ದಾರೆ.

ವಾಸ್ತವವಾಗಿ ಕುಣಬಿ ಸಮುದಾಯ ಪರಿಶಿಷ್ಟ ವರ್ಗಕ್ಕೆ ಸೇರಬೇಕಾದ ಸಮಸ್ತ ಅರ್ಹತೆಗಳನ್ನು ಹೊಂದಿದೆ, ಆದರೆ ಸೇರಿಲ್ಲ. ಇದೀಗ ಗ್ರುಪ್ 'ಎ'ನಲ್ಲಿರುವ ಕುಣಬಿ ಸಮುದಾಯಕ್ಕೆ ನಿರ್ಧಿಷ್ಟ ಪಡಿಸಿದ ಸರಕಾರಿ ಸವಲತ್ತುಗಳು ಸಿಗಬೇಕು. ಗ್ರುಪ್ 'ಎ' ಗೆ ಮೀಸಲಾದ ಸರಕಾರಿ ಹುದ್ದೆಗಳನ್ನು ಕುಣಬಿಯರು ಪಡೆಯುವ ಸ್ಥಿತಿಯಲ್ಲಿಯೇ ಇಲ್ಲ. ಯಾಕೆಂದರೆ ಅಂತಹ ಶೈಕ್ಷಣಿಕ ಮಟ್ಟ ಅವರಲ್ಲಿಲ್ಲ. ಇನ್ನೂ ಸರಕಾರಿ ಸೌಲಭ್ಯಗಳೆಂದರೆ ಕೆಲವು ತರಬೇತಿ ಕಾರ್ಯಕ್ರಮಗಳಿಗಷ್ಟೆ ಅವು ಮೀಸಲಾಗಿವೆ. ಕರ್ನಾಟಕ ಸರಕಾರದ ಹಿಂದುಳಿದ ವರ್ಗಗಳ ಇಲಾಖೆ ನಿರ್ದಿಷ್ಟಪಡಿಸಿ ಅನುಷ್ಠಾನಗೊಳಿಸುತ್ತಿರುವ ಎಷ್ಟೋ ಯೋಜನೆಗಳು ಈ ನಿಬಿಡಾರಣ್ಯದ ಪ್ರದೇಶದಲ್ಲಿ ಇನ್ನೂ ಜಾರಿಯಾಗಿಲ್ಲ. ಕಾರ್ಪೆಂಟರಿ, ಟೇಲರಿಂಗ್, ಡ್ರೈವಿಂಗ್ ಹಾಗೂ ಕಂಪ್ಯೂಟರ್ ತರಬೇತಿಗಳಿಗೆ ಅವಕಾಶಗಳಿದ್ದರೂ ಅವುಗಳನ್ನು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳಿಸಿಲ್ಲ. ಕುಣಬಿಯರೇ ಹೇಳುವ ಪ್ರಕಾರ ನಾಲ್ಕು ವರ್ಷದ ಹಿಂದೆ ಸಮಾಜ ಕಲ್ಯಾಣ ಅಧಿಕಾರಿಗಳು ಅರ್ಹ ಫಲಾನುಭವಿಗಳನ್ನು ಪಟ್ಟಿ ಮಾಡಿ ಹೋದರು, ಆದರೆ ಇದುವರೆಗೂ ಅವುಗಳು ಲಭ್ಯವಾಗಲಿಲ್ಲ.

ಒಟ್ಟಾರೆಯಾಗಿ ಪ್ರವರ್ಗ–೧ರಲ್ಲಿ ಸಿಗಬೇಕಾದ ಯಾವ ಸೌಲಭ್ಯಗಳೂ ಈ ಸಮುದಾಯಕ್ಕೆ ಇನ್ನೂ ಸಿಕ್ಕಿಲ್ಲ. ಇದಕ್ಕೆ ಅಧಿಕಾರಶಾಹಿಗಳೆಷ್ಟು ಕಾರಣವೋ ಜನಪ್ರತಿನಿಧಿಗಳೂ ಅಷ್ಟೇ ಕಾರಣರಾಗಿದ್ದಾರೆ ಎಂದು ಹೇಳದೆ ವಿಧಿ ಇಲ್ಲ.

ದುರಂತವೆಂದರೆ ಅಲ್ಲಿನ ಜನಪ್ರತಿನಿಧಿಗಳಿಗೆ ಕುಣಬಿಯವರ ಬಗೆಗೆ ನಿರ್ಲಕ್ಷ್ಯಧೋರಣೆ ಇದೆ, ಗಂಭೀರವಾಗಿ ಪರಿಗಣಿಸಿಲ್ಲ. ಪ್ರಜಾಪ್ರಭುತ್ವದ ಈ ಓಟಿನ ವ್ಯವಸ್ಥೆಯಲ್ಲಿ ಅಲ್ಪಸಂಖ್ಯಾತ ಸಮುದಾಯಗಳ ಹಣೆಬರಹವೇ ಇದ್ದು, ಈ ಹಿನ್ನಲೆಯಲ್ಲಿ ಸಂವಿಧಾನಾತ್ಮಕವಾದ ಅರ್ಹ ಸೌಲಭ್ಯಗಳನ್ನು ಕಲ್ಪಿಸಬೇಕಾದದ್ದು ಆಡಳಿತದ ಕರ್ತವ್ಯ. ಅದರಲ್ಲಿಯೂ ಪರಿಶಿಷ್ಟ ವರ್ಗಕ್ಕೆ ಸೇರಬೇಕಾದ ಎಲ್ಲ ಅರ್ಹತೆಗಳು ಪಡೆದಿರುವ ಈ ಸಮುದಾಯವನ್ನು ಆ ಪಟ್ಟಿಗೆ ಸೇರಿಸುವ ಮೂಲಕ ಕೇಂದ್ರ ಸರಕಾರದ ಅಗಾದ ಪ್ರಮಾಣದ ವಿಶೇಷ ಸೌಲಭ್ಯಗಳು ಇವರಿಗೆ ಸಿಗುವಂತೆ ಮಾಡಬೇಕಾಗಿದೆ.

ಇಡೀ ಉತ್ತರ ಕನ್ನಡದಲ್ಲಿ ರೂಪುಗೊಂಡಿರುವ ರಾಷ್ಟ್ರೀಯ ಅಭಿವೃದ್ಧಿ ನೀತಿಗಳು ಹಾಗೂ ಅವುಗಳ ಅನುಷ್ಠಾನದ ಕಾರ್ಯವೈಖರಿ ಎಲ್ಲಾ ಸಮುದಾಯಗಳ ಸಂಘಟನೆಗೆ ದಾರಿಮಾಡಿಕೊಟ್ಟಿವೆ. ಅದೇ ದಾರಿಯನ್ನು ಕುಣಬಿಯರು ತುಳಿದಿದ್ದಾರೆ.

## ೫.೪ ಕುಣಬಿಯರ ಹೋರಾಟ ಮತ್ತು ಪ್ರತಿಭಟನೆಗಳು

### ಶಿಕ್ಷಣ ಸೌಲಭ್ಯಕ್ಕಾಗಿ ಹೋರಾಟ

ಕುಣಬಿ ಪ್ರದೇಶದಲ್ಲಿ ಶಾಲೆಗಳೇ ಅತ್ಯಂತ ವಿರಳ ಆದರೆ ಅವುಗಳಿಗೂ ಹಲವು ಕಡೆ ಶಿಕ್ಷಕರಿಲ್ಲ. ಅಂತಹ ಶಿಕ್ಷಕರಿಲ್ಲದ ಶಾಲೆಗಳಲ್ಲಿ ಕುಣಬಿಯವರೇ ನಾಡಹಬ್ಬ ಆಚರಿಸುವ ಮೂಲಕ ವಿನೂತನ ಪ್ರತಿಭಟನೆಗಳನ್ನು ನಡೆಸಿದ್ದಾರೆ. ಶಾಲೆಗಳ ಮೂಲ ಸೌಕರ್ಯ ಹಾಗೂ ಶಿಕ್ಷಕರಿಗಾಗಿ ಒತ್ತಾಯಿಸಿ ಧರಣಿ, ಮೆರವಣಿಗೆ ಹಾಗೂ ರಸ್ತೆ ರೋಕೋ ಚಳುವಳಿಗಳನ್ನು ನಡೆಸಿದ್ದಾರೆ.

### ದೌರ್ಜನ್ಯದ ವಿರುದ್ಧ ಹೋರಾಟ

ಕುಣಬಿಯರು ಸಾಮಾಜಿಕವಾಗಿ ತೀರಾ ಕೆಳಸ್ಥರದಲ್ಲೇನೂ ಇಲ್ಲ. ಅಸ್ಪೃಶ್ಯರಿಗಿರುವ ಸಾಮಾಜಿಕ ಅಪಮಾನಗಳು ಇವರಿಗಿಲ್ಲ, ಆದರೂ ಒಂದು ಸಣ್ಣ ಅಲ್ಪಸಂಖ್ಯಾತ ಸಮುದಾಯ ಹಾಗೂ ಕಾಡಿನ ವಾಸ ಇವರಲ್ಲಿ ಕೀಳರಿಮೆಯನ್ನು ಹುಟ್ಟಿಸಿದೆ. ತಮ್ಮ ಸುತ್ತ ಇರುವ ಭೂ ಮಾಲೀಕ ವರ್ಗವಾದ ಭಟ್ಟರು, ದೇಸಾಯರು (ಮರಾಠರು), ವಾಣಿ (ಶೆಟ್ಟರು), ಕೊಂಕಣಿ ವ್ಯಾಪಾರಿಗಳು ಮುಂತಾಗಿ ಇವರನ್ನು ಶೋಷಿಸುತ್ತಲೇ ಬಂದಿದ್ದಾರೆ. ಬಡ್ಡಿಗೆ ಹಣಕೊಟ್ಟು ತುಂಡು ಜಮೀನುಗಳನ್ನು ವಶಪಡಿಸಿಕೊಂಡಿರುವ ಪ್ರಕರಣಗಳೂ ಉಂಟು, ಜೀತದಾಳುಗಳನ್ನಾಗಿ ದುಡಿಸಿಕೊಂಡಿದ್ದೂ ಇದೆ. ಈಗಲೂ ಅನೇಕ ಕುಣಬಿಗಳು ಇವರ ಮನೆಯಲ್ಲಿ ವ್ಯವಸಾಯ ಮಾಡುತ್ತಿದ್ದಾರೆ. ಸಾಮಾಜಿಕವಾಗಿ ಅಲ್ಲದಿದ್ದರೂ ಆರ್ಥಿಕವಾಗಿ ತೀರಾ ಹಿಂದುಳಿದ ಈ ಸಮುದಾಯದ ಮೇಲೆ ನಿರಂತರವಾದ ದೌರ್ಜನ್ಯಗಳು ನಡೆದಿವೆ. ಕೊಲೆ ಮತ್ತು ಲೈಂಗಿಕ ದೌರ್ಜನ್ಯಗಳ ವಿರಳ ಪ್ರಕರಣಗಳು ನಡೆದಿವೆ. ೧೯೯೯ರಲ್ಲಿ ಒಬ್ಬ ಯುವತಿಯ ಕೊಲೆಯ ಸಂದರ್ಭದಲ್ಲಿ ಇವರೆಲ್ಲಾ ಒಟ್ಟಾದರು, ಒಗ್ಗಟ್ಟಿನ ಹೋರಾಟ ನಡೆಸಿದರು, ಧರಣಿ, ಸತ್ಯಾಗ್ರಹಗಳ ಮೂಲಕ ಮೇಲ್ವರ್ಗದ ಹಾಗೂ ಧನಿಕನಾದ ಅಪರಾಧಿಯನ್ನು ಜೈಲು ಸೇರಿಸುವಲ್ಲಿ ಕುಣಬಿಯರು ಯಶಸ್ವಿಯಾದರು. ಈ ಪ್ರಕರಣ ಅವರಲ್ಲಿ ಒಂದು ಆತ್ಮವಿಶ್ವಾಸವನ್ನು ಮೂಡಿಸಿತು, ಆನಂತರದಲ್ಲಿ ಯಾವುದೇ ದೌರ್ಜನ್ಯದ ವಿರುದ್ಧ ಕುಣಬಿಯರು ಧ್ವನಿ ಎತ್ತುತ್ತಿದ್ದಾರೆ ಅಂಥ ಎಚ್ಚರ ಅವರಲ್ಲಿ ಉಂಟಾಗಿದೆ.

## ೫.೫ ಕುಣಬಿಯರ ಸಂಘಟನೆಗಳು

ನಮ್ಮ ಹಿಂದಿನ ಚರಿತ್ರೆಯನ್ನಾಗಲೀ ಅಥವಾ ಪುರಾತನಯುಗವನ್ನಾಗಲೀ ನಾವು ಅವಲೋಕಿಸಿದಾಗ ನಮ್ಮ ಗಮನಕ್ಕೆ ಬರುವುದೇನೆಂದರೆ, ಸಮಾಜದಲ್ಲಿಯ ಸದಸ್ಯರ ನಡುವಿನ ವಿವಿಧ ರೀತಿಯ ಸಂಬಂಧಗಳನ್ನಾಗಲೀ ಅಥವಾ ಜಗಳಗಳನ್ನಾಗಲೀ ನಿಯಂತ್ರಿಸುವದಕೋಸ್ಕರ ಸಮಾಜವು ತನ್ನದೇ ಆದ ವಿಧಾನಗಳನ್ನು ಮತ್ತು ಪದ್ಧತಿಗಳನ್ನು ಅನುಸರಿಸುವುದನ್ನು

ಕಾಣುತ್ತೇವೆ. ಶಿಸ್ತು ಮತ್ತು ನ್ಯಾಯವನ್ನು ಕಾಪಾಡುವುದಕ್ಕೋಸ್ಕರ ವಿವಿಧ ಕಾನೂನುಗಳನ್ನು ಮತ್ತು ಶಿಕ್ಷೆಯ ವಿಧಾನಗಳನ್ನು ಜಾರಿಗೆ ತರಲಾಯಿತು. ಬುಡಕಟ್ಟು ಸಮಾಜವು ಸಹ ತನ್ನದೇ ಆದ ರಾಜಕೀಯ ಸಂಘಟನೆಯನ್ನು ಹೊಂದಿದೆ. ವಿದ್ಯಾರ್ಥಿ ಮತ್ತು ರಾಯ್ ಅವರು ಗ್ರಹಿಸಿದಂತೆ ಸಣ್ಣ ಸಣ್ಣ ಸಂಚಾರಿ ಬುಡಕಟ್ಟು ಗುಂಪುಗಳು ಕಾಡಿನಲ್ಲಿ ಬೇಟೆಯಾಡಿ ಜೀವಿಸುವ ಸಮುದಾಯದವರು. ಮತ್ತು ಕಾಡಿನಲ್ಲಿಯೇ ವಾಸಿಸುವ ಬುಡಕಟ್ಟು ಸಮುದಾಯದವರೂ ಸಹ ತಮ್ಮದೇ ಆದ ಒಂದು ರೀತಿಯ ಆಳ್ವಿಕೆಯನ್ನು ಹೊಂದಿರುವರು.

ಅವರ ಪ್ರಕಾರ ಬುಡಕಟ್ಟು ರಾಜಕೀಯ ಸಂಸ್ಥೆಗಳ ಮೂಲತಃ ಬಹಳ ಚಿಕ್ಕದಾಗಿವೆ. ಅವರ ಅಭಿಪ್ರಾಯದಂತೆ ಬುಡಕಟ್ಟು ಸಮಾಜವು ಮೂರು ರೀತಿಯ ಗುಣಗಳನ್ನು ಹೊಂದಿವೆ:

೧. ವಂಶಪರಂಪರೆಯ ಗುಂಪುಗಳ ಮೇಲೆ ಅವಲಂಭಿಸಿದ ರಾಜಕೀಯ ಸಂಘಗಳು

೨. ಗ್ರಾಮಗಳ ವಿಭಾಗಗಳ ಮೇಲೆ ಅಲವಂಭಿಸಿದ ರಾಜಕೀಯ ಸಂಘಗಳು ಮತ್ತು

೩. ಒಂದು ನಿರ್ಧಿಷ್ಟ ಪ್ರದೇಶಕ್ಕೆ ಸೇರಿದ ಗ್ರಾಮಗಳ ಗುಂಪುಗಳನ್ನು ಅವಲಂಭಿಸಿರುವ ರಾಜಕೀಯ ಸಂಘಗಳು.

ಮೇಲಿನ ಎಲ್ಲಾ ಗುಣಗಳನ್ನು ನಾವು ನಮ್ಮ ಕುಣಬಿಯರ ಪ್ರಸ್ತುತ ಅಧ್ಯಯನದಲ್ಲಿ ಕಾಣುತ್ತೇವೆ. ಕುಣಬಿಯರು ತಮ್ಮ ಪಂಗಡಗಳಲ್ಲಿ ತಮ್ಮದೇ ಆಡಳಿತ ಸಂಸ್ಥೆಯನ್ನು ಹೊಂದಿರುತ್ತಾರೆ, ಅವುಗಳನ್ನು ವಿಧ ವಿಧದ ಹೆಸರುಗಳಿಂದ ಕರೆಯುವರು. ಉದಾ: ಓಡೋ, ವಾಡಿ, ವಲ್ಯ, ವಲ್ಥುಲೆ, ಕೂಡುಕಟ್ಟು, ಇತ್ಯಾದಿ. ಇವುಗಳಲ್ಲಿ 'ಓಡೋ' ಹೆಚ್ಚು ಪ್ರಚಲಿತವಿದ್ದು ಜನಪ್ರಿಯ ಬಳಕೆಯಲ್ಲಿದೆ. ಓಡೋ ಕುಣಬಿ ಸಮಾಜದ ಒಂದು ಪ್ರಮುಖ ಸಾಮಾಜಿಕ ಸಂಸ್ಥೆಯಾಗಿದ್ದು, ಇದು ಅನೇಕ ಕುಟುಂಬ ಬಾಲಿ (ಗುಂಪು) ಅವಿಭಕ್ತ ಕುಟುಂಬ ಮತ್ತು ವಿಭಕ್ತ ಕುಟುಂಬಗಳನ್ನು ಒಳಗೊಂಡಿದೆ. ಇದು ಕುಣಬಿ ಸಮಾಜದ ರಾಜಕೀಯದ ಮುಖ್ಯ ವಿಭಾಗವೆಂದು ಹೇಳಬಹುದು. ಸಾಮಾನ್ಯವಾಗಿ ಗ್ರಾಮಮಟ್ಟದಲ್ಲಿ ಅಥವಾ ಗ್ರಾಮಗಳ ಒಂದು ಗುಂಪಿನ ಮಟ್ಟದಲ್ಲಿ ಕೆಲಸ ಮಾಡುತ್ತದೆ. ಪ್ರತಿ 'ಓಡೋ' ದಲ್ಲಿ ೧೦ ರಿಂದ ೨೫೦ ಕುಟುಂಬ ವ್ಯಾಪ್ತಿಯನ್ನು ಹೊಂದಿರುತ್ತದೆ, ಇದೀಗ ಸುಮಾರು ಜಿಲ್ಲಾದ್ಯಂತ ೪೦ ಓಡೋಗಳು ಕುಣಬಿ ಬುಡಕಟ್ಟು ಸಮುದಾಯದ ವಿವಿಧ ಹಳ್ಳಿಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಪ್ರತಿ ಕುಟುಂಬದ ಹಿರಿಯ ಪುರುಷ 'ಓಡೋ' ಘಟಕದ ಜವಾಬ್ದಾರಿಯುತ ಪ್ರತಿನಿಧಿಯಾಗಿರುತ್ತಾನೆ.

ಜಿಲ್ಲೆಯಲ್ಲಿ ಕುಣಬಿ ಸಮುದಾಯದವರು ಅನೇಕ 'ಓಡೋ'ಗಳಲ್ಲಿ ಹಂಚಿಹೋಗಿರುವರು. ವಂಶ ಪಾರಂಪರ್ಯವಾಗಿ ಪ್ರತಿ 'ಓಡೋ'ವಿಗೆ 'ಗುರಿಕಾರ' ಎನ್ನುವ ಮುಖ್ಯಸ್ಥನಿರುವನು. ಒಂದು ವೇಳೆ 'ಗುರಿಕಾರ'ನಿಗೆ ಗಂಡು ಸಂತಾನ ಇರದಿದ್ದಲ್ಲಿ ನೂತನ ಉತ್ತರಾಧಿಕಾರಿಯನ್ನು ಅವರದೇ

ಪಿತೃ ಸಂಬಂಧಿಗಳಲ್ಲಿ ಆಯ್ಕೆ ಮಾಡಲಾಗುವದು. ಈ ರೀತಿಯ ಘಟಕಕ್ಕೆ 'ಗುರಿಕಾರ' ಎಂಬ ಜನಪ್ರಿಯ ಹೆಸರಲ್ಲದೇ 'ಬುದ್ಯಂತಗಾರ', 'ವಡೆ ಬುದ್ಯಂತ', 'ಮಂಡಕಾರ', 'ಗಾವಗಾವಡೋ' ಅಥವಾ 'ಸಾವಚೆಗೌಡ' ಎಂದು ಹೆಸರಿಸಲಾಗುತ್ತದೆ.

'ಓಡೋ' ಸದಸ್ಯರ ಮೇಲೆ ಒಬ್ಬ ಸಾಮ್ರಾಟನಂತೆ 'ಗುರಿಕಾರನು' ಅಧಿಕಾರವನ್ನು ಹೊಂದಿರುವನು. ಆಡಳಿತ ಮಂಡಳಿಯು ಸೂಚಿಸುವ ಎಲ್ಲ ಕಾರ್ಯ ಚಟುವಟಿಕೆಗಳನ್ನು ಅವನು ಪೂರೈಸಬೇಕಾಗುತ್ತದೆ. 'ಗುರಿಕಾರ'ನ ಅಧ್ಯಕ್ಷತೆಯಲ್ಲಿ ಆಂತರಿಕ ದೂರು, ದುಃಖ ದುಮ್ಮಾನ ಹಾಗೂ ಸಮಸ್ಯೆಗಳನ್ನು ಚರ್ಚಿಸಲಾಗುತ್ತಿದೆ. 'ಗುರಿಕಾರ'ನಿಗೆ ಅಧೀನರಾಗಿ 'ರಾಯಭಾರಿ' ಮತ್ತು 'ಗದ್ಯ' ಎನ್ನುವ ಇಬ್ಬರು ಸಹಾಯಕರಿರುವರು. ಇವರು ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ 'ಗುರಿಕಾರ'ನಿಗೆ ಸಹಾಯ ಮಾಡುವರು. 'ಗುರಿಕಾರ'ನು ತನ್ನ ಪ್ರದೇಶ ವ್ಯಾಪ್ತಿಯಲ್ಲಿ ಬರುವ ಕುಣಬಿ ಮದುವೆಗಳಲ್ಲಿ ಉಪಸ್ಥಿತನಿರಬೇಕಾಗುತ್ತದೆ ಇಷ್ಟೇ ಅಲ್ಲದೆ ಶವಸಂಸ್ಕಾರ ಕಾರ್ಯಗಳಲ್ಲಿ ಉಪಸ್ಥಿತನಿರಬೇಕಾಗುತ್ತದೆ. ಅನಿವಾರ್ಯ ಕಾರಣಗಳಿಂದ 'ಗುರಿಕಾರ'ರು ಹಾಜರಾಗಲು ಸಾಧ್ಯವಾಗದಿದ್ದರೆ ಅವರ ಜಾಗದಲ್ಲಿ ಅವರ ಪ್ರತಿನಿಧಿಯಾಗಿ 'ರಾಯಭಾರಿ'ಯು ಹಾಜರಿರಬೇಕು. 'ಗುರಿಕಾರ'ರು ತಮ್ಮ 'ಓಡೋ' ವ್ಯಾಪ್ತಿಯಲ್ಲಿ ಸಾಮಾಜಿಕ ಭೇಟಿ ಸಮಾರಂಭ, ಹೋಳಿ ಹಬ್ಬದ ಸಮಯದಲ್ಲಿ, ಸಮೂಹ ನೃತ್ಯ ತಂಡದ ಪ್ರವಾಸ ಕಾರ್ಯಕ್ರಮದ ಮುಂದಾಳತ್ವವನ್ನು ವಹಿಸುವರು. ಕುಣಬಿ ಜನಜೀವನವು ಅವರ ಧರ್ಮ, ಧಾರ್ಮಿಕ ಪದ್ಧತಿಗಳು ಮತ್ತು ಪಾರಂಪರಿಕ ಆಚರಣೆಗಳ ಮೇಲೆ ಸಾಗುತ್ತವೆ. ಈ ಎಲ್ಲ ಧಾರ್ಮಿಕ ಆಚರಣೆಗಳು ಮತ್ತು ಧಾರ್ಮಿಕ ಪದ್ಧತಿಗಳು ಸರಿಯಾದ ರೀತಿಯಲ್ಲಿ ಆಚರಣೆಯಲ್ಲಿವೆ ಎಂದು ನೋಡಿಕೊಳ್ಳುವುದೇ 'ಓಡೋ'ದ ಕೆಲಸ. ಕಟ್ಟುಪಾಡುಗಳನ್ನು ಉಲ್ಲಂಘಿಸಿದವರನ್ನು ಶಿಕ್ಷಿಸುವ ಮೂಲಕ 'ಓಡೋ' ತನ್ನ ಅಧಿಕಾರವನ್ನು ಪ್ರತಿಪಾದಿಸುತ್ತದೆ.

ಕಾನೂನುಗಳನ್ನು ಉಲ್ಲಂಘಿಸಿದವರಿಗೆ ಅವರ ತಪ್ಪುಗಳ ಸ್ವಭಾವ ಹಾಗೂ ರೀತಿಗಳಿಗನುಗುಣವಾಗಿ ದಂಡವನ್ನು ವಿಧಿಸಲಾಗುತ್ತದೆ ಅಥವಾ ಸಮಾಜದಿಂದ ಬಹಿಷ್ಕರಿಸಲಾಗುತ್ತದೆ. ನೈತಿಕ ಹಾಗೂ ಧಾರ್ಮಿಕ ತತ್ವಗಳ ಮೇಲೆ ಕುಣಬಿ ಸಮುದಾಯದವರ ಕಾನೂನುಗಳು ಅವಲಂಭಿಸಿವೆ. ಮುಖ್ಯಸ್ಥನಾದ 'ಗುರಿಕಾರ'ನೇ ಎಲ್ಲ ಅಪರಾಧಗಳಿಗೆ ಸಂಬಂಧಿಸಿದ ಮುಕದ್ದಮೆಗಳಿಗೆ ನ್ಯಾಯಾಧೀಶನಾಗಿ ಕರ್ತವ್ಯ ನಿರ್ವಹಿಸುವುದರಿಂದ ಅಪರಾಧ ಪ್ರಕರಣಗಳ ತೀರ್ಪನ್ನು ಅವನೇ ನೀಡುತ್ತಾನೆ. ಸಮಾಜ ವಿರೋಧಿ, ಧರ್ಮ ವಿರೋಧಿ ಚಟುವಟಿಕೆಗಳ ನಿಯಂತ್ರಣಕ್ಕಾಗಿ ಅನೇಕ ಕಟ್ಟುಪಾಡುಗಳನ್ನು ವಿಧಿಸಿರುತ್ತದೆ. ವ್ಯಭಿಚಾರ ಪ್ರಕರಣಗಳಲ್ಲಿ ಅಪರಾಧಿಯನ್ನು ಕುಣಬಿ ಸಮಾಜದಿಂದ ಬಹಿಷ್ಕರಿಸಿ ದೂರವಿಡಲಾಗುವದು, ಅನಂತರ ಅವನ

ಕುಟುಂಬದ ಸದಸ್ಯರಿಗೆ ಯಾವುದೇ ಧಾರ್ಮಿಕ ಸಮಾರಂಭಗಳಿಗೆ ಆಹ್ವಾನ ನೀಡುವದಿಲ್ಲ, ಆದರೆ ಇತ್ತೀಚೆಗೆ ಇಂತಹ ಪ್ರಕರಣಗಳನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲ.

ಪುರುಷನು ವ್ಯಭಿಚಾರಿವೆನಿಸಿದರೆ, ಈಗ ಬಹಿಷ್ಕಾರಗೊಳಿಸದೆ ಇತರರಂತೆಯೇ ಸಮಾನ ಗೌರವ ಪಡೆಯುವನು, ಆದರೆ ಕುಣಬಿಯರಲ್ಲಿ ಮಹಿಳೆ ವ್ಯಭಿಚಾರದಲ್ಲಿ ತೊಡಗಿದರೆ ಅದೊಂದು ಅತಿ ಹೀನಕೃತ್ಯವೆಂದು ಪರಿಗಣಿಸಿ ಅವಳನ್ನು ಮನೆಯಿಂದ ಮತ್ತು ಸಮಾಜದಿಂದಲೂ ದೂರವಿಡಲಾಗುತ್ತದೆ. 'ಕೂಡುಕಟ್ಟು'ವಿನ ಎಲ್ಲ ಸಮಾರಂಭಗಳಿಂದ ಅವಳನ್ನು ದೂರವಿಡಲಾಗುತ್ತದೆ. ಅಂತರ್ಜಾತಿಯ ಅಥವಾ ಅಂತರ್‌ಪಂಗಡ ವಿವಾಹಗಳು ನಡೆದರೆ ಸತಿಪತಿಗಳಿಬ್ಬರನ್ನು ಅಪರಾಧಿಗಳೆಂದು ಪರಿಗಣಿಸಿ ಸಾಮಾಜಿಕ ಬಹಿಷ್ಕಾರ ವಿಧಿಸುವರು. ಕುಣಬಿ ಪಂಗಡದಲ್ಲಿ ಪ್ರತಿಬಂಧಿತ ಆಹಾರ ಸಾಮಗ್ರಿ ಎನಿಸಿದ ಕಾಡು ಹಕ್ಕಿಯ ಮಾಂಸ, ಮಾರುಕಟ್ಟೆಯ ಮಾಂಸ ಬ್ರಾಹ್ಮಣರನ್ನು ಹೊರತುಪಡಿಸಿ ಬೇರೆ ಜಾತಿಯವರ ಮನೆಗಳಲ್ಲಿ ಆಹಾರ ಮತ್ತು ಮಾಂಸವನ್ನು ಸೇವಿಸಿದವರನ್ನು ದೋಷಿಗಳೆಂದು ಪರಿಗಣಿಸಿ ಪಾರಂಪರಿಕ ಪದ್ಧತಿಗಳಿಗನುಸಾರವಾಗಿ ರಕ್ಷಿಸಲಾಗುವದು.

ಕಾಡಿನಿಂದ ಬೇಟೆಯಾಡಿ ತಂದ ಮಾಂಸವನ್ನು ಮಾರಾಟ ಮಾಡುವದು ಅಪರಾಧವೆಂದು ಪರಿಗಣಿಸಲ್ಪಡುತ್ತದೆ. ಈ ಸಾಂಪ್ರದಾಯಿಕ ಕಟ್ಟೆಳೆಗಳನ್ನು ಮೀರಿದರೆ ತಕ್ಷಣವೇ ವಿಚಾರಣೆ ಮಾಡಿ ಸಮಾಜದ ಸಭೆಯಲ್ಲಿ ದಂಡ ಅಥವಾ ಶಿಕ್ಷೆ ವಿಧಿಸುವರು, ಕುಣಬಿ ಪಂಗಡದಲ್ಲಿ, 'ಓಡೋ' ಸಂಪ್ರದಾಯದಂತೆ, ಪ್ರತಿ ಮಹಿಳೆಯು ಕುಣಬಿ ಸಾಂಪ್ರದಾಯಿಕ 'ಗೇಟಿ' ಸೀರೆ ಉಡಬೇಕೆಂದು ನಿರೀಕ್ಷೆ ಇದೆ. ಇದಕ್ಕೆ ತಪ್ಪಿದರೆ ದಂಡ ತುಂಬಬೇಕಾಗುತ್ತದೆ, ಅಪರಾಧಿಗಳಿಂದ ತೆಗೆದುಕೊಂಡ ದಂಡವನ್ನು ದೇವರಿಗೆ ಕಾಣಿಕೆ ರೂಪದಲ್ಲಿ ಸಲ್ಲಿಸಲಾಗುವದು. ಪೂರ್ವ ಕಾಲದಲ್ಲಿ ಕುಣಬಿ ಸಮುದಾಯದಲ್ಲಿ ಪುರುಷರು ಕೂದಲನ್ನು ಹಿಂದಕ್ಕೆ ಬಾಚಿ, ಚಂಡಿಕೆ ರೂಪದಲ್ಲಿ ಬಿಡಬೇಕೆಂದು ನಿಯಮವಿತ್ತು. ಕೂದಲನ್ನು ಕತ್ತಿರಿಸಿಕೊಳ್ಳುವುದನ್ನು ಅಪರಾಧವೆಂದು ಪರಿಗಣಿಸಲಾಗುತ್ತಿತ್ತು.

'ಓಡೋ' ಪಂಗಡದ ಸದಸ್ಯರೆಲ್ಲರೂ ಹೋಳಿ ಹಬ್ಬದ ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕು. ಈ ಹಬ್ಬದಲ್ಲಿ ಭಾಗವಹಿಸದಿದ್ದವರನ್ನು ತಪ್ಪಿತಸ್ತರೆಂದು 'ಕೂಡುಕಟ್ಟು'ವಿನ ಸಭೆಯಲ್ಲಿ ಪ್ರಸ್ತಾಪಿಸಿ ವಿಚಾರಣೆಗೆ ಗುರಿಪಡಿಸಲಾಗುವುದು. ಹೋಳಿ ಹಬ್ಬದ ಉತ್ಸವ ಸಮಯದಲ್ಲಿ ಉಂಟಾಗುವ ವಿವಾದಗಳನ್ನು, ನೃತ್ಯದಲ್ಲಾಗುವ ತಪ್ಪುಗಳನ್ನು, ದೇವರಿಗೆ ತೆಂಗಿನಕಾಯಿಗಳನ್ನು ಅರ್ಪಿಸುವ ಮೂಲಕ ಕುಣಬಿಯರು ತಮ್ಮ ತಪ್ಪಿಗೆ ಪರಿಹಾರವನ್ನು ಕಂಡುಕೊಳ್ಳುವರು. ದೇವರಿಗೆ ಅರ್ಪಿತ ಕಾಯಿಗಳನ್ನು ಹೋಳಿ ಹಬ್ಬದ ಸಮಾರಾಧನೆಯಲ್ಲಿ

ಬಳಸಿ ಎಲ್ಲರಿಗೂ ಪ್ರಸಾದ ರೂಪದಲ್ಲಿ ಹಂಚುವರು. ಒಮ್ಮೊಮ್ಮೆ ತಪ್ಪಿತಸ್ಥರು 'ಓಡೋ' ಸದಸ್ಯರೆಲ್ಲರಿಗೂ ಊಟದ ಔತಣ ನೀಡಬೇಕಾಗುವದು.

ಹಿಂದಿನ ಕಾಲದಲ್ಲಿ ತಪ್ಪು ಮಾಡಿದವರಿಗೆ ಅತ್ಯಂತ ಕಠಿಣ ಶಿಕ್ಷೆ ವಿಧಿಸುತ್ತಿದ್ದರು, ಉದಾ: ಅಪರಾಧಿಗಳನ್ನು ಶ್ಯಾವೆಯ ಹಗೇವಿನಲ್ಲಿ ನೂಕುತ್ತಿದ್ದರು, ಆ ಹಗೆ (ಕುಣಿ) ಅತ್ಯಂತ ಜಾರಿಕೆಯುಳ್ಳದಾಗಿದ್ದು ನೂಕಲ್ಪಟ್ಟ ವ್ಯಕ್ತಿ ಮೇಲೆ ಬರಲು ಬಹಳ ಪ್ರಯತ್ನ ಪಡಬೇಕಾಗುತ್ತಿತ್ತು.

ಥರ್‍ಸ್ಟನ್ ಎಡ್ವರ ತನ್ನ ಸಮೀಕ್ಷಾ ವರದಿಯಲ್ಲಿ ತಿಳಿಯಪಡಿಸುವಂತೆ 'ಗೋವಾ ಕುಣಬಿಗಳಲ್ಲಿ ಒಬ್ಬ ವ್ಯಭಿಚಾರಿಯು ಕಠಿಣ ಶಿಕ್ಷೆಯನ್ನು ಅನುಭವಿಸಬೇಕಾಗುವದು, ಅವನ ತಲೆಯನ್ನು ಬೋಳಿಸಿ, ಮೀಸೆ ತೆಗೆದು, ಒಂದು ತೊಟ್ಟಿಯಲ್ಲಿ ನಿಲ್ಲಿಸಿ ತಿಂದುಳಿದ ಆಹಾರ ಪದಾರ್ಥಗಳನ್ನು ಅವನ ಮೇಲೆ ಎಸೆಯುತ್ತಿದ್ದರು. ತಿಂದ ಎಂಜಲೆಲೆಗಳನ್ನು ಅವನ ತಲೆಯ ಮೇಲೆ ಎಸೆದು ಶಿಕ್ಷಿಸುತ್ತಿದ್ದರು, ಅವರಿಗೆ ಗುರಿಕಾರನನು ದಂಡ ರೂಪದಲ್ಲಿ ಹಣವನ್ನು ಸಹ ವಿಧಿಸುತ್ತಿದ್ದನು. ಒಂದು ವೇಳೆ ವ್ಯಭಿಚಾರಿ ಸ್ತ್ರೀಯಾಗಿದ್ದು ತಪ್ಪು ಒಪ್ಪಿಕೊಳ್ಳದಿದ್ದರೆ ಅವಳನ್ನು ಸೂರ್ಯನ ಸುಡುಬಿಸಿಲಿಗೆ ನಿಲ್ಲಿಸಿ ಹೆಗಲಮೇಲೆ ಕಬ್ಬಿಣಡ ಸಲಾಕೆಯನ್ನು ಹೋರಿಸುವರು'. ಕುಣಬಿ ಸಮಾಜದಲ್ಲಿ ಶಿಕ್ಷೆ ವಿಧಿಸಬೇಕಾದರೆ ಕುಣಬಿ ಸಮಾಜದವರು ವಿವಿಧ ತರಹದ ಮುಕದ್ದಮೆಗಳನ್ನು ಗಣನೆಗೆ ತೆಗೆದುಕೊಂಡು ಶಿಕ್ಷೆ ವಿಧಿಸುವರು. ಕ್ರಿಮಿನಲ್ ಮುಕದ್ದಮೆಗಳು ನಡೆಯುವಾಗ ಅಪರಾಧಿಯು ಗೋವಾ ದೇವತೆಯ ಹೆಸರಿನಲ್ಲಿ ಪ್ರಮಾಣ ಮಾಡಬೇಕಾಗುತ್ತದೆ, ಎಲ್ಲ ವಿವಾದಗಳನ್ನು ಹಾಗೂ ಸಮಸ್ಯೆಗಳನ್ನು ಗುರಿಕಾರನ ಮನೆಯಲ್ಲಿ ಸಭೆ ಸೇರಿ ನಿರ್ಣಯಿಸಲಾಗುವುದು.

'ಓಡೋ' ಮಂಡಳಿಯು ಮೂರು ಜನ ಸ್ಥಳೀಯ ಮುಖಂಡರೆದುರು ಎಲ್ಲ ಅಪರಾಧದ ಪ್ರಕರಣಗಳನ್ನು ಇತ್ಯರ್ಥ ಮಾಡಿ ಅಪರಾಧಿಗೆ ದಂಡ ವಿಧಿಸಲಾಗುವದು, ದಂಡದ ಹಣ ರೂ. ೧೦ ರಿಂದ ರೂ. ೨೦ರ ವರೆಗೆ ಇರುತ್ತದೆ. ಯಾವುದೇ ಅಪರಾಧಿಯು ಸುಳ್ಳು ಹೇಳಿದ್ದಾದರೆ ಅವರನ್ನು ದೇವರು ಮೂರು ವರ್ಷಗಳೊಳಗಾಗಿ ಶಾಪ ನೀಡುವದಾಗಿ ಕುಣಬಿಗಳು ನಂಬುತ್ತಾರೆ. ಅಪರಾಧಿಗಳನ್ನು ಶಿಕ್ಷಿಸುವಂತೆಯೇ, ಒಳ್ಳೆಯ ಕಾರ್ಯಗಳನ್ನು ಮಾಡುವವರಿಗೆ, ಒಳ್ಳೆಯ ನಡತೆಯುಳ್ಳವರಿಗೆ ಕುಣಬಿ ಸಮಾಜದವರು ಪುರಸ್ಕರಿಸುವರು. ಬಹಳ ವರ್ಷಗಳವರೆಗೆ 'ಓಡೋ' ಮಂಡಳಿಯಲ್ಲಿ ತನ್ನ ಸದಸ್ಯತ್ವವನ್ನು ನಿರಂತರವಾಗಿ ಉಳಿಸಿಕೊಂಡು ಬಂದ ಸದಸ್ಯರಿಗೆ ವಿಶೇಷ ಗೌರವವನ್ನು ಕುಣಬಿ ಸಮಾಜವು ನೀಡುತ್ತದೆ.

ಅದೇ ರೀತಿ ಕುಣಬಿ ಪಾರಂಪರಿಕ, ಸಾಂಪ್ರದಾಯಿಕ ನೃತ್ಯ-ಕಲೆಗಳಾದ ಗುಮಟೆ, ಟೋಣಿ ಇತ್ಯಾದಿಗಳಲ್ಲಿ ಪರಿಣಿತ ಪಡೆದವರಿಗೂ, ಕುಣಬಿ ಸಮಾಜದಲ್ಲಿ ವಿಶೇಷ ಸ್ಥಾನಮಾನವನ್ನು

ಕೊಡಲಾಗುತ್ತದೆ ಹಾಗೇ ಓಡೋ ಮಂಡಳದೊಂದಿಗೆ ಸಂಬಂಧ ಹದಗೆಟ್ಟ ಜನ ಬಹಿಷ್ಕರಿಸಲ್ಪಟ್ಟವರಿಗೆ ಕುಣಬಿ ಸಮಾಜದಲ್ಲಿ ಯಾವುದೇ ರೀತಿಯ ಗೌರವ, ಸ್ಥಾನಮಾನಗಳು ಇರುವದಿಲ್ಲ. ಗುರಿಕಾರರ ಮನೆ ಹಾಗೂ ಪೂರ್ವಜರ ನಿವಾಸವನ್ನು ಬಹಳ ಗೌರವದಿಂದ ಕಾಣುವರು. ಗುರಿಕಾರರ ಮನೆಯು ಸರ್ವಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಚಟುವಟಿಕೆಗಳ ಕೇಂದ್ರಬಿಂದುವಾಗಿರುತ್ತದೆ. ಎಲ್ಲ ಪಾರಂಪರಿಕ ಹಾಡು, ನೃತ್ಯ, ವಾದ್ಯ ಮೇಳಗಳು, ದೇವತಾ ಪೂಜೆ, ವಿಧಿವಿಧಾನಗಳು, ಎಲ್ಲ ಸಾಮಾಜಿಕ ಸಮಾರಂಭಗಳು ಗುರಿಕಾರರ ಮನೆಯ ಅಂಗಳದಲ್ಲಿಯೇ ಜರಗುತ್ತವೆ. ಸಾಂಪ್ರದಾಯಿಕ ಉಪಕರಣಗಳು, ನೃತ್ಯ ಹಾಗೂ ಗಾಯನದ ಸಲಕರಣೆಗಳಾದ ಗುಮ್ಮಟ, ವೇಷಭೂಷಣ ಮುಂತಾದವುಗಳನ್ನು ಗುರಿಕಾರರ ಮನೆಯಲ್ಲಿಯೇ ಸುರಕ್ಷಿತವಾಗಿ ಇಡಲಾಗುತ್ತದೆ. ಅಲ್ಲದೇ ಬೇಟೆಗೆ ಬೇಕಾದ ವಿವಿಧ ಆಯುಧಗಳಾದ ಮೀನಿನ ಬಲೆ, ಹಗ್ಗ ಹಾಗೂ ಪರದೆ ಮುಂತಾದ ನಿತ್ಯ ಯಪಯೋಗಿ ವಸ್ತುಗಳನ್ನು ಗುರಿಕಾರರ ಮನೆಯಲ್ಲಿಯೇ ಇಡುವರು. ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ಹೋಳಿ ಹಬ್ಬದ ನಂತರ ಗುರಿಕಾರರ ಮುಂದಾಳತ್ವದಲ್ಲಿ ಬೇಟೆಯಾಡುವುದನ್ನು ಮತ್ತು ಮೀನು ಹಿಡಿಯುವುದನ್ನು ಕುಣಬಿಯರು ಸಂಪ್ರದಾಯವಾಗಿ ನಡೆಯಿಸಿಕೊಂಡು ಬಂದಿರುವರು. ಈ ಎಲ್ಲಾ ಸಾಮೂಹಿಕ ವಿಧಿವಿಧಾನ ಚಟುವಟಿಕೆಗಳು ಗುರಿಕಾರರ ಮುಂದಾಳತ್ವದಲ್ಲಿಯೇ ನಡೆಯುವವು. ಗುರಿಕಾರರ ಮನೆಯಿಂದಲೇ ಸಾಂಪ್ರದಾಯಿಕ ಮೆರವಣಿಗೆ ಸಾಗುವದು.

ಕುಣಬಿಯರ ಪಾರಂಪರಿಕ ಪದ್ಧತಿಯಾಗಿ ತುಳಸಿ ಗಿಡವನ್ನು ತಮ್ಮ ಮನೆಯ ಅಂಗಳದಲ್ಲಿ ಬೆಳೆಸುವುದಿಲ್ಲ, ಆದರೆ ಕುಣಬಿ ಸಮಾಜದಲ್ಲಿ ಪವಿತ್ರ ತುಳಸಿಯನ್ನು ಗುರಿಕಾರರ ಮನೆಯ ಅಂಗಳದಲ್ಲಿ ಮತ್ತು ಪೂರ್ವಿಕರ ಮನೆಯ ಯಜಮಾನರ ಅಂಗಳದಲ್ಲಿ ನೆಟ್ಟು 'ತುಳಸಿ ಕಟ್ಟೆ' ಎಂದು ಕರೆಯುವರು. ಸಾಮಾಜಿಕ ಜೀವನದಲ್ಲಿ ಗುರಿಕಾರರು ಮುಖ್ಯಪಾತ್ರ ವಹಿಸುವರು. ಕುಣಬಿಯರ ಎಲ್ಲ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಮತ್ತು ನ್ಯಾಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಗುರಿಕಾರರೇ ಆಡಳಿತಗಾರನಾಗಿ ನಡೆಸಿಕೊಂಡು ಹೋಗುವನು ಈ ಎಲ್ಲ ಚಟುವಟಿಕೆಗಳಲ್ಲಿ ಗುರಿಕಾರರು 'ರಾಯಭಾರಿ' ಮತ್ತು 'ಗದ್ಯ' ಇವರು ಸಹಾಯಕರಾಗಿರುವರು.

**ಆಧುನೀಕರಣದ ಪ್ರಭಾವ**

ಪೂರ್ವ ಕಾಲದಲ್ಲಿ 'ಗುರಿಕಾರ'ರಿಗೆ ಪರಮೋಚ್ಛ ಅಧಿಕಾರ ಹಾಗೂ ಗೌರವ ಹೊಂದಿದ್ದರು. ಈಗ ಇಂದಿನ ಪ್ರಸಕ್ತ ಸ್ಥಿತಿಯಲ್ಲಿ ಅನೇಕ ಸಾಂಪ್ರದಾಯಿಕ ಅಧಿಕಾರ ಹಾಗೂ ಗೌರವಗಳನ್ನು ಕಳೆದುಕೊಂಡಿರುವರು. ಜೋಗಿ ಕುಣಬಿಗಳಲ್ಲಿ ಮಾತ್ರ ಇಂದೂ 'ಗೌಡರ'ನ್ನು ಊರಿನ ಮುಖ್ಯಸ್ಥರನ್ನಾಗಿ ನೇಮಿಸುವುದನ್ನು ಕಾಣುತ್ತೇವೆ, ಆದರೂ 'ಗೌಡ' ಎಂಬ ಶಬ್ಧವನ್ನು

ಸರ್ವೇಸಾಮಾನ್ಯವಾಗಿ ಕೊಡಿಯಾಲ ಹಾಗೂ ಜೋಗಿ ಕುಣಬಿಗಳು ತಮ್ಮ ಅಡ್ಡ ಹೆಸರನ್ನಾಗಿ ಉಪಯೋಗಿಸುವುದನ್ನು ಕಾಣುತ್ತೇವೆ.

ಇತ್ತೀಚಿನ ದಿನಗಳಲ್ಲಿ ಕುಣಬಿಯರು ತಮ್ಮದೇ ಆದ ಆಡಳಿತ ಗುಂಪನ್ನು 'ಓಡೋ'ದಲ್ಲಿ ರಚಿಸಿಕೊಂಡಿದ್ದಾರೆ. ಇದರಲ್ಲಿ ಬೇರೆ ಬೇರೆ ಕುಟುಂಬಗಳಿಗೆ ಸೇರಿದ ಐದು ಜನ ಸದಸ್ಯರಿರುವರು. ಸಾಮಾನ್ಯವಾಗಿ ಐದೂ ಕುಟುಂಬಗಳ ಯಜಮಾನರೇ ಈ ಮಂಡಳಿಯ ಸದಸ್ಯರಾಗಿರುತ್ತಾರೆ. 'ಓಡೋ'ದ ದಿನನಿತ್ಯದ ಎಲ್ಲಾ ಚಟುವಟಿಕೆಗಳನ್ನು ಕುಣಬಿಯರ ಈ ಪರಿಷತ್ತು ನಿರ್ಧರಿಸುವುದು ಮತ್ತು ನಡೆಸಿಕೊಂಡು ಹೋಗುವುದು, ಹೀಗಿದ್ದರೂ ಎಲ್ಲ ಸಮಾವೇಶಗಳನ್ನು ಗುರಿಕಾರನ ಮನೆಯಲ್ಲಿಯೇ ನಡೆಸಲಾಗುತ್ತದೆ. ಕುಣಬಿಯರ ಪ್ರಕಾರ ಇಂದಿನ ಗುರಿಕಾರ ಮತ್ತು ರಾಯಭಾರಿಗಳನ್ನು ತಮ್ಮ ಹಿಂದಿನ ಸ್ಥಾನಮಾನಗಳನ್ನು, ಒಗ್ಗಟ್ಟನ್ನು, ದಕ್ಷತೆಯನ್ನು ಹಾಗೂ ಮೌಲ್ಯಗಳನ್ನು ಉಳಿಸಿಕೊಂಡು ಬಂದಿಲ್ಲವೆಂದು ಹೇಳುವರು.

ಇತ್ತೀಚೆಗೆ ಶಾಸನಬದ್ಧ ಗ್ರಾಮಪಂಚಾಯತಿಗಳು ಅಸ್ತಿತ್ವಕ್ಕೆ ಬಂದ ನಂತರ, ಸಾಂಪ್ರದಾಯಿಕ 'ಕುಣಬಿ–ಓಡೋ'ಗಳ ಪಾತ್ರದಲ್ಲಿ ಅಮೂಲಾಗ್ರ ಬದಲಾವಣೆಗಳಾಗಿವೆ. ಕೆಲವು ಸುಶಿಕ್ಷಿತ ಕುಣಬಿ ಯುವಕರು ರಾಜಕೀಯ ಪಕ್ಷಗಳ ಸ್ಥಳೀಯ ರಾಜಕಾರಣ ಹಾಗೂ ಚಟುವಟಿಕೆಗಳಲ್ಲಿ ಆಸಕ್ತಿ ತೋರುತ್ತಿದ್ದಾರೆ, ಅವರಲ್ಲಿಯೇ ಕೆಲವರು ನಗರ ಸಂಪರ್ಕ, ಶಿಕ್ಷಣ, ಭೂ ಸುಧಾರಣೆ, ಕಾನೂನುಗಳ ಅರಿವಿನಿಂದ ಪ್ರತಿಷ್ಠಿತ ನಾಯಕರಾಗಿ ಹೊರಹೊಮ್ಮಿದ್ದಾರೆ. 'ಓಡೋ'ದ ಪರಿಷತ್ತಿನ ಚಟುವಟಿಕೆಗಳಲ್ಲಿ ಗುರಿಕಾರರು ಮತ್ತು ಕುಟುಂಬದ ಮುಖ್ಯಸ್ಥರು ಭಾಗವಹಿಸುವದನ್ನು ನೋಡಿದಾಗ ಗುರಿಕಾರರ ಮನೆಯಲ್ಲಿಯೇ ತಮ್ಮ ಎಲ್ಲ ಸಮಾವೇಶಗಳನ್ನು ನಡೆಸುತ್ತಿರುವುದನ್ನು ಹೋಳಿ ಹಬ್ಬದ ನೃತ್ಯ ಕಾರ್ಯಕ್ರಮಗಳಲ್ಲಿ ಗುರಿಕಾರರಿಗೆ ಕೊಡುವ ಗೌರವವನ್ನು ಅವಲೋಕಿಸಿದಾಗ ಇಂದಿಗೂ ಸಹ ಕುಣಬಿಯರು ತಮ್ಮ ಸಾಂಪ್ರದಾಯಿಕ ಆಚಾರಗಳನ್ನು ಮತ್ತು ಧಾರ್ಮಿಕ ಪರಂಪರೆಗಳನ್ನು ತಮ್ಮ ಬುಡಕಟ್ಟು ಸಮುದಾಯದ ಸಂಸ್ಕೃತಿಯೆಂದು ಕಾಪಾಡಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ.

ಇಂದಿನ ಪಂಚಾಯತಿ ರಾಜ್ ವ್ಯವಸ್ಥೆ, ಶಿಕ್ಷಣ ಸೌಲಭ್ಯ, ಚುನಾವಣೆಗಳು, ಮತದಾನದ ಹಕ್ಕುಗಳು, ರಾಜಕೀಯ ಪಕ್ಷಗಳು, ನ್ಯಾಯಾಲಯಗಳು, ಸಮೂಹ ಮಾಧ್ಯಮಗಳ ಪ್ರಭಾವದಿಂದ ಸಾಂಪ್ರದಾಯಿಕ 'ಓಡೋ'ದ ಪಾರಂಪರಿಕ ವ್ಯವಸ್ಥೆ ಹಿಂಜರಿಕೆ ಕಾಣುತ್ತಿದೆಯಾದರೂ ಕುಣಬಿ ಸಮಾಜದಲ್ಲಿ ಹೆಚ್ಚಿನ ಬದಲಾವಣೆಯನ್ನು ನಾವು ಕಾಣುವದಿಲ್ಲ. ಬೇರೆ ಸಮುದಾಯ ಮತ್ತು ಸಮಾಜಗಳಿಂದ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ಕುಣಬಿ ಬುಡಕಟ್ಟು ಸಮಾಜವು ರಾಜಕೀಯ ಬೆಳವಣಿಗೆಯಲ್ಲಿ ಬಹಳ ಮಂದಗತಿಯಿಂದ ಸಾಗಿದೆ. ಬುಡಕಟ್ಟು ಜನರ ಮೌಖಿಕ ಬೆಳವಣಿಗೆಗಳನ್ನು ನೋಡಿದಾಗ ಇದು ನಿಜವೆಂದು ತಿಳಿಯುತ್ತದೆ.

ಕು॥ ರೇಣುಕಾ ಪಮೇಜಾ ಗ್ರಹಿಸಿದಂತೆ 'ಬುಡಕಟ್ಟು ಸಮಾಜವು ಇತರ ಸಾಮಾಜಿಕ ಸಂಘ-ಸಂಸ್ಥೆಗಳಿಂದ ದೂರವಾಗಿದ್ದುಕೊಂಡು ಸಂಪರ್ಕದ ಕೊರತೆ ಹಾಗೂ ಏಕಾಂಗಿತನ ಅನುಭವಿಸುವುದರಿಂದ ರಾಜಕೀಯ ಪ್ರಜ್ಞೆ ಹಾಗೂ ಪ್ರಭಾವಗಳು ತೀರಾ ಮಂದಗತಿಯಲ್ಲಿ ಸಾಗಿ ಸಾಮಾಜಿಕ ದೃಷ್ಟಿಕೋನದಲ್ಲಿಯೂ ಬಹಳ ಹಿನ್ನಡೆ ಕಂಡುಬರುವದು'.

ಇನ್ನೂ ಕೆಲವು ಕುಣಬಿ ಸಮುದಾಯದ ನ್ಯಾಯಾಲಯಗಳು ಕೆಲವಡೆ ಕೆಲಸ ಮಾಡುತ್ತಿದ್ದರೂ ಕುಣಬಿಯರ ಪ್ರಕಾರ ಅವು ಇಂದಿನ ಅಪರಾಧಿ ಚಟುವಟಿಕೆಗಳನ್ನು ಮತ್ತು ತಂಟೆ-ತಕರಾರುಗಳನ್ನು ನಿಯಂತ್ರಿಸುವಲ್ಲಿ ಅಸಫಲವಾಗಿವೆ, ಆದಕಾರಣ ಇಂದಿನ ಕುಣಬಿಯರು ತಮ್ಮ ಸಮಸ್ಯೆಗಳನ್ನು ಮತ್ತು ತಂಟೆತಕರಾರುಗಳಿಗೆ ಸ್ಥಳೀಯ ಎಮ್.ಎಲ್.ಎ. ಮಂಡಲ ಪ್ರಧಾನ ಅಥವಾ ಭೂ ಮಾಲೀಕರು, ಮೇಲ್ದರ್ಜೆಯ ವ್ಯಕ್ತಿಗಳ ಮೊರೆ ಹೋಗುತ್ತಾರೆ. ಇವು ಕುಣಬಿ ಸಮಾಜದಲ್ಲಿ ಅಧಿಕಾರದ ಸಂಸ್ಥೆಗಳಲ್ಲಿ ಬದಲಾವಣೆಗಳನ್ನು ತಂದಿದೆ. ಈ ಹಿಂದೆ ಕುಣಬಿ ಸಮಾಜವು ಚಿಕ್ಕದಾಗಿರುವಾಗ ಸ್ಥಳೀಯ ಪಾರಂಪರಿಕ ಕುಣಬಿ ನ್ಯಾಯಾಲಯಗಳು ತನ್ನ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸುತ್ತಿತ್ತು. Mann and Mann ಅವರ ಅಭಿಪ್ರಾಯದಂತೆ 'ಪಂಚಾಯತ ರಾಜ್ಯದ ಮತ್ತು ಸ್ಥಳೀಯ ಸರಕಾರಿ ನ್ಯಾಯಾಲಯಗಳ ಅಳವಡಿಕೆಯು ಪಾರಂಪರಿಕ ನ್ಯಾಯ ಪದ್ಧತಿಯನ್ನು ಅಲ್ಲಾಡಿಸಿದೆ ಮತ್ತು ಸಾಮಾಜಿಕ ಅಧಿಕಾರವು ಅವರಿಂದ ಕೈತಪ್ಪಿ ಹೋಗಿದೆ, ಅಷ್ಟೇ ಅಲ್ಲದೆ ಇದು ಬುಡಕಟ್ಟು ಸಮುದಾಯದವರಲ್ಲಿ ಹಿಂದಿನ ಕಾಯ್ದೆ ಕಾನೂನುಗಳ ಅನುಕರಣೆಗಳ ಬಗ್ಗೆ ಅನುಮಾನವನ್ನು ಮತ್ತು ಗೊಂದಲವನ್ನು ಉಂಟು ಮಾಡಿದೆ'.

ಈಗ ಕುಣಬಿ ಸಮುದಾಯದವರು ತುಳಸಿ ಕಟ್ಟೆಯನ್ನು ಕೇವಲ ಗುರಿಕಾರರ ಮನೆಯ ಅಂಗಳದಲ್ಲಿ ಅಥವಾ ಪೂರ್ವಿಕರ ಮನೆಯ ಆವರಣದಲ್ಲಿ ಇರಬೇಕೆನ್ನುವುದನ್ನು ಒಪ್ಪುವುದಿಲ್ಲ. ಇಂದು ಸಾಂಪ್ರದಾಯಿಕ ನಂಬಿಕೆಗೆ ಜೋತು ಬೀಳದೆ ಎಲ್ಲಾ ಕುಣಬಿಯರು ತಮ್ಮ ತಮ್ಮ ಮನೆಯಂಗಳದಲ್ಲಿ ತುಳಸಿ ಗಿಡ ನೆಟ್ಟು ಹೊಸ ಗಾಳಿಯ ಸೂಚನೆ ನೀಡಿದ್ದಾರೆ, ಇದು ಕುಣಬಿಯರು ಹಿಂದೂ ಧರ್ಮದೆಡೆಗೆ ವಾಲುತ್ತಿರುವುದನ್ನು ಗಾಢವಾಗಿ ಸಮರ್ಥಿಸುತ್ತದೆ.

ಈ ಮೊದಲು ಕುಣಬಿ ಪಂಗಡಗಳಲ್ಲಿ ಕೆಲವೇ ಕೆಲವು 'ಓಡೋಗಳು' ಅಸ್ತಿತ್ವದಲ್ಲಿದ್ದರು. ಬರಬರುತ್ತಾ ಅವರಲ್ಲಿಯೇ ಜಗಳಗಳಾಗಿ ಇಂದು ಕುಣಬಿ ಸಮಾಜದಲ್ಲಿ ಸಣ್ಣ ಸಣ್ಣ 'ಓಡೋ' ಘಟಕಗಳಾಗಿ ಅಸ್ತಿತ್ವದಲ್ಲಿರುವುದನ್ನು ನಾವು ಕಾಣುತ್ತೇವೆ. ಹೊಸ 'ಓಡೋ'ವನ್ನು ಸ್ಥಾಪಿಸುವ ಮೊದಲು ಪ್ರಾರಂಭಿಕ ಗೋವಾ ದೇವತೆಗಳಿಗೆ ಪೂಜೆ ಕೈಗೊಂಡು ಪ್ರಸಾದ ಹಂಚಿಕೆ ಮಾಡಲಾಗುತ್ತದೆ, ಈ ಪದ್ಧತಿ ಕಳೆದ ೪೦ ವರ್ಷಗಳಿಂದ ಜಾರಿಯಲ್ಲಿದೆ.

ಈಗ ಕುಣಬಿ ಸಮುದಾಯದಲ್ಲಿ ಸಾಂಪ್ರದಾಯಿಕ ಕಟ್ಟಳೆಗಳನ್ನು ಮೀರಿ ನಡೆದಾಗ ಅಪರಾಧಗಳಿಗೆ ನೀಡುವ ದಂಡ ಅಥವಾ ಶಿಕ್ಷಯ ವಿಧಿವಿಧಾನಗಳಲ್ಲಿಯು ಕೆಲವೊಂದು ಪ್ರಮುಖ ಬದಲಾವಣೆಗಳನ್ನು ಕಾಣಬಹುದಾಗಿದೆ. ಕುಣಬಿ ಯುವ ಸಮುದಾಯದ ನಡೆ-ನುಡಿಯಲ್ಲಿ ಅಂದು ದೋಷಗಳೆಂದೆನಿಸಿದರೂ, ಇಂದು ಯಾವ ತಪ್ಪುಗಳನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲ. ಈಗ ಪ್ರತಿಬಂಧಿತ ಆಹಾರ ಸೇವನೆಯನ್ನು ಸಹಿಸಿಕೊಳ್ಳಲಾಗುತ್ತಿದೆ. ಹೋಳಿ ಉತ್ಸವದ ಸಂಗೀತ-ನೃತ್ಯ ಸಂದರ್ಭದಲ್ಲಿ ಗುಮಟೆ ಅಥವಾ ಕೋಲು ನೆಲಕ್ಕೆ ಬಿದ್ದರೆ ಅಥವಾ ಬಡಿದರೆ ಅದೊಂದು ಗಂಭೀರ ಅಪರಾಧವೆಂದು ಈಗ ಅನಿಸುವುದಿಲ್ಲ. ಈಗ ಸಾಂಪ್ರದಾಯಿಕ ಸೀರೆ ಉಡದಿದ್ದರೂ ನವತರುಣಿಯರಿಗೆ ಶಿಕ್ಷೆ ವಿಧಿಸಲಾಗುವುದಿಲ್ಲ. ಗಂಡಸರಿಗೆ ತಲೆಬಾಚಿ ಚಂಡಿಕೆ ಬಿಡುವುದು ಅಥವಾ ಕೂದಲು ಕತ್ತರಿಸುವುದಕ್ಕೆ ಅನುಮತಿ ದೊರೆಯುತ್ತಿದೆ.

ಕುಣಬಿ ಸಮುದಾಯದಲ್ಲಿ ಅಂತರ್‌ಜಾತಿಯ ಮತ್ತು ಅಂತರ್‌ಪಂಗಡಗಳ ಮದುವೆಗಳನ್ನು ಸಾಮಾನ್ಯವಾಗಿ ಸ್ವೀಕರಿಸಲಾಗುತ್ತಿದೆ. ಈ ಸಂದರ್ಭದಲ್ಲಿ ವಧು ಮಾತ್ರ ವರನ ಸಂಪ್ರದಾಯ ಮತ್ತು ವಿಧಿ ವಿಧಾನಗಳನ್ನು ಒಪ್ಪಿಕೊಂಡು ಕುಣಬಿ ಸಮುದಾಯಕ್ಕೆ ಸೇರ್ಪಡೆಯಾಗಬೇಕಾಗುವದು, ಆದರೆ ಒಬ್ಬ ಕುಣಬಿ ಮಹಿಳೆ ಕುಣಬಿ ಸಮುದಾಯದಲ್ಲದವನನ್ನು ವರಿಸಿದಾಗ ಅವಳನ್ನು ಸಮಾಜದಿಂದ ಬಹಿಷ್ಕರಿಸಿ ದೂರ ತಳ್ಳುತ್ತಾರೆ. ಕಾರಣ ಅವಳು ತನ್ನ ಮೂಲ ಸಮುದಾಯದ ನೆಲೆಗೆ ಬರುವುದು ವಿರಳ, ಹೆಚ್ಚಾಗಿ ಅವಳು ತನ್ನ ಪತಿಯ ಸಮುದಾಯ ಪದ್ಧತಿಗೆ ಶರಣಾಗುವುದು ಸಹಜ, ಆದರೂ ಇನ್ನೂ ಕೆಲವೆಡೆ ಅಂತರ್‌ಜಾತೀಯ, ಅಂತರ್‌ಪಂಗಡೀಯ ವಿವಾಹಗಳು ನಡೆದಾಗ ಸಾಂಪ್ರದಾಯಿಕ ಶಿಕ್ಷೆ ಅಥವಾ ದಂಡ ವಿಧಿಸುವ ಪ್ರಕ್ರಿಯೆ ಜಾರಿಯಲ್ಲಿದೆ. ಥರ್‍ಸ್ಟನ್ ಅವರು ಗಮನಿಸಿದ ಶಿಕ್ಷೆ ವಿಧಾನಗಳು ಈಗೀಗ ಮಾಯವಾಗತೊಡಗಿವೆ.

ಕುಣಬಿಯರನ್ನು ಒಗ್ಗೂಡಿಸಲು ಮತ್ತು ಅವರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು 'ಟಲೋರಿ ಕುಣಬಿ ಉನ್ನತ ಸಂಘವನ್ನು ೧ನೇ ಅಕ್ಟೋಬರ ೧೯೨೦ರಲ್ಲಿ ಮುಂಬೈಯಲ್ಲಿ ಸ್ಥಾಪಿಸಲಾಯಿತು', ಮುಂಬೈ ಮತ್ತು ಕೊಂಕಣಿ ಕುಣಬಿಯರಲ್ಲಿ ಜಾಗೃತಿಯನ್ನು ಮೂಡಿಸಲು ದಿವಂಗತ ಗುಣಜಿಮಾಲಿ ಮತ್ತು ಸ್ನೇಹಿತರು 'ಕುಣಬಿ ಉದಯ' ಎನ್ನುವ ಮಾಸ ಪತ್ರಿಕೆಯನ್ನು ೧೯೩೫ ರಲ್ಲಿ ಪ್ರಾರಂಭಿಸಿದರು.

ದಿವಂಗತ ಅಣ್ಣಾಸಾಹೇಬ ಅಲಿಯಾಸ ಶ್ಯಾಮರಾವ ಪೇಜೆಯವರು ಕುಣಬಿ ಸಮಾಜದ ಹೆಸರಾಂತ ಹಾಗೂ ಪ್ರಮುಖ ಮುಖಂಡರು. ಕುಣಬಿ ಸಮಾಜವನ್ನು ೪೦ ವರ್ಷಗಳ ದೀರ್ಘ ಕಾಲದವರೆಗೆ ರಾಜಕೀಯ ರಂಗದಲ್ಲಿಯೂ ಮತ್ತು ಸಾಮಾಜಿಕ ರಂಗದಲ್ಲಿಯೂ ಮುನ್ನಡೆಸಿದರು. ಮಹಾರಾಷ್ಟ್ರ ರಾಜ್ಯದ ರತ್ನಗಿರಿ ಜಿಲ್ಲೆಯಿಂದ ನಾಲ್ಕು ಸಲ ಎಮ್.ಎಲ್.ಎ. ಆಗಿಯೂ ಮತ್ತು

ಒಂದು ಸಲ ಎಮ್.ಪಿ. ಆಗಿ ಆಯ್ಕೆಯಾಗಿದ್ದರು. ಕುಣಬಿ ಸಮಾಜದ ಉನ್ನತಿಗಾಗಿ ತಮ್ಮ ಸಹೋದ್ಯೋಗಿಗಳೊಡಗೂಡಿ ಅಣ್ಣಾಸಾಹೇಬರು 'ಶ್ಯಾಮರಾವ ಪೇಜೆ ಮೆಮೋರಿಯಲ್ ಟ್ರಸ್ಟ' ಎನ್ನುವ ಟ್ರಸ್ಟನ್ನು ೧೯೭೩ ರಲ್ಲಿ ಸ್ಥಾಪಿಸಿದರು.

ಈಗ ಆಧುನಿಕ ಕುಣಬಿ ಸಮುದಾಯದಲ್ಲಿ ಕೆಲವು ಸುಶಿಕ್ಷಿತ ಉತ್ಸಾಹಿ ತರುಣರು ಹೊಸ ಹೊಸ ಸ್ವಯಂ ಸೇವಾ ಸಂಘಗಳನ್ನು ಕಟ್ಟಿಕೊಂಡು, ಹೊಸ ಹೆಸರಿನಲ್ಲಿ ಧಾರ್ಮಿಕ-ಪ್ರಾದೇಶಿಕ ವ್ಯಾಪ್ತಿಯ ಹೊಸ ಯೋಜನೆಗಳನ್ನು ಸುಧಾರಣೆಯ ಪ್ರಕ್ರಿಯೆಯಲ್ಲಿ ಜಾರಿಗೊಳಿಸುತ್ತಿದ್ದರು. ಈ ನೂತನ ಸಂಘ-ಸಂಸ್ಥೆಗಳ ವಿವರಗಳು (ಕೋಷ್ಟಕ ೫.೧) ಈ ಕೆಳಗಿನಂತಿವೆ.

**ಕೋಷ್ಟಕ ೫.೧**

**ಕುಣಬಿ ಸಮುದಾಯದ ನೂತನ ಸಂಘ-ಸಂಸ್ಥೆಗಳು**

| ಕ್ರ.ಸಂ. | ಸಂಸ್ಥೆಯ ಹೆಸರು | ಗ್ರಾಮ | ತಾಲೂಕು | ಜಿಲ್ಲೆ |
|---|---|---|---|---|
| ೧ | ಸಮಗ್ರ ಕುಣಬಿ ಸಮುದಾಯ ಅಭಿವೃದ್ಧಿ ಸಂಘ (ರಿ) | ಕಟ್ಟಿಗೆ | ಯಲ್ಲಾಪುರ | ಕಾರವಾರ |
| ೨ | ಉತ್ತರ ಕನ್ನಡ ಜಿಲ್ಲಾ ಕುಣಬಿ ಸಮಾಜ ಸೇವಾ ಸಂಘ (ರಿ), ಕುಣಬಿ ಭವನ, ಜೋಯಿಡಾ | ಜೋಯಿಡಾ | ಜೋಯಿಡಾ | ಕಾರವಾರ |
| ೩ | ಜೋಯಿಡಾ ತಾಲೂಕ ಕುಣಬಿ ಸಮಾಜ ಅಭಿವೃದ್ಧಿ ಸಂಘ | ಜೋಯಿಡಾ | ಜೋಯಿಡಾ | ಕಾರವಾರ |
| ೪ | ಗ್ರೀನ್ ಇಂಡಿಯಾ | ದಾಂಡೇಲಿ | ಹಳಿಯಾಳ | ಕಾರವಾರ |
| ೫ | ಕಾರವಾರ ತಾಲೂಕಾ ಕುಣಬಿ ಸಮಾಜ ಅಭಿವೃದ್ಧಿ ಸಂಘ | ಹಾತ್ರೆ-ಭೈರೆ | ಕಾರವಾರ | ಕಾರವಾರ |
| ೬ | ಅಂಕೋಲಾ ತಾಲೂಕ ಕುಣಬಿ ಸಮಾಜ ಅಭಿವೃದ್ಧಿ ಸಂಘ | ಕೈಗಡಿ | ಅಂಕೋಲಾ | ಕಾರವಾರ |
| ೭ | ಕರ್ನಾಟಕ ರಾಜ್ಯ ಕುಣಬಿ ಸಮಾಜ ಅಭಿವೃದ್ಧಿ ಮಹಾ ಮಂಡಳ, ಕುಣಬಿ ಭವನ | ಜೋಯಿಡಾ | ಜೋಯಿಡಾ | ಕಾರವಾರ |

ಈ ನೂತನ ಸಂಘ-ಸಂಸ್ಥೆಗಳು ಇದೀಗ ಅಸ್ತಿತ್ವಕ್ಕೆ ಬಂದಿವೆ. ಉದಾಹರಣೆಗೆ: ಉತ್ತರ ಕನ್ನಡ ಜಿಲ್ಲಾ ಕುಣಬಿ ಸಂಘವು ಒಂದು ಮುಖ್ಯ ಸಂಸ್ಥೆ ಎನಿಸಿದ್ದು, ಇಡೀ ಉತ್ತರ ಕನ್ನಡ ಜಿಲ್ಲೆಯನ್ನೇ ತನ್ನ ಸೇವಾ ವ್ಯಾಪ್ತಿಯಲ್ಲಿ ಸೇರಿಸಿಕೊಂಡಿದೆ. ಇದರ ಮುಖ್ಯ ಕಚೇರಿ ಜೋಯಿಡಾದಲ್ಲಿದೆ.

ಈ ನೂತನ ಸಂಘ-ಸಂಸ್ಥೆಗಳು ಸಾಂಪ್ರದಾಯಿಕ 'ಓಡೋ' ಘಟಕಗಳಿಗಿಂತ ಭಿನ್ನವಾಗಿದ್ದು, ಇವುಗಳ ಸ್ವರೂಪ, ಧ್ಯೇಯೊದ್ದೇಶಗಳು, ಕಾರ್ಯ ವಿಧಾನಗಳು ವಿಭಿನ್ನ ಶೈಲಿಯಲ್ಲಿವೆ. ಈ ಸಂಘ-ಸಂಸ್ಥೆಗಳ ಪದಾಧಿಕಾರಿಗಳನ್ನು ನೇರ ಚುನಾವಣಾ ಪದ್ಧತಿಯಿಂದ

ಆಯ್ಕೆ ಮಾಡಲಾಗುತ್ತಿದ್ದು, ಈ ಮುಂಚೆಯ ವಂಶಪಾರಂಪರೆಯ ಆಯ್ಕೆ ತತ್ವ ಕೈಬಿಡಲಾಗಿದೆ. ಕುಣಬಿ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಯನ್ನೇ ಗುರಿಮಾಡಿಕೊಂಡಿದ್ದಲ್ಲದೆ ಇತರ ಉದ್ಯೋಗಗಳಾದ ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸುವುದು, ಶೈಕ್ಷಣಿಕ ಮುನ್ನಡೆ, ಹಿಂದುಳಿದ ಕುಣಬಿಯರಿಗೆ ಸಹಕಾರ ನೀಡುವುದು, ವೈದ್ಯಕೀಯ ಸೇವೆ ಮುಂತಾದ ಕಲ್ಯಾಣ ಚಟುವಟಿಕೆಗಳನ್ನು ಒಳಗೊಂಡಿರುತ್ತವೆ. ಮೇಲಿಂದ ಮೇಲೆ ಸದಸ್ಯರ ಸಭೆಗಳು ಕರೆಯಲಾಗುತ್ತದೆ ಮತ್ತು ಇದರ ಬಗ್ಗೆ ಎಲ್ಲಾ ಸದಸ್ಯರಿಗೂ ಮುದ್ರಿತ ನೋಟೀಸುಗಳನ್ನು ನೀಡಲಾಗುತ್ತದೆ. ಈ ಸಂಘಗಳ ಕಾರ್ಯಕಾರಣಿ ಮಂಡಳಿಯ ಸಭೆಗಳನ್ನು ಗುರಿಕಾರರ ಮನೆಯಲ್ಲಿಯೇ ನಡೆಸಲಾಗುತ್ತದೆ. ಈ ಸಂಸ್ಥೆಯ ಸದಸ್ಯರಿಂದ ಸದಸ್ಯತ್ವ ಶುಲ್ಕವನ್ನು ಸ್ವೀಕರಿಸಲಾಗುವದು. ಇವರು ಒಂದು ಲಿಖಿತ ಸಂವಿಧಾನವನ್ನು ಸಿದ್ಧಪಡಿಸುವರು. ಕೆಲವು ಸಂಘ ಸಂಸ್ಥೆಗಳು ಸರಕಾರದ ನೋಂದಣಿ ಪಡೆದು ಕಾನೂನು ಬದ್ಧವಾಗಿ ಮಾಡಲು ಪ್ರಯತ್ನಗಳು ನಡೆಸಿವೆ.

ಸಂಸ್ಥೆಯ ಅಧಿಕಾರಿಗಳ ಚುನಾವಣೆ, ಮುಂಗಡ ಪತ್ರ, ಅಂದಾಜು ಆಯಾವ್ಯಯ ಪತ್ರ, ಸಮಾವೇಶಗಳಲ್ಲಿ ಸದಸ್ಯರ ಹಾಜರಾತಿಯನ್ನು ಪಡೆಯುವ ಬಗ್ಗೆ, ಸಂಸ್ಥೆಗೆ ತನ್ನದೇ ಆದ ಸ್ವಂತ ಕಟ್ಟಡವನ್ನು ಹೊಂದುವ ಬಗ್ಗೆ, ಸಂಸ್ಥೆಯವತಿಯಿಂದ ಆಟ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುವ ಬಗ್ಗೆ, ಬಡ ಹಾಗೂ ಆರ್ಥಿಕವಾಗಿ ಹಿಂದುಳಿದ ಕುಣಬಿಯರಿಗೆ ಸೇವಾ ಯೋಜನೆಗಳು, ಕುಣಬಿ ಸಮುದಾಯದ ಜನಗಣತಿ, ಹೆಣ್ಣು ಮಕ್ಕಳ ಪ್ರತಿನಿಧಿತ್ವದ ಬಗ್ಗೆ, ಸಂಸ್ಥೆಯ ಕಡೆಯಿಂದ ಯಕ್ಷಗಾನ ನಾಟಕ ಮುಂತಾದವುಗಳನ್ನು ಏರ್ಪಡಿಸಿ ಮುಂತಾದ ಯೋಜನೆಗಳನ್ನು ರೂಪಿಸಿ ಕಾರ್ಯಕಾರಿ ಮಂಡಳಿಯಲ್ಲಿ ಚರ್ಚಿಸಲಾಗುತ್ತದೆ.

ಇತ್ತೀಚಿನ ದಿನಗಳಲ್ಲಿ ವಿದೇಶಿ ಹಣದ ವ್ಯಾಮೋಹಕ್ಕಾಗಿಯೇ ಅನೇಕ ಸ್ವಯಂ ಸೇವಾ ಸಂಸ್ಥೆಗಳು ಹುಟ್ಟಿಕೊಂಡಿವೆ. ಆದರೆ ಕುಣಬಿಯರ ಒಳಿತಿಗಾಗಿ ನಡೆಯುತ್ತಿರುವ ದಾಂಡೇಲಿಯಲ್ಲಿರುವ 'ಗ್ರೀನ್ ಇಂಡಿಯಾ ಸ್ವಯಂ ಸೇವಾ ಸಂಸ್ಥೆ' ವೈಚಾರಿಕ ನೆಲೆಗಟ್ಟಿನಲ್ಲಿ ಕೆಲಸ ಮಾಡುತ್ತಿದೆ. ಸಂಘಟನೆ, ಸಹಕಾರ ಈ ಎರಡೂ ಆಯಾಮಗಳಲ್ಲಿ ಕೆಲಸ ಮಾಡುತ್ತಿರುವ ಸಂಸ್ಥೆ 'ಜಂಗಲ್-ಜಮೀನು ಸಂಸ್ಕೃತಿ' ಎಂಬ ಧ್ಯೇಯ ಇಟ್ಟುಕೊಂಡು ಕಾರ್ಯ ನಿರ್ವಹಿಸುತ್ತಿದೆ. ಇತ್ತೀಚೆಗೆ ಜನ್ಮ ತಾಳಿರುವ ಉತ್ತರ ಕನ್ನಡ ಜಿಲ್ಲಾ ಬುಡಕಟ್ಟು ಅಭಿವ್ಯಕ್ತಿ ವೇದಿಕೆ ಉತ್ತರ ಕನ್ನಡ ಕುಣಬಿ, ಗವಳಿ, ಸಿದ್ಧಿ ಹಾಗೂ ಹಾಲಕ್ಕಿ ಸಮುದಾಯಗಳನ್ನು ಬೆಸೆಯುವ ಕಾರ್ಯ ಮಾಡುತ್ತಿದೆ. ಕುಣಬಿಯರ ಸಾಂಸ್ಕೃತಿಕ ಅನನ್ಯತೆ ಉಳಿಸುವಲ್ಲಿ ಗ್ರೀನ್ ಇಂಡಿಯಾದ ಕಳಕಳಿ ಎದ್ದು ಕಾಣುತ್ತದೆ.

**ಉಳಿತಾಯ ಸಂಘಗಳು** : ಕುಣಬಿ ಸಮುದಾಯ ಮೊದಲಿನಿಂದಲೂ ದುಡಿಮೆಗೆ, ಶ್ರಮಕ್ಕೆ ಬೆಲೆಕೊಡುತ್ತಾ ಬಂದಿದೆ. ಒಗ್ಗಟ್ಟು, ಅವರ ಬುಡಕಟ್ಟು ಮನೋಧರ್ಮದಿಂದ ಬಂದ ಸಹಜ

ಗುಣ, ಇದರ ಪ್ರತೀಕವೋ ಎಂಬಂತೆ ಕುಣಬಿಯರಲ್ಲಿ ಕೂಲಿಯನ್ನು ಉಳಿತಾಯ ಮಾಡುವ ಸುಮಾರು ೨೦೦ ಸಂಘಗಳು ಇತ್ತೀಚೆಗಷ್ಟೇ ಸ್ಥಾಪಿತಗೊಂಡಿವೆ. ಗಂಡಸರು ಮತ್ತು ಹೆಂಗಸರು ಇದರ ಸದಸ್ಯರಾಗಬಹುದು, ಈ ಸಂಘಗಳಲ್ಲಿ ಯಾವುದೇ ಹೊರಗಿನ ಹಸ್ತಕ್ಷೇಪವಿಲ್ಲ. ಆಡಳಿತ ಮತ್ತು ನಿರ್ವಹಣೆ ಅವರದೇ, ಇದರಿಂದಾಗಿ ಸಾಲ-ಸೋಲದಿಂದ ಬಳಲುವುದು ತಪ್ಪಿದೆ ಎಂಬುದು ಕುಣಬಿ ಮುಖಂಡರ ಅಭಿಪ್ರಾಯ.

ಕೆಲವು ಕುಣಬಿ ಸದಸ್ಯರ ಪ್ರಕಾರ ಈ ನೂತನ ಸೇವಾ ಸಂಘಗಳು ಹಣ ಸಂಗ್ರಹದಲ್ಲಿ ಆಸಕ್ತಿಯನ್ನು ಹೊಂದಿವೆ. ಆದರೆ ಸಾಮಾಜಿಕ ಕಲ್ಯಾಣ ಚಟುವಟಿಕೆ ಹಾಗೂ ಕುಣಬಿ ಸಮಾಜದ ಉದ್ಧಾರಕ್ಕಾಗಿ ಅವರು ಯಾವ ಕಾರ್ಯಗಳನ್ನು ಮಾಡುವದಿಲ್ಲ ಎನ್ನುತ್ತಾರೆ. ಕಾರಣ ಈ ಸಂಸ್ಥೆಗಳ ಚಟುವಟಿಕೆಗಳ ಬಗ್ಗೆ ಅಸಮಾಧಾನ ಹೊಂದಿರುವರು. ಅಸಂತೃಪ್ತ ಸದಸ್ಯರು ಸಂಘದ ಸಭೆಗಳಲ್ಲಿ ಮತ್ತಿತರ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿಲ್ಲ, ಹೀಗಾಗಿ ದೂರದೃಷ್ಟಿ ನಾಯಕತ್ವದ ಕೊರತೆ ಇರುವುದರಿಂದ, ಆರ್ಥಿಕ ಸಂಕಷ್ಟ, ಶಿಕ್ಷಣದ ಕೊರತೆ, ಸರಿಯಾದ ನಿಶ್ಚಿತ ಗುರಿಗಳಿಲ್ಲದೇ ಇರುವುದರಿಂದ, ಪ್ರೇರಣೆಯ ಅಭಾವದಿಂದ ಈ ನೂತನ ಸಂಘಗಳು ಸಮರ್ಪಕ ಕಾರ್ಯಚಟುವಟಿಕೆಯನ್ನು ನಡೆಸಲಾಗುತ್ತಿಲ್ಲ. ಅದೇನೇ ಇರಲಿ ಪ್ರಜಾಪ್ರಭುತ್ವದ ಮೂಲ ಗುಣಗಳ ಮೇಲೆ ಅವಲಂಭಿತವಾಗಿರುವ ಈ ಸಂಸ್ಥೆಗಳು ಮತ್ತು ಅವರು ನಡೆಸುತ್ತಿರುವ ವಿವಿಧ ವ್ಯವಹಾರಿಕ ಚಟುವಟಿಕೆಗಳು ಕುಣಬಿಯರು ನಿಧಾನವಾಗಿ ಒಗ್ಗಟ್ಟಾಗುತ್ತಿರುವುದು ಮತ್ತು ಅವರಲ್ಲಿ ರಾಜಕೀಯದ ಬಗ್ಗೆ ಜಾಗೃತಿ ಮೂಡುತ್ತಿರುವುದನ್ನು ನಾವು ಕಾಣುತ್ತೇವೆ. ಇಂದು ಕುಣಬಿಯರು ತಮ್ಮ ಜನಸಂಖ್ಯೆಯ ಬಗ್ಗೆ ಮತ್ತು ತಮ್ಮ ಸಮುದಾಯದ ಪ್ರಾಮುಖ್ಯತೆಯ ಬಗ್ಗೆ ಜಾಗೃತಿಯನ್ನು ಹೊಂದಿರುವರು.

**೫.೬ ಕುಣಬಿ ಆದಿವಾಸಿಗಳ ಪಟ್ಟಿಗೆ ಸೇರದ ಆದಿವಾಸಿಗಳು**

ಹಿಂದೆ ಶಿವಾಜಿಯ ಸೈನ್ಯದ ಜೊತೆ ಸಹಾಯಕರಾಗಿ ವಲಸೆ ಬಂದಿರುವ ಕುಣಬಿಯರು ಕಾಡುದಾರಿಗಳನ್ನು ಹುಡುಕಿ ತೋರಿಸುವುದು, ಸೈನ್ಯಕ್ಕೆ ಬೇಕಾಗುವ ಆಹಾರಗಳನ್ನು ಕಾಡಿನಲ್ಲಿ ಆಯ್ದು ತರುವುದು. ಜೊತೆಯಲ್ಲಿ ಆರ್ಥಿಕವಾಗಿ ಅಗತ್ಯವಿರುವ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವುದು ಇವರ ಮೂಲ ಕಾರ್ಯವಾಗಿತ್ತು. ಮೂಲತಃ ಮರಾಠಿ ಮಾತನಾಡುವ ಈ ಸಮುದಾಯ ಕಾಲಕ್ರಮದಲ್ಲಿ ಕಾಡಿನಲ್ಲಿ ಸೇರಿಹೋದರು. ಓದು ಬರಹದ ಗಂಧಗಾಳಿಯೂ ಇಲ್ಲದ ಇವರು ಸಾಂಬಾರು ರಾಣಿ ಎಂದೇ ಹೆಸರು ಪಡೆದಿದ್ದ ಗೇರುಸೊಪ್ಪೆಯ ಚೆನ್ನಭೈರಾದೇವಿಯ ಆಡಳಿತ ಕಾಲದಲ್ಲಿ ಗೋವಾ ಮೂಲಕ ಕಾಳು ಮೆಣಸು, ದಾಲಚಿನ್ನಿ, ಚೆಕ್ಕೆ,

ಏಲಕ್ಕಿ ಇತ್ಯಾದಿ ಸಾಂಬಾರು ಪದಾರ್ಥಗಳನ್ನು ವಿದೇಶಕ್ಕೆ ರಫ್ತು ಮಾಡುವ ಚೆನ್ನಭೈರಾದೇವಿರಾಣಿಯ ಕಾರ್ಯಕ್ಕೆ ಸಹಾಯಕರಾಗಿದ್ದರು.

ಸುಮಾರು ೪೦೦ ವರ್ಷಗಳ ಹಿಂದೆ ಮಹಾರಾಷ್ಟ್ರದಿಂದ ವಲಸೆ ಬಂದು ಒಂದು ಕಾಲದಲ್ಲಿ ಬುಡಕಟ್ಟು ಎಂದು ಗುರುತಿಸಲ್ಪಟ್ಟು ಇಂದು ಅದರಿಂದ ವಂಚಿತರಾಗಿ ಆಧುನಿಕತೆಗೆ ಮುಕ್ತವಾಗಿ ತೆರೆದುಕೊಳ್ಳದ, ತಮ್ಮ ಮೂಲ ಸಂಸ್ಕೃತಿಯನ್ನು ಇನ್ನೂ ಉಳಿಸಿಕೊಂಡಿರುವ ೧೯೫೨ರ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಆಯೋಗವು ಪಟ್ಟಮಾಡಿರುವ ಬುಡಕಟ್ಟುಗಳ ೮ ಲಕ್ಷಣಗಳನ್ನು ಹೊಂದಿರುವ ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಯ ಕುಣಬಿಯವರು. ಕುಣಬಿಯರಿಗೆ 'ಕುಣಬಿ, ಕುಡುಬಿ, ಕಾಡು ಕುಣಬಿ, ಕುಂಬ್ರಿ ಕುಣಬಿ, ಕುಣಬೇರು, ಕುಣಬಿ ಮರಾಠಿ' ಎಂಬ ಇನ್ನಿತರ ಉಪನಾಮಗಳಿಂದ ಕರೆಯುತ್ತಾರೆ. ಕುಣಬಿ ಎಂದರೆ ವನವಾಸಿ, ಗುಡ್ಡಗಾಡುವಾಸಿ ಎಂಬ ಅರ್ಥ ಬರುತ್ತದೆ.

ಇಂದು ಕರ್ನಾಟಕ ಸರಕಾರ ೫೦ ಸಮುದಾಯವನ್ನು ಬುಡಕಟ್ಟುಗಳನ್ನು ಆದಿವಾಸಿಗಳೆಂದು ಪರಿಗಣಿಸಿ ಅವರಿಗೆ ಸರಕಾರದ ಸೌಲಭ್ಯಗಳು ದೊರೆಯುವಂತೆ ಮಾಡುತ್ತಿದೆ. ಆದರೆ ಕರ್ನಾಟಕದಲ್ಲಿ ಇನ್ನೂ ಸಾಕಷ್ಟು ಸಮುದಾಯಗಳು ಶತಮಾನಗಳಿಂದ ಇಂದಿನವರೆಗೂ ತಮ್ಮ ಚಹರೆಯನ್ನು, ಕುಲಕಸಬನ್ನು, ಆಚಾರ ವಿಚಾರ, ಭಾಷೆ, ರೂಢಿ ಸಂಪ್ರದಾಯವನ್ನು, ಪ್ರತ್ಯೇಕತೆಯನ್ನು ಉಳಿಸಿಕೊಂಡು ಆದಿವಾಸಿಗಳ ಎಲ್ಲಾ ಲಕ್ಷಣಗಳನ್ನು ಹೊಂದಿದ್ದರು. ಸರಕಾರ ಇವರನ್ನು ಇಂದಿನವರೆಗೂ ಪರಿಶಿಷ್ಟ ಪಂಗಡಕ್ಕೆ ಸೇರಿಸದೆ ಪ್ರವರ್ಗ ೧ ರಲ್ಲಿ ಇಟ್ಟಿದೆ. ಆದರೆ ಆದಿವಾಸಿಗಳ ಎಲ್ಲಾ ಲಕ್ಷಣವನ್ನು ಹೊಂದಿ ಇಂದಿಗೂ ಕಾಡಿನಲ್ಲಿ ನಾಗರಿಕ ಸಮಾಜದಿಂದ ಪ್ರತ್ಯೇಕ ವಾಸಸ್ಥಾನದೊಂದಿಗೆ ಬಾಳುತ್ತಿದೆ. ಸರಕಾರದ ಯಾವುದೇ ಸೌಲಭ್ಯಗಳು ದೊರೆಯದೆ ಅತಂತ್ರ ಸ್ಥಿತಿಯಲ್ಲಿದೆ. ಅಂತಹ ಆದಿವಾಸಿಗಳಲ್ಲಿ ಕುಣಬಿ ಬುಡಕಟ್ಟು ಪಟ್ಟಿಗೆ ಸೇರದ ಸಮುದಾಯವಾಗಿದೆ. ಇಲ್ಲಿ ಇವರ ಕುರಿತು ಕೆಲವೊಂದು ಅಂಶಗಳನ್ನು ಇವರ ನೆಲೆ, ವೃತ್ತಿಯನ್ನು ಪರಿಚಯಿಸಲು ಪ್ರಯತ್ನಿಸಲಾಗಿದೆ. ಇವರು ಬೇರೆ ರಾಜ್ಯಗಳಿಂದ ವಲಸೆ ಬಂದಿದ್ದರು ಕಾಡಿನಲ್ಲಿ ಹಲವು ವರ್ಷಗಳಿಂದ ವಾಸಿಸುತ್ತಿದೆ. ಇವರ ಜನಸಂಖ್ಯೆ ಕೂಡ ಹೆಚ್ಚಾಗಿದೆ. ಆದ್ದರಿಂದ ಈ ಆದಿವಾಸಿಗಳಾಗದ ಆದಿವಾಸಿ ಕುಣಬಿ ಸಮುದಾಯವನ್ನು ಬುಡಕಟ್ಟು ಪಟ್ಟಿಗೆ ಸೇರಿಸಿ ಸೂಕ್ತ ಪ್ರಾತಿನಿದ್ಯವನ್ನು ದೊರಕಿಸಿಕೊಡಬೇಕು ಎಂಬುದು ಇಲ್ಲಿನ ಆಶಯವಾಗಿದೆ.

ಗೋವಾ ಮೂಲಕ ಕುಣಬಿಗಳು ಪೋರ್ಚುಗೀಸರ ದಬ್ಬಾಳಿಕೆಯಿಂದಾಗಿ ಕರ್ನಾಟಕ್ಕೆ ಬಂದು ನೆಲೆಸಿರುವವರು. ೧೫೦೪ ರಿಂದ ೧೫೯೯ರ ಕಾಲ ಘಟ್ಟದಲ್ಲಿ ಪೂರ್ಚುಗೀಸರು ಗೋವಾವನ್ನು ಆಕ್ರಮಿಸಿಕೊಂಡಾಗ ಪೋರ್ಚುಗೀಸರ ಬಲತ್ಕಾರದ ಮತಾಂತರವು ಕುಣಬಿ

ಸಮುದಾಯದವರು ದಿಕ್ಕು ಪಾಲಾಗಿ ದೇಶಾದ್ಯಂತ ವಲಸೆ ಹೋಗಲು ಇನ್ನೊಂದು ಕಾರಣವಾಯಿತು. ಈ ರೀತಿ ವಲಸೆ ಬಂದ ಗೋವಾ ಕುಣಬಿಯರು ಉತ್ತರ ಕನ್ನಡ, ಶಿವಮೊಗ್ಗ, ಉಡುಪಿ, ದಕ್ಷಿಣ ಕನ್ನಡ, ಬೆಳಗಾವಿ, ಕೊಡಗು ಮತ್ತೀತರ ಜಿಲ್ಲೆಗಳ ಪಶ್ಚಿಮ ಘಟ್ಟದ ಕಾಡು ಪ್ರದೇಶಗಳಲ್ಲಿ ಸೇರಿಹೋದರು. ಆಯಾಯ ಭಾಗದ ಭಾಷೆ, ಸಂಸ್ಕೃತಿ ಮತ್ತು ನಡವಳಿಕೆಯನ್ನು ಅವಲಂಬಿಸಿಕೊಂಡು ಇಂದಿಗೂ ಅಲ್ಲಿಯೇ ಬದುಕುತ್ತಿದ್ದಾರೆ. ಕುಣಬಿಯರ ಸಂಸ್ಕೃತಿಯ ಮೇಲೆ ವಿದೇಶಿ ಸಂಸ್ಕೃತಿ ದಾಳಿ ಮಾಡಿದ ಸಂದರ್ಭದಲ್ಲಿನ ಐತಿಹಾಸಿಕ ಘಟನೆಯನ್ನು ಕುಣಬಿಯರು ತಮ್ಮದೇ ಪುರಾಣದ ಮೂಲಕ ಇಂದಿಗೂ ಹೇಳುತ್ತಿದ್ದಾರೆ. ಈ ಪುರಾಣಕ್ಕೂ ಹಿಂದೂಗಳ ಪುರಾಣದ ನಂಬಿಕೆಗಳಿಗೂ ಸಾಮ್ಯತೆ ಇರುವುದು ಸ್ಪಷ್ಟ.

ಕುಣಬಿಗಳ ಕುಟುಂಬಗಳು ಇಂದಿಗೂ ಪಶ್ಚಿಮ ಘಟ್ಟದ ಕಾಡು ಮೇಡುಗಳಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಇವರಲ್ಲಿ ಒಂದು ಗುಂಪಿನ ಜನ ನಿಧಾನವಾಗಿ ಪೇಟೆಯ ಹತ್ತಿರದ ಜನರ ಸಂಪರ್ಕದಿಂದಾಗಿ ಬೆರಳೆಣಿಕೆಯಷ್ಟು ಕುಟುಂಬಗಳು ಪಟ್ಟಣದ ಆಸುಪಾಸಿನ ಹಳ್ಳಿಗಳಲ್ಲಿ ವಾಸಮಾಡಲು ತೊಡಗಿದರು. ಆದರೆ ಕಾಡಿನಲ್ಲಿದ್ದ ಜನರು ಕಾಡಿನಲ್ಲಿಯೇ ಇಂದಿಗೂ ಸೇರಿಹೋಗಿದ್ದಾರೆ.

ಉತ್ತರ ಕನ್ನಡ, ಶಿವಮೊಗ್ಗ, ದಕ್ಷಿಣ ಕನ್ನಡ, ಉಡುಪಿ, ಬೆಳಗಾವಿ ಮತ್ತು ಕೊಡಗು ಜಿಲ್ಲೆಗಳಲ್ಲಿ ಹೆಚ್ಚಾಗಿ ಕಾಣಸಿಗುವ ಕುಣಬಿಯರನ್ನು ಬೇರೆ ಬೇರೆ ಒಳಪಂಗಡಗಳಲ್ಲಿ ಗುರುತಿಸಬಹುದು. 'ಕುಣಬಿ, ಕುಡುಬಿ, ಗೋವಾ ಕುಣಬಿ, ಕುಡಿಯಾಲ ಕುಡುಬಿ, ಅರೆ ಕುಡುಬಿ, ಜೋಗಿ ಕುಡುಬಿ, ನಾಡಕುಡುಬಿ, ಕಾಡು ಕುಡುಬಿ, ಕುಮ್ತಿ ಕುಡುಬಿ, ಕುಣಬಿ ಮರಾಠಿ, ಕುಮ್ರಿ ಮರಾಠಿ' ಎಂದು ಒಂದೇ ಒಳ ಪಂಗಡವನ್ನು ಬೇರೆ, ಬೇರೆ ಸ್ಥಳ ಸಂದರ್ಭದಲ್ಲಿ ಬೇರೆ ಬೇರೆ ಹೆಸರಿನಿಂದ ಗುರುತಿಸಿದಂತೆ ಕಂಡುಬರುತ್ತದೆ.

ಬುಡಕಟ್ಟು ಸಮುದಾಯದ ೮ ಲಕ್ಷಣಗಳನ್ನು ಕುಣಬಿಯರು ಹೊಂದಿರುವ ವಿವರ ಇಲ್ಲಿದೆ.

೧. ನಾಗರಿಕ ಸಮುದಾಯದಿಂದ ದೂರವಿದ್ದು, ಇಂದಿಗೂ ಕಾಡು-ಮೇಡು ಮತ್ತು ಗುಡ್ಡಗಾಡು ಬೆಟ್ಟಗಳಲ್ಲಿ ಬದುಕುತ್ತಿದ್ದಾರೆ.

೨. ಪ್ರತ್ಯೇಕ ಬುಡಕಟ್ಟು ಭಾಷೆಯಾದ ಕಾಡು ಮರಾಠಿ ಅಂದರೆ ಕೊಂಕಣಿ ಮಿಶ್ರಿತ ಮರಾಠಿ ಭಾಷೆಯನ್ನು ಆಡುತ್ತಿದ್ದಾರೆ.

೩. ಪಿತೃ ಪೂಜೆ, ಭೂತ, ದೆವ್ವಗಳ ಆರಾಧನೆಯ ಜೊತೆ ತುಳಸಿ ಪೂಜೆಯನ್ನು ಮಾಡುವ ಪ್ರಾಚೀನ ಧಾರ್ಮಿಕ ಆಚರಣೆಗಳನ್ನು ಹೊಂದಿದ್ದಾರೆ.

೪. ಪ್ರಾಚೀನ ವೃತ್ತಿಗಳಾದ ಬೇಟೆಯಾಡುವುದು, ಬೇಸಾಯ ಮತ್ತು ಕಾಡು ಉತ್ಪತ್ತಿಗಳನ್ನು ಸಂಗ್ರಹಿಸುವ ವೃತ್ತಿಗಳನ್ನು ಅನುಸಿರಿಸುತ್ತಿದ್ದಾರೆ.

೫. ಬುಡಕಟ್ಟುಗಳು ಎಂದು ಗುರುತಿಸಲ್ಪಡುವ ಇವರು ಮಾಂಸ ಭಕ್ಷಣೆಯನ್ನು ಹಂಚಿಕೊಂಡು ಮಾಡುತ್ತಾರೆ.

೬. ಬುಡಕಟ್ಟುಗಳು ಎಂದು ಗುರುತಿಸಲ್ಪಡುವ ಸಾಮಾನ್ಯವಾಗಿ ಅರೆಬೆತ್ತಲೆಯಾಗಿದ್ದ ಜೀವನ ಇಂದಿಗೂ ಕೆಲವು ಭಾಗದಲ್ಲಿ ಕಾಣಸಿಗುವುದು.

೭. ವಲಸೆ ಸಂಸ್ಕೃತಿಯನ್ನು ಹೊಂದಿದ್ದು, ಕುಡಿತ ಮತ್ತು ಕುಣಿತಗಳಲ್ಲಿ ವಿಶೇಷ ಆಸಕ್ತಿಯನ್ನು ಬಿಂಬಿಸುವ ಕುಣಬಿ ನೃತ್ಯ, ಹೋಳಿ ನೃತ್ಯಗಳನ್ನು ಕಾಣುತ್ತಿದ್ದೇವೆ.

೮. ನೀಗ್ರೋಯಿಡ್, ಆಸ್ಟ್ರೋಲಾಯಿಡ್, ಮಂಗೋಲಾಯಿಡ್ ಮೂಲದ ಬಣ್ಣ ಮತ್ತು ಪರಂಪರೆಯನ್ನು ಕಾಣಬಹುದಾಗಿದೆ.

ಇತ್ತೀಚಿನ ವರ್ಷಗಳವರೆಗೂ ಹಣಕಾಸಿನ ವಿನಿಮಯಕ್ಕೆ ಬದಲಾಗಿ ವಸ್ತು ವಿನಿಮಯ ಪದ್ಧತಿ ರೂಢಿಯಲ್ಲಿತ್ತು. ಸೈಕಲ್‌ನ್ನು ನೋಡದಿರುವ ಹಾಗೂ ಕನಿಷ್ಟ ಓದು-ಬರಹ ಬಾರದ ಜನರೇ ಶೇಕಡ ೯೦ ರಷ್ಟು ಇರುವ ಕುಣಬಿ ಸಮುದಾಯದ ಹೋಳಿ ಹಬ್ಬವನ್ನು ಹಾಗೂ ತುಳಸಿ ಆರಾಧನೆಯನ್ನು ಆಚರಣೆಯಲ್ಲಿ ತಂದಿರುವುದು ಸಾಂಸ್ಕೃತಿಕ ಹಿನ್ನೆಲೆ ಮತ್ತು ಪರಿಸರಕ್ಕೆ ಅತೀ ಹತ್ತಿರವಿರುವುದುವೇದ್ಯವಾಗುತ್ತದೆ.

**ಉಪಯಕ್ತ ಮೌಲ್ಯಗಳಾದ:**

೧. ಸಂರಕ್ಷಣೆ.

೨. ಗೌಪ್ಯತೆಯನ್ನು ಕಾಪಾಡುವುದು.

೩. ಕುಟುಂಬದ ನಿಯಂತ್ರಣ ಮತ್ತು ಏಕತೆಯನ್ನು ಕಾಪಾಡುವುದು.

೪. ಕುಟುಂಬದ ವಿಘಟನೆಯನ್ನು ತಪ್ಪಿಸುವುದು.

೫. ಧಾರ್ಮಿಕ ಪವಿತ್ರತೆಯನ್ನು ಉಳಿಸಿಕೊಳ್ಳುವುದು.

ಮತ್ತು ಇವುಗಳನ್ನು ಕೌಟುಂಬಿಕ ರಚನೆಯಲ್ಲಿ ಜೋಡಿಸುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಕುಣಬಿಯರು ವಿವಿಧ ಘಟ್ಟಗಳಾದ ಮದುವೆ ಪದ್ಧತಿ, ಹೆರಿಗೆ, ಕಿವಿ ಚುಚ್ಚುವುದು, ರುತುಮತಿಯಾದಾಗಿನ ವ್ಯವಸ್ಥೆ, ಅಂತ್ಯ ಸಂಸ್ಕಾರ, ಪೂಜಾ ವಿಧಾನಗಳು, ಹಬ್ಬಗಳ ಆಚರಣೆ ತನ್ನದೇ ಆದ ವೈಶಿಷ್ಟತೆಯನ್ನು ಪಡೆದುಕೊಂಡಿದೆ. ಓದು-ಬರಹ ಬಾರದಿದ್ದರೂ ರಾಮಾಯಣವನ್ನು ಹಾಡಿನ ರೂಪದಲ್ಲಿ ತಲೆತಲಾಂತರದಿಂದ ಹಾಡಿಕೊಂಡು ಬಂದಿರುವ ವೈಶಿಷ್ಟ್ಯತೆ ಕುಣಬಿ ಸಮುದಾಯದವರಿಗೆ ಇದೆ.

**ಕುಣಬಿಯರ ಸಂಸ್ಕೃತಿ:** ಈ ಮೇಲೆ ಪರಿಚಯಿಸಲಾದ ಕುಣಬಿ ಸಮುದಾಯದ ಸಾಮಾನ್ಯ ಸಂಸ್ಕೃತಿಯನ್ನು ಈ ಅಧ್ಯಯನದಿಂದ ಕೆಳಗಿನಂತೆ ಕ್ರೋಢೀಕರಿಸಲಾಗಿದೆ.

**ದೈಹಿಕ ಲಕ್ಷಣ:** ನೀಗ್ರಿಟೋ, ಆಸ್ಟ್ರೋಲಾಯಿಡ್, ಮಂಗೋಲಾಯಿಡ್ ಹಾಗು ದ್ರಾವಿಡ್ ಬುಡಕಟ್ಟುಗಳ ಸಮೂದಾಯ ದೈಹಿಕ ಲಕ್ಷಣಗಳನ್ನು ಕುಣಬಿಯರು ದೈಹಿಕವಾಗಿ ಕುಳ್ಳಾಗಿದ್ದು ದೃಢಕಾಯರಾಗಿರುವರು. ಮೈಬಣ್ಣ ಕಪ್ಪ, ಅಗಲವಾದ ಮತ್ತು ಚಪ್ಪಟೆಯಾದ ಮೂಗು, ಇವರು ಸರಾಸರಿ ಎತ್ತರ ೫'.೨" ಸಾಧಾರಣವಾದ ಕೈಗಳು ಮತ್ತು ನೀಳಲಾದ ಕಾಲುಗಳು ಇಂತಹ ಕಾಲುಗಳನ್ನುಳ್ಳ ಕುಣಬಿಯರು ಕಾಡು ಮೇಡುಗಳಲ್ಲಿ ಒಂದು ಕಡೆಯಿಂದ ಮತ್ತೊಂದೆಡೆಗೆ ಅಲೆಯುವಾಗ ಕಡಿದಾದ ಬೆಟ್ಟದ ಇಳಿಜಾರುಗಳಲ್ಲಿ ಏರುವಾಗ, ಇಳಿಯುವಾಗ ಜಾರಿಬೀಳದಂತೆ ಸುಲಭವಾಗಿ ನಡೆದಾಡಬಲ್ಲರು. ನೀಳವಾದ ತಲೆಬುರುಡೆ, ಅಲೆಯಂತಿರುವ ತಲೆಗೂದಲು, ಅಗಲವಾದ ದವಡೆಯಲಬು ಇವರ ಪ್ರಮುಖ ದೈಹಿಕ ಚಹರೆಗಳಾಗಿವೆ. ಇವರು ಚುರುಕು ಸ್ವಭಾವದವರು.

**ವಸತಿ:** ಕುಣಬಿಯರು ಸಮಾನ್ಯವಾಗಿ ನೆಲೆಸಿರುವುದು ಗುಡ್ಡಗಾಡುಗಳ ಹಳ್ಳಿಗಳಲ್ಲಿ. ಕುಣಬಿಯರ ವಸತಿಯ ನಿವೇಶನವನ್ನು ಧಾರ್ಮಿಕ ವಿಧಿವಿಧಾನಗಳನ್ನೆಲ್ಲಾ ಪೂರೈಸಿದ ಮೇಲೆ ಆಯ್ಕೆ ಮಾಡುವರು. ಜೊತೆಗೆ ಅಲ್ಲಿನ ಮಣ್ಣಿನ ಫಲವತ್ತತೆ ಮತ್ತು ನೀರಿನ ಸೌಕರ್ಯಗಳನ್ನು ಗಮನಿಸಲಾಗುವುದು. ಇವುಗಳಲ್ಲಿ ನೀರಿನ ಸೌಲಭ್ಯವು ಅತಿ ಮುಖ್ಯ. ತಮಗೆ ಮತ್ತು ಅವರು ಸಾಕುವ ಜಾನುವಾರುಗಳಿಗೆ ಕುಡಿಯಲು ಯಥೇಚ್ಛವಾಗಿ ನೀರು ದೊರೆಯಬಹುದಾದದ ನದಿ, ಕೊಳ ಅಥವಾ ಸರೋವರಗಳ ಅಂಚಿನಲ್ಲಿ ಗುಡಿಸಲುಗಳನ್ನು ಕಟ್ಟಿಕೊಳ್ಳುವುದು ಸಾಮಾನ್ಯ. ಇವರ ಮನೆಗಳಲ್ಲಿ ಸಾಮಾನ್ಯವಾಗಿ ಗೋಡೆಗಳು ಮರದ ತುಂಡುಗಳಿಂದ, ಮಣ್ಣಿನಿಂದಲೂ ಮತ್ತು ಮೇಲ್ಛಾವಣಿ ಬಿದಿರುಗಳನ್ನು ಕಟ್ಟಿ ಅದರ ಮೇಲೆ ಹುಲ್ಲು ಹಾಕಿರುತ್ತಾರೆ. ಗುಡಿಸಲುಗಳೊಳಗೆ ಉಗ್ರಾಣ, ಅಡುಗೆ ಮನೆ ಮತ್ತು ಮಲಗುವುದಕ್ಕೆ ಪ್ರತ್ಯೇಕ ಮೂರು ವಿಭಾಗಗಳಿರುತ್ತವೆ. ಕುಣಬಿಯರ ಪ್ರತಿ ಹಳ್ಳಿಯಲ್ಲಿ ೮ ರಿಂದ ೧೫ ಗುಡಿಸಲುಗಳಿರುತ್ತವೆ.

ಗುಡ್ಡಗಾಡುಗಳಲ್ಲಿ ವಾಸಿಸುವ ಕುಣಬಿಯರ ಬದುಕು ಈಗಲೂ ತೀರಾ ಚಿಂತಾಜನಕ ಸ್ಥಿತಿಯಲ್ಲಿರುವದು ನನ್ನ ಅಧ್ಯಯನದಲ್ಲಿ ಕಂಡು ಬಂದಿದೆ. ಅವರು ವಾಸಿಸುವದು ನದಿ, ಕೊಳ, ಸರೋವರ, ಬೆಟ್ಟ, ದಟ್ಟ ಹಸಿರು ಇರುವಲ್ಲಿ. ಆದರೆ ಬದುಕು ಬಹಳ ಕಷ್ಟಕರ, ಏಕೆಂದರೆ ಇವರು ವಾಸಿಸುವಂತಹ ಪ್ರದೇಶ ಅತಿಯಾದ ಇಳಿಜಾರು ಪ್ರದೇಶಗಳಾಗಿವೆ. ಇನ್ನೂ ಕಾಡು ಪ್ರಾಣಿ, ಮಳೆಗಾಲ, ರಭಸವಾಗಿ ಹರಿಯುವ ಜಲಧಾರೆ ಹೀಗೆ ವಿವಿಧ ಪರಿಸರದಿಂದ ರಕ್ಷಿಸಿಕೊಂಡು

ಜೀವನ ಸಾಗಿಸುವಂತಾಗಿದೆ. ಹಲವಾರು ಸಾರೆ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಹೋಗುತ್ತಾರೆ. ಸೌಕರ್ಯಗಳು ತೀರಾ ಕಡಿಮೆ.

**ಆರ್ಥಿಕ ಜೀವನ** : ಕೃಷಿ ಮತ್ತು ಬೇಟೆಗಾರಿಕೆ ಕುಣಬಿಯರ ಪ್ರಮುಖ ವೃತ್ತಿಗಳು. ಇತ್ತೀಚೆಗೆ ಬೇಟೆಯಾಡುವುದಕ್ಕೆ ನಿಷೇಧಬಂದದ್ದರಿಂದ ಎಲ್ಲ ಬುಡಕಟ್ಟುಗಳು ಜೀವನಾಧಾರವಾಗಿ ಕೃಷಿಯನ್ನೇ ಹೆಚ್ಚಾಗಿ ಅವಲಂಬಿಸಿರುತ್ತವೆ. ಕೆಲವೇ ಕೆಲವು ಕುಟುಂಬಗಳಿಗೆ ಕಡಿಮೆ ಪ್ರಮಾಣದ ಕೃಷಿ ಜಮೀನಿದ್ದು ಉಳಿದ ಕುಟುಂಬಗಳು ಅದೇ ಪ್ರದೇಶದಲ್ಲಿ ಕೂಲಿನಾಲಿ ಮಾಡಿ ಬದುಕುತ್ತಿದ್ದಾರೆಯೇ ವಿನಃ ಸಣ್ಣ ಇಲ್ಲವೇ ದೊಡ್ಡ ಉದ್ದಿಮೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿಲ್ಲ. ನಗರ ಪ್ರದೇಶಗಳಿಗೆ ಹೋಗಿ ದುಡಿಯಬೇಕೆಂದರೆ ಸಂಪರ್ಕ ಸಾಧನ ಸೌಕರ್ಯಗಳಿಂದ ವಂಚಿತರಾಗಿದ್ದಾರೆ. ತಮ್ಮ ಮೂಲ ಕಸಬುಗಳಿಗೂ ಅನೇಕ ರೀತಿಯ ತೊಂದರೆಗಳನ್ನು ಎದುರಿಸುತ್ತಿದ್ದಾರೆ.

ಇವರು ಸ್ಥಳಾಂತರ ಬೇಸಾಯವನ್ನನುಸರಿಸುವರು. ಇವರು ವಾಸಿಸುವ ಬೆಟ್ಟ-ಗುಡ್ಡಗಳಲ್ಲಿ ಇಳಿಜಾರು ಬೇಸಾಯಕ್ಕೆ ಯೋಗ್ಯವಲ್ಲದಿದ್ದರೂ ಅವುಗಳನ್ನು ಹಂತ-ಹಂತವಾಗಿ ಸಾಗುವಳಿ ಮಾಡುತ್ತಾ ಬಂದಿರುವರು. ಕುಣಬಿಯರು ಈ ಮುಂಚೆ ಕಾಡನ್ನು ಸ್ವೇಚ್ಛೆಯಾಗಿ ಬಳಕೆ ಮಾಡಿಕೊಳ್ಳುತ್ತಿದ್ದರು. ಬೇಟೆಗಾರಿಕೆ, ಕಾಡಿನಲ್ಲಿ ದೊರೆಯುವ ಬಿದಿರು-ಹುಲ್ಲುಗಳಿಂದ ಬುಟ್ಟಿ-ಹಗ್ಗಗಳನ್ನು ತಯಾರಿಸಿಕೊಳ್ಳುವುದು. ಕಾಡಿನಲ್ಲಿ ಗಡ್ಡೆ, ಗೆಣಸು, ಅಂಟು, ಜೇನು, ಹಣ್ಣು, ಕಾಯಿಗಳನ್ನು ಸಂಗ್ರಹಿಸಿವುದು ರೂಢಿಯಲ್ಲಿತ್ತು. ಹೀಗೆ ಕುಣಬಿಯರ ಆರ್ಥಿಕ ಜೀವನವು ಅರಣ್ಯವನ್ನು ಬಹುವಾಗಿ ಅವಲಂಬಿಸಿತ್ತು. ಇತ್ತೀಚಿನ ವರ್ಷಗಳಲ್ಲಿ ಸ್ಥಳಾಂತರ ಬೇಸಾಯವನ್ನು ನಿಷೇಧಿಸಲಾಗಿದೆ. ಅರಣ್ಯ ಕಾಯ್ದೆಯಿಂದ ಬೇಟೆ, ಅರಣ್ಯ ಉತ್ಪನ್ನವೂ ನಿಷಿದ್ಧವಾಗಿದೆ. ಇತ್ತೀಚೆಗೆ ನೆರೆಹೊರೆಯವರ ಸಂಪರ್ಕದ ಪ್ರಭಾವದಿಂದಾಗಿ ಈಗ ಕುಣಬಿ ಸಮುದಾಯದವರ ಜೀವನವು ಸುಧಾರಿಸಿದ್ದರೂ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಬದಲಾವಣೆಗಳಾಗಿಲ್ಲ. ಆದ್ದರಿಂದ ಇವರಲ್ಲಿ ಬಹುಮಂದಿಯ ಆರ್ಥಿಕ ಜೀವನ ಕೆಳಮಟ್ಟದಲ್ಲಿದೆ.

**ಆಹಾರ** : ಬುಡಕಟ್ಟುಗಳೆಲ್ಲ ಸಾಮಾನ್ಯವಾಗಿ ಅಕ್ಕಿ, ರಾಗಿ, ಮೀನ, ಮಾಂಸಗಳನ್ನು ತಮ್ಮ ಆಹಾರವಾಗಿ ಉಪಯೋಗಿಸುತ್ತಾರೆ. ಕುಣಬಿಗಳು ಮಾಂಸಹಾರಿಗಳು. ಬೇಟೆ ಮಾಡಿದ ಪ್ರಾಣಿಗಳ ಮಾಂಸವನ್ನು ತಿನ್ನುವರು. ಧಾನ್ಯಗಳು ದೊರೆಯದ ಹಾಗೂ ಅರಣ್ಯ ಪ್ರದೇಶಗಳಲ್ಲಿ ಗಡ್ಡೆ, ಗೆಣಸು, ಹಣ್ಣು, ಕಾಯಿಗಳು ಮತ್ತು ಕೆಲವು ಸಸ್ಯದ ಎಲೆಗಳನ್ನು ತಿಂದು ಜೀವಿಸುವರು. ಸಾಕು ಪ್ರಾಣಿಗಳ ಮಾಂಸವನ್ನು ಸೇವಿಸಲು ನಿರ್ಬಂಧವಿದೆ. ಅಲ್ಲಿಯೂ ಸಾಮಾಜಿಕವಾಗಿ ಒಪ್ಪಿಗೆಯಾದ ಅಡುಗೆ ಪದ್ಧತಿಯನ್ನೇ ಅನುಸರಿಸಲಾಗುತ್ತದೆ.

**ಸಾಮಾಜಿಕ ಜೀವನ :** ಇವರು ತಾವು ನೆಲೆಸಿರುವ ಪ್ರದೇಶಗಳನ್ನು ಊರು ಹಾಗೂ ಸೀಮೆಗಳು ಎಂದು ಹೆಸರಿಟ್ಟುಕೊಂಡಿರುವರು. ಕುಣಬಿಯರ ಸಮುದಾಯದಲ್ಲಿ ನಾಲ್ಕು ವ್ಯಕ್ತಿಗಳು ಅತಿ ಮುಖ್ಯರು. ಅವರುಗಳೆಂದರೆ ಬುದವಂತ ಮಿರಾಶಿ, ವೇಳಿಪ್, ಮತ್ತು ಗಾವುಡ ಪ್ರಮುಖರಾಗಿದ್ದಾರೆ. ಇವರೆಲ್ಲರ ಅಧಿಕಾರ ವಂಶ ಪರಂಪರೆಯಿಂದ ಬಂದಿರುತ್ತದೆ. ಗ್ರಾಮಮಟ್ಟದಲ್ಲಿ ಸಾಮಾಜಿಕ, ಧಾರ್ಮಿಕ, ನ್ಯಾಯವ್ಯವಸ್ಥೆ, ಅಂತರ್‌ಜಾತಿ ವಿವಾಹ, ಅನೈತಿಕ ಸಂಬಂಧ, ಪ್ರೇಮ ಪ್ರಕರಣಗಳು ಮುಂತಾದವುಗಳಿಗೆ ಬಹಿಷ್ಕಾರ ಹಾಕುವ, ಹಾಗೂ ತಪ್ಪು ಮಾಡಿದವರಿಗೆ ಶಿಕ್ಷೆ ನೀಡುವ ಅಧಿಕಾರವನ್ನು ಹೊಂದಿರುವರು.

ತಮ್ಮ ವಂಶಸ್ಥರ ಅಥವಾ ಕುಲಸ್ಥರೊಡನೆ ವಿವಾಹ ಸಂಬಂಧವಿರುವದಿಲ್ಲ. ಬದಲಾಗಿ ಭಿನ್ನ ಗೋತ್ರದವರೊಡನೆ ವಿವಾಹ ಸಂಬಂಧವೇರ್ಪಡಿಸುವರು. ಹಿಂದು ದೇವತೆ-ದೇವರ ಆರಾಧಕರು. ಕುಣಬಿ ಸಮುದಾಯಗಳ ಎಲ್ಲಾ ಪಂಗಡಗಳ ಕುಲದೇವತೆ ಕಾಣ ಕೋಣ (ಗೋವಾ) ಮಲ್ಲಿಕಾರ್ಜುನ, ಸಿದ್ಧನಾಥ, ಕಾಫ್ರಿ, ಸೋಮನಾಥ ಎಂಬ ಹೆಸರಿನಲ್ಲಿ ಶಿವನನ್ನು ಕರೆಯುತ್ತಾರೆ. ಸ್ತ್ರೀ ದೇವರುಗಳಾದ ದುರ್ಗಾ, ಸಾತೇರ, ಗೌಳಾದೇವಿ ಎಂಬ ಹೆಸರಿನ ಸ್ತ್ರೀ ಶಕ್ತಿ ದೇವತೆಗಳನ್ನು ಆರಾಧಿಸುತ್ತಾರೆ. ಎಲ್ಲರ ಮನೆಗಳಲ್ಲಿ ತುಳಸಿ ಆದಿದೈವ; ತುಳಸಿಗೆ ನಿತ್ಯ ಪೂಜೆ ಇದೆ. ಹೋಳಿಹಬ್ಬ, ಸುಗ್ಗಿಹಬ್ಬ, ಹಟ್ಟಿಹಬ್ಬ, ಬಲೀಂದ್ರನ ಹಬ್ಬ, ತುಲಸಿ ಹಬ್ಬಗಳನ್ನು ಆಚರಿಸುತ್ತಾರೆ. ಇವರು ತಮ್ಮನ್ನು ಸಿಂಗರಿಸಿಕೊಂಡು ಹಬ್ಬ-ಹರಿದಿನ ಜಾತ್ರೆಗಳಿಗೆ ತೆರಳುತ್ತಾರೆ. ಕುಣಬಿ ಸಮುದಾಯದಲ್ಲಿ ಇಂದಿಗೂ ಹಿಂದಿನ ಆಡಳಿತ ಕ್ರಮ, ಸಾಮಾಜಿಕ ಜೀವನ ರೂಢಿಯಲ್ಲಿರುವುದನ್ನು ಕಾಣಬಹುದು.

**ಕುಲಚಿಹ್ನೆ / ಉಪಾಸನೆ :** ಕುಣಬಿ ಸಮುದಾಯದವರು ಕುಲಚಿಹ್ನೆ ಉಪಾಸಕರಾಗಿದ್ದಾರೆ. ಇವರು ಪ್ರಾಣಿ, ಪಕ್ಷಿ ಇಲ್ಲವೇ ವೃಕ್ಷ ಮೂಲದಿಂದ ತಮ್ಮ ಕುಲವನ್ನು ಗುರುತಿಸಿಕೊಳ್ಳುತ್ತಾರೆ. ಕುಲಚಿಹ್ನೆಗಳನ್ನು ದೇವತೆಯ ಸ್ಥಾನದಲ್ಲಿಟ್ಟು ಪೂಜಿಸುತ್ತಾರೆ. ಈ ಕುಲಚಿಹ್ನೆಗಳನ್ನು ಬಳಿ, ಬಳ್ಳಿಗಳೆಂದು ಕರೆಯುವ ವಾಡಿಕೆಯಿದೆ. ತಮ್ಮ ಬಳಿಯ ವೃಕ್ಷ ಇಲ್ಲವೆ ಪ್ರಾಣಿ, ಪಕ್ಷಿಗಳನ್ನು ಇವರು ನಾಶಪಡಿಸುವುದಿಲ್ಲ; ತಿನ್ನುವುದಿಲ್ಲ. ಕುಣಬಿಗಳಲ್ಲಿ ಅಡ್ನೋಕರ್ - ಕಡಾಲ್ ಬಳಿ, ಉಂಬರಟಕರ್-ಮಲ್ಲಿಗೆಬಳಿ, ಮಂಜರೆಕರ್-ಸಂಕಿನಬಳಿ, ರಾಣೆ-ಈಚಲುಬಳಿ, ಏರ್‌ಮೋರ್-ನಾಗರಬಳಿ. ಈ ಬಳಿಗಳು ಕುಲವನ್ನು ಆಧರಿಸಿಕೊಂಡ ಬಳಿಗಳಾಗಿವೆ. ಇದರಿಂದ ತಿಳಿಯುವುದೇನೆಂದರೆ ಒಂದೇ ಬಳಿಯಲ್ಲಿ ಮದುವೆಯಾಗದೆ ವಿರುದ್ಧ ಬಳಿಗಳಲ್ಲಿ ಮದುವೆಗಳು ನಡೆಯುತ್ತವೆ. ಈ ಬಳಿಗಳು ಕೆಲವು ಗುಂಪುಗಳಲ್ಲಿ ತಾಯಿಯಿಂದ ಮುಂದುವರಿದರೆ, ಇನ್ನು ಕೆಲವರಲ್ಲಿ ತಂದೆಯಿಂದ ಮುಂದುವರೆಯುತ್ತವೆ. ಬಹುಶಃ ಈ ಬಳಿಗಳು ಮೂಲತಃ

ತಾಯಿಯಿಂದಲೇ ಮುಂದುವರೆಯುತ್ತಿದ್ದು. ಅನಂತರ ಪಿತೃ ಪ್ರಧಾನ ವ್ಯವಸ್ಥೆಯ ಪ್ರಭಾವ ಕೆಲವರ ಮೇಲಾಗಿ, ಅದಕ್ಕನುಗುಣವಾಗಿ ತಂದೆಯಿಂದ ಬಳಿ ಮುಂದುವರೆಯುವ ಪದ್ಧತಿ ಬಂದಿರಬೇಕು.

**ಸಂಸ್ಕಾರಗಳು :** ಹುಟ್ಟಿನಿಂದ ಸಾವಿನವರೆಗಿನ ಜೈವಿಕ ಕ್ರಿಯೆಗಳಿಗೆ, ದೈಹಿಕ ಬದಲಾವಣೆಗಳಿಗೆ ಮಾನವ ಯಾವತ್ತೂ ಸ್ಪಂದಿಸುತ್ತಾ ಬಂದಿರುವ ಬಗೆಗಳು ಕುತೂಹಲಕಾರಿಯಾದವು. ಬುಡಕಟ್ಟು ಸಮುದಾಯಗಳಲ್ಲಂತೂ ಅವಿನ್ನೂ ಆಶ್ಚರ್ಯಕರವಾಗಿರುತ್ತವೆ. ಕುಣಬಿಗಳಲ್ಲಿನ ಈ ರೀತಿಯ ಸಂಸ್ಕಾರಗಳು ಎಲ್ಲ ಸಮುದಾಯಗಳಲ್ಲಿರುವಂಥವೇ. ಆದಾಗ್ಯೂ ಅವುಗಳಿಗೆ ತಮ್ಮದೆ ಆದ ಕೆಲವು ವೈಶಿಷ್ಟ್ಯಗಳಿವೆ. ಮದುವೆ,  ಹುಟ್ಟು, ನಾಮಕರಣ, ಕಿವಿಚುಚ್ಚುವುದು, ಕೂದಲು ತೆಗೆಯುವುದು (ಚೌಲಶಾಸ್ತ್ರ) ಹೆರಿಗೆ ಸಮಯ, ಸಾವು ಮುಂತಾದ ಸಂಸ್ಕಾರ ಸಮಯದಲ್ಲಿ ಇವರ ಸಮುದಾಯದ ಮುಖಂಡರಾದ ಗೌಡ, ಬುದವಂತಾದಿಗಳು ಪ್ರಧಾನ ಪಾತ್ರ ವಹಿಸುತ್ತಾರೆ. ಪುರೋಹಿತನ ಪ್ರವೇಶವು ಇತ್ತಿತ್ತಲಾಗಿ ಕೆಲ ಸಂಸ್ಕಾರಗಳಲ್ಲಿ ಇದೆ. ಈ ಸಂಸ್ಕಾರ ಸಮಯದಲ್ಲಿ ವಿಶೇಷ ರೀತಿಯ ವಿಧಿವಿಧಾನಗಳು ನಡೆಯುತ್ತವೆ.

**ಮನೋರಂಜನೆ :** ಬುಡಕಟ್ಟುಗಳು ಜಾನಪದ ತವನಿಧಿ. ಹಂಪಿ ಕನ್ನಡ ವಿಶ್ವವಿದ್ಯಾಲಯ, ಪ್ರಕಟಿಸಿರುವ ಕರ್ನಾಟಕ ಜನಪದ ಕಲೆಗಳ ಕೋಶದಲ್ಲಿ ಕುಣಬಿಗಳ ಜಾನಪದದ ವಿವಿಧ ಪ್ರಕಾರಗಳಾದ ಹಾಡು, ಕ್ರೀಡೆ, ಮಾಟ, ಮಂತ್ರ, ವೈದ್ಯ ಮುಂತಾದವು ಇದರಲ್ಲಿ ಸಾಕಷ್ಟು ಇವೆ. ಇವರು ತಮ್ಮ ಕಲೆಯನ್ನು ಕೇವಲ ಮನೋರಂಜನೆಗಾಗಿ ಪ್ರದರ್ಶಿಸದೆ ದೇವತೆಗಳ ಪ್ರೀತ್ಯರ್ಥವಾಗಿ ನಿಗದಿಪಡಿಸಿದ ದಿನದಂದು. ಪ್ರದರ್ಶಿಸಿ ಕಲೆಯ ಅಗ್ಗದ ಪ್ರದರ್ಶನವನ್ನು ನಿಯಂತ್ರಿಸಿ ಅದರ ಪಾವಿತ್ರ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ. ಇದರಿಂದಾಗಿ ಇವರಲ್ಲಿ ಪ್ರಚಲಿತವಿರುವ ಉನ್ನತ ಮಟ್ಟದ ಕಲೆಗಳಾದ ಸುಗ್ಗಿ ಕುಣಿತ, ತಾರ್ಲೆಕುಣಿತ, ಮುಗಡಿ ಕುಣಿತ, ಮದ್ದಲೆ ಕುಣಿ, ಸಿಗ್ಮಾ (ಹೋಳಿ) ಕುಣಿತ ಮುಂತಾದವುಗಳು ಬೇಕೆಂದಾಗಲೆಲ್ಲ ನೋಡಸಿಗುವುದಿಲ್ಲ. ಈ ಕಲೆಗಳು ಸಾಂಪ್ರದಾಯಿಕ ಅಥವಾ ಸಾಂದರ್ಭಿಕ ಕಲೆಗಳಾಗಿವೆ. ಹೋಳಿ ಹಬ್ಬದ ಸಂದರ್ಭದಲ್ಲಿ ಮಾತ್ರ ಮುದ್ದಲೆ ಕುಣಿತ ಜೀವ ತಳೆಯುವ ಈ ಕಲೆಗಳು ಧಾರ್ಮಿಕವಾದವೂ ಹೌದು. ಇದರಿಂದಾಗಿ ಕುಣಬಿಯರು ಒಂದು ಬುಡಕಟ್ಟು ಸಮುದಾಯವಾಗಿದೆ ಎಂದು ಹೇಳಲು ಯಾವುದೇ ಸಂದೇಹವಿಲ್ಲ.

**ಹಬ್ಬಗಳು :** ಬುಡಕಟ್ಟು ಆದಿವಾಸಿ ಸಮುದಾಯವಾದ ಕುಣಬಿ ಸಮುದಾಯವು ಕೇವಲ ಕೃಷಿಯನ್ನು ಮಾಡುತ್ತಾ ಜೀವನ ಸಾಗಿಸುವುದಲ್ಲದೆ ಹಬ್ಬಗಳನ್ನೂ ಆಚರಿಸುತ್ತ ಬರುತ್ತದೆ. ಅವುಗಳಲ್ಲಿ  ಹೋಳಿ, ದಸರಾ, ದೀಪಾವಳಿ, ಶಿವರಾತ್ರಿ, ಯುಗಾದಿ, ನಾಗರಪಂಚಮಿ ಮತ್ತು

ಚೌತಿ (ಗಣೇಶ) ಹಬ್ಬಗಳನ್ನು ಮಾಡುವುದರ ಮೂಲಕ ಸಂತೋಷವನ್ನು ಹಂಚಿಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲಿ ಕುಣಬಿಯರ ಬದುಕು ಸಾಂಸ್ಕೃತಿಕವಾಗಿ ಶ್ರೀಮಂತವಾದುದು.

**ಕಲೆ ಮತ್ತು ಸಾಹಿತ್ಯ :** ಬುಡಕಟ್ಟುಗಳಲ್ಲಿ ಆದಿವಾಸಿ ಸಮುದಾಯವಾಗಿ ಕುಣಬಿ ಸಮುದಾಯವು ಇತರೆ ಸಮುದಾಯಗಳಾದ ಗೊಂಡರು, ಹಾಲಕ್ಕಿ ಒಕ್ಕಲಿಗರು, ಸಿದ್ಧಿಗಳು, ಗೌಳಿಗರು, ತೋಡರು, ಹಕ್ಕಿಪಿಕ್ಕಿಯರು ಹೇಗೆ ಕಲೆಯಲ್ಲಿ ವಿಶಿಷ್ಟತೆಯನ್ನು ರೂಢಿಸಿಕೊಂಡು ಬಂದಿದ್ದಾರೋ ಅದೇ ರೀತಿಯಲ್ಲಿ ಕುಣಬಿಯರ ಕಲೆಯಲ್ಲಿ ವಿಶಿಷ್ಟತೆಯನ್ನು ಕಾಣಬಹುದಾಗಿದೆ.

ಕ್ಷೇತ್ರಕಾರ್ಯದ ಸಮಯದಲ್ಲಿ ಗಮನಿಸಿದಂತೆ ಕುಣಬಿಯರ ಕಲೆಯಲ್ಲಿ ಸ್ವಂತಿಕೆಯಿದೆ ಹಾಗೂ ಇತರೆ ಬುಡಕಟ್ಟುಗಳಿಗೆ ಕಲೆಯಲ್ಲಿ ಹೋಲಿಸಿಕೊಂಡರೆ ಭಿನ್ನವಾದ ರೀತಿಯ ಕಲೆಯನ್ನು ರೂಢಿಸಿಕೊಂಡಿದ್ದಾರೆ. ಕುಣಬಿಯರು ತಮ್ಮ ಕಲೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದಿರುವುದಕ್ಕೆ ಹೋಳಿ ಮೇಳದ ಸಂದರ್ಭದಲ್ಲಿ ಗುಮ್ಮಟಿಯನ್ನು ಬಾರಿಸುತ್ತ ಅವರು ಹಾಕಿರುವ ಬಣ್ಣ ಬಣ್ಣದ ಉಡುಪುಗಳು ಮುಖ್ಯವಾಗಿರುತ್ತವೆ. ಒಳನಿಲುವಂಗಿ, ಕಸೆಹಾಕಿ ಉಟ್ಟ ಕೆಂಪು, ನೀಲಿ, ಚೌಕಳಿ ಜರಿಸೀರೆ, ಕೈಗಳಿಗೆ ದಪ್ಪ ಬಳೆ, ಎದೆಗೆ ಕತ್ತರಿ ಆಕಾರದಲ್ಲಿ ಅಡ್ಡಲಾಗಿ ಹಾಕಿಕೊಂಡ ಕಪ್ಪು, ಬಿಳಿ ಬಣ್ಣದ ಕಾಗದ, ಅಬ್ಬಳಿಗೆ ಹೂವು, ಹಕ್ಕಿಯ ಗರಿಗಳಿಂದ ಅಲಂಕೃತರಾಗಿ ಸಿದ್ಧರಾದಾಗ ಈ ವೇಷಭೂಷಣಗಳು ಎಂಥವರನ್ನೂ ಆಕರ್ಷಿಸುತ್ತದೆ. ಹಾಗೆ ವ್ಯವಸ್ಥಿತವಾದ ರೀತಿಯಲ್ಲಿ ಮಾಡುವ ನರ್ತನ ರೋಮಂಚನಗೊಳಿಸುತ್ತದೆ.

**ಸಾಹಿತ್ಯ :** ಸಾಹಿತ್ಯದ ದೃಷ್ಟಿಯಿಂದ ಕುಣಬಿ ಸಮುದಾಯವು ಶ್ರೀಮಂತವಾದದ್ದು, ಯಾವುದೇ ಬುಡಕಟ್ಟು ಸಮುದಾಯಗಳು ತಮ್ಮ ಸಮುದಾಯಕ್ಕೆ ಸಂಬಂಧಿಸಿದಂತೆ ಅನೇಕ ಜನಪದ ಹಾಡುಗಳನ್ನು ಸ್ವತಃ ತಾವೇ ಕಟ್ಟಿ ಹಾಡುತ್ತಾರೆ. ಈ ಹಿನ್ನೆಲೆಯಲ್ಲಿ ಕುಣಬಿ ಸಮುದಾಯವು ಕೋಲಾಟಪದ, ಸುಗ್ಗಿ ಕುಣಿತ, ತಾರ್ಲೆಕುಣಿತ, ಹೋಳಿ ಹಬ್ಬಗಳಲ್ಲಿ ಅನೇಕ ಗೀತೆಗಳನ್ನು ಹಾಡುತ್ತಾರೆ. ಈ ಸಾಹಿತ್ಯವೆಲ್ಲವು ಅವರ ತಂದೆ ತಾಯಿಗಳಿಂದ ಹಾಗೂ ಹಿರಿಯರಿಂದ ಬಂದುದಾಗಿದೆ. ಆದ್ದರಿಂದ ಮರಾಠಿ, ತುಳು, ಕೊಂಕಣಿಯಲ್ಲಿ ಅವರ ಗೀತೆಗಳು ಇರುತ್ತವೆ.

ಈ ಸಮುದಾಯದ ಹಾಡುಗಳಲ್ಲಿ ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಕಥೆಗಳು ಹಾಡಿನ ರೂಪದಲ್ಲಿರುತ್ತವೆ. ಶ್ರಿ ಕೃಷ್ಣನ ಹಾಡುಗಳು ಇವರ ಸಾಹಿತ್ಯದ ದೃಷ್ಟಿಯಿಂದ ವಿಶೇಷವಾಗಿರುತ್ತದೆ. ಇವರು ಕೊಂಕಣಿ, ಮರಾಠಿ, ಕನ್ನಡ, ತುಳು ಭಾಷೆಗಳ ಮೂಲಕ ಹಾಡುಗಳನ್ನು ಕಟ್ಟಿ ಹಾಡುತ್ತಾರೆ. ಕುಣಬಿ ಸಮುದಾಯದ ಕಲೆ ಮತ್ತು ಸಾಹಿತ್ಯ ಬಹಳ ವಿಶಿಷ್ಟವಾಗಿರುವುದನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ.

**ವೈದ್ಯ :** ತಾವು ನೆಲೆಸಿರುವ ಪರಿಸರದಲ್ಲಿರುವ ವನಸ್ಪತಿ, ಪ್ರಾಣಿಪಕ್ಷಿ ಹಾಗೂ ಧಾತುಗಳಲ್ಲಿಯ ಔಷಧೀಯ ಗುಣಗಳನ್ನು ನೀರಿಕ್ಷೆ–ಪರೀಕ್ಷೆ ಮತ್ತು ಪ್ರಯೋಗಗಳಿಂದ ಕಂಡುಕೊಂಡು, ವನಸ್ಪತಿ, ಪ್ರಾಣಿ ಹಾಗೂ ಧಾತು ಜನ್ಯಮದ್ದು ಕೊಡುವುದರಲ್ಲಿ ಕುಣಬಿಯರು ನಿಸ್ಸೀಮರಾಗಿದ್ದಾರೆ. ಹಿಂದೆ ಹಳ್ಳಿಯ ಬಡಜನರು ದುಬಾರಿಯ ಸೀಮೆ ವೈದ್ಯರನ್ನು ಆಶ್ರಯಿಸದೆ ಈ ಗಾಂವಟೀ (ದೇಸೀ) ವೈದ್ಯರನ್ನೇ ಹೆಚ್ಚಾಗಿ ಆಶ್ರಯಿಸುತ್ತಿದ್ದರು. ಈಗ ಇವರ ವೈದ್ಯವನ್ನು ಸುಶಿಕ್ಷಿತ ಜನರು ಕಡೆಗಣಿಸುತ್ತಿದ್ದರೂ ಅರ್ಧಾಂಗವಾಯು, ಕಾಮಾಲೆ, ಎಲುಬುಮುರಿತಗಳಿಗೆ ಇವರನ್ನೇ ಆಶ್ರಯಿಸುತ್ತಿರುವದನ್ನು ಕಾಣುತ್ತೇವೆ. ಈ ಸಂದರ್ಭದಲ್ಲಿ ಅವರು ನೀಡುವ ಮದ್ದು ನಮ್ಮ ನಾಡಿನಲ್ಲಷ್ಟೇ ಅಲ್ಲಿ, ರಾಷ್ಟ್ರ ಅಂತಾರಾಷ್ಟ್ರ ಮಟ್ಟದಲ್ಲಿ ಪ್ರಸಿದ್ಧಿ ಪಡೆದಿವೆ. ಈ ಸಹಜ ವೈದ್ಯವಲ್ಲದೆ ಮಂತ್ರವೈದ್ಯದಲ್ಲಿಯೂ ಇವರು ಪಳಗಿದವರಾಗಿದ್ದಾರೆ. ಹಿಂದೆ ಮಾಂತ್ರಿಕರು ಒಂದು ತರದ ಹೊಗೆ ಬಿಟ್ಟು ಬೆಳೆ ಕಹಿಯಾಗುವಂತೆ ಮಾಡಿ, ಬೆಳೆಯನ್ನು ಹಂದಿಗಳು ತಿನ್ನದಂತೆ ಮಾಡುತ್ತಿದ್ದರಂತೆ. ಬೆಳೆಕೊಯ್ಯುವ ಮೊದಲು ಮಾಟ ಮಂತ್ರಗಳಿಂದ ಇನ್ನೊಂದು ಬಗೆಯ ಹೊಗೆ ಹಾಕಿ, ಬೆಳೆಯ ಕಹಿ ಹೊರಟುಹೋಗಿ, ಬೆಳೆಯ ಮೂಲ ರುಚಿ ಮರುಳುವಂತೆ ಮಾಡುತ್ತಿದ್ದರಂತೆ. ಈಗ ಇವೆಲ್ಲ ಕೇವಲ ಅಂತೆ–ಕಂತೆಗಳಾಗಿವೆ. ಕುಣಬಿಯರ ಮೇಲೆ ಈ ರೀತಿಯ ವೈದ್ಯ ಪದ್ಧತಿಯ ಪ್ರಭಾವವೂ ಸಾಕಷ್ಟು ಇದೆ. ಮಂತ್ರಗಾರರು ಮಂತ್ರಿಸಿ ಕೊಡುವ ತಾಯಿತ, ಬೇರು–ನಾರುಗಳನ್ನು ಇವರು ಈಗಲೂ ಧರಿಸುತ್ತಿದ್ದಾರೆ. ನಾನು ಅಧ್ಯಯನ ಸಮಯದಲ್ಲಿ ಕಂಡುಕೊಂಡ ಈ ತಾಯಿತ, ನಾರು–ಬೇರುಗಳು, ಭೂಷಣ–ಕಲೆಯ ಮೂಲ ರೂಪವನ್ನು ತೋರಿಸುತ್ತ ಇನ್ನೂ ತಮ್ಮಲ್ಲಿ ಪ್ರಾಚೀನ ಪರಂಪರೆ ಜೀವಂತವಾಗಿದೆ ಎಂಬುದನ್ನು ನಿರೂಪಿಸಿರುವರು.

**ಅಭಿವೃದ್ಧಿ :** ಕುಣಬಿಗಳು ಆಲಸಿಗಳಲ್ಲದಿದ್ದರೂ; ಅಲ್ಪ ಸಂತುಷ್ಟಿಗಳು. ತಮ್ಮ ಆರ್ಥಿಕ ಸಂಪನ್ಮೂಲಗಳನ್ನು ಹೆಚ್ಚಿಸಲು ವಿವಿಧ ಉದ್ಯೋಗ ಕೃಷಿಗಳನ್ನು ಮಾಡಿ, ಪ್ರಗತಿಯ ಹೆದ್ದಾರಿಯಲ್ಲಿ ದಾಪುಗಾಲು ಹಾಕಿ ಮುಂದುವರಿಯಬೇಕೆಂಬ ಹಠ ಇವರಿಗೆ ಇದ್ದಂತಿಲ್ಲ. ಗುಡ್ಡಗಾಡಿನಲ್ಲಿ ವಾಸಿಸುವ ಇವರು, ಹಿಂದೆ ಕಾಡಿನ ಉತ್ಪನ್ನಗಳಿಂದ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಈಗಿನ ಕಾನೂನಿನ ಪ್ರಕಾರ ಉತ್ಪನ್ನಗಳನ್ನು ಸಂಗ್ರಹ ಮಾಡಲಿಕ್ಕಾಗದೆ ದಿಕ್ಕೆಟ್ಟಿದ್ದಾರೆ. ಅವರಲ್ಲಿ ಬಹುಸಂಖ್ಯಾತರು ತೀರ ಬಡವರು. ಹೊಟ್ಟೆಯ ಪಾಡಿಗಾಗಿ ಚಿಕ್ಕ ಮಕ್ಕಳೂ ಕೂಡ ದುಡಿಯಬೇಕಾದ ಪರಿಸ್ಥಿತಿ ಇರುವದರಿಂದ ಇವರ ಮಕ್ಕಳು ವಿದ್ಯಾಭ್ಯಾಸದಿಂದ ವಂಚಿತರಾಗುತ್ತಿದ್ದಾರೆ. ಹೀಗಾಗಿ ಭಾರತಕ್ಕೆ ಸಾತಂತ್ರ್ಯ ಬಂದು ೬೩ ವರ್ಷಗಳಾದರೂ ಇವರಲ್ಲಿ ಸಾಕ್ಷರತೆಯ ಪ್ರಮಾಣ ನೂರಕ್ಕೆ ನಲವತ್ತು ಸಂಖ್ಯೆಯನ್ನು ಏರಿಲ್ಲ, ಪದವೀಧರರ ಸಂಖ್ಯೆ ಇಲ್ಲವೆ ಇಲ್ಲ. ಸರಕಾರಿ ಇಲ್ಲವೆ ಖಾಸಗಿ ಉದ್ಯೋಗಗಳಲ್ಲಿ ಉನ್ನತ ಹುದ್ದೆಯಂತೂ ಕನಸಿನ ಮಾತು.

ಇವರು ಉತ್ತರ ಕನ್ನಡ ಜಿಲ್ಲೆ ಜೋಯಿಡಾ, ಯಲ್ಲಾಪುರ, ಅಂಕೋಲಾ, ಹಳಿಯಾಳ, ಕಾರವಾರ ಮತ್ತು ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲೂಕುಗಳಲ್ಲಿ ಸುಮಾರು ೨೫ ರಿಂದ ೩೦ ಸಾವಿರದಷ್ಟು ಕುಣಬಿಗಳು ವಾಸವಾಗಿದ್ದಾರೆ. ವಿಶೇಷವಾಗಿ ಜಿಲ್ಲೆಯ ಗಡಿಭಾಗದಲ್ಲೇ ವಾಸ ಮಾಡಿರುವ ಕುಣಬಿಗಳು ಅರಣ್ಯ ಉತ್ಪನ್ನಗಳನ್ನು ಮಾರಿ ಬದುಕು ಸಾಗಿಸುತ್ತಿದ್ದು, ಈಗ ಕೃಷಿಯಲ್ಲೂ ತೊಡಗಿದ್ದಾರೆ. ಇವರ ಪಾರಂಪರಿಕ ಹಾಗೂ ಮೂಲ ವೃತ್ತಿ ಕುಮ್ರಿ ಬೇಸಾಯ, ಬೇಟೆ ಆದರೆ ಇಂದು ಕೃಷಿ, ಪಶುಸಂಗೋಪನೆ, ಕೂಲಿ ಮಾಡಿಕೊಂಡು ಇದ್ದಾರೆ. ಕುಣಬಿಯ ಮೇಲೆ ಆಧುನಿಕ ಪ್ರಭಾವ ಅಷ್ಟಾಗಿ ಆಗಿಲ್ಲ. ಇಂದಿಗೂ ತಮ್ಮ ವೇಷಭೂಷಣ, ಆಚಾರ-ವಿಚಾರ, ಭಾಷೆ, ಕುಲ ಪಂಚಾಯ್ತಿಗಳು ಹಿಂದಿನಂತೆಯೇ ಇದೆ. ಆಧುನಿಕ ಸಾಮಾಜಿಕ ವ್ಯವಸ್ಥೆ ಇವರ ಮೇಲೆ ಅಷ್ಟಾಗಿ ಪ್ರಭಾವ ಬೀರಿಲ್ಲ. ಆದಿವಾಸಿಗಳ ಎಲ್ಲಾ ಲಕ್ಷಣಗಳನ್ನು ಹೊಂದಿದ್ದರು ಸರಕಾರ ಇವರನ್ನು ಇಂದಿಗೂ ಬುಡಕಟ್ಟು ಪಟ್ಟಿಗೆ ಸೇರಿಸದೆ ಇವರನ್ನು ಅತಂತ್ರ ಸ್ಥಿತಿಗೆ ತಂದು ನಿಲ್ಲಿಸಿದೆ.

**ಉಪಸಂಹಾರ**

ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಮೂಲೆ ಗುಂಪಾಗುತ್ತಿರುವ ಕುಣಬಿ ಸಮುದಾಯದ ಸಮಗ್ರ ಅಭಿವೃದ್ಧಿ ಹಾಗೂ ಇವರ ಬದುಕು ಸುಂದರವಾಗಿ ಅರಳುವಂತೆ ತುರ್ತುಗಮನ ಹರಿಸಿ, ಇವರ ಶ್ರೇಯೋಭಿವೃದ್ಧಿಯ ಯೋಜನೆಗಳನ್ನು, ಇವರ ಮಾನಸಿಕ ಸ್ಥಿತಿಗಳನ್ನು ಅನುಲಕ್ಷಿಸಿ, ಕುಣಬಿಗಳು ನಿಂತ ನೆಲೆ ಪರಿಸರಗಳನ್ನು ಗಮನಿಸಿ, ಸಾಂಪ್ರದಾಯಿಕ ಕಟ್ಟು ಪಾಡುಗಳನ್ನು ನೋಡಿ ಇವರ ಬದುಕನ್ನು ರೂಪಿಸಬೇಕಾದ ಅವಶ್ಯಕತೆಯಿದೆ. ಇವರಲ್ಲಿ ತುಂಬಿಕೊಂಡಿರುವ ಮೂಢನಂಬಿಕೆ, ಅಂಧಶ್ರದ್ಧೆಗಳು ಕಳಚಿ ಬೀಳುವಂತೆ, ಉನ್ನತ ಮಟ್ಟದ ಸಾಹಿತ್ಯ ಕಲೆಗಳು, ರೂಢಿ ಸಂಪ್ರದಾಯಗಳು, ಚಿಗಿತು ಹಸಿರೊಡೆಯುವಂತೆ ಮಾಡಬೇಕಾಗಿದೆ. ಇವೆಲ್ಲ ಸಾಧ್ಯವಾಗಬೇಕಾದರೆ ಅವರಲ್ಲಿ ಸಾಕ್ಷರತೆಯ ಪ್ರಮಾಣವನ್ನು ತೀವ್ರಗತಿಯಲ್ಲಿ ಹೆಚ್ಚು ಮಾಡಬೇಕು.

ಅತ್ಯಂತ ಹಿಂದುಳಿದ ಕುಣಬಿ ಸಮುದಾಯ ಬುಡಕಟ್ಟಿನ ಎಲ್ಲ ಲಕ್ಷಣಗಳನ್ನು ಹೊಂದಿದ್ದು; ಕುಣಬಿಯರ ವಿವಿಧ ಘಟ್ಟಗಳಾದ ಮುದುವೆ ಪದ್ಧತಿ, ಹೆರಿಗೆ, ಕಿವಿಚುಚ್ಚುವುದು, ರುತುಮತಿಯಾದಾಗಿನ ವ್ಯವಸ್ಥೆ, ಅಂತ್ಯ ಸಂಸ್ಕಾರ, ಪೂಜಾ ವಿಧಾನಗಳು, ಹಬ್ಬಗಳ ಆಚರಣೆ ತಮ್ಮದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಗಿರಿಜನ ಪಟ್ಟಿಯಿಂದ ವಂಚಿತರಾಗಿರುವ ಕುಣಬಿ ಸಮುದಾಯವನ್ನು ಬುಡಕಟ್ಟು ಪಟ್ಟಿಗೆ ಸೆರಿಸಬೇಕೆಂಬ ಕುರಿತು ೧೫ ವರ್ಷಗಳಿಂದ ಸರ್ಕಾರದ ಗಮನಕ್ಕೆ ತಂದು ಹೋರಾಡುತ್ತಿರುವುದು ನ್ಯಾಯಸಮ್ಮತವಾಗಿದೆ.

ಪಕ್ಕದ ರಾಜ್ಯ ಗೋವಾದಲ್ಲಿ ೨೦೦೩ ರಲ್ಲಿ ಕುಣಬಿ ಸಮುದಾಯವನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಂಡ ಬಗ್ಗೆ ದಿನಾಂಕ ೨೨ ಏಪ್ರಿಲ್ ೨೦೦೩ ರಂದು ಪ್ರಕಟಿಸಲಾಗಿದೆ. ಗೋವಾ ಗಡಿ ಭಾಗದ ಪ್ರದೇಶದಲ್ಲಿ ವಾಸಿಸುವ ಕುಣಬಿಗಳ ಹಳ್ಳಿಗಳಲ್ಲಿ ಪ್ರಾಥಮಿಕ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ ಮತ್ತು ಪರಿಶಿಷ್ಟ ಪಂಗಡದ ಸೌಲಭ್ಯಕ್ಕಾಗಿ ಈ ಭಾಗ ಗೋವಾ ರಾಜ್ಯಕ್ಕೆ ಸೇರ್ಪಡೆ ಮಾಡಬೇಕೆಂಬ ಒತ್ತಾಯ ಕೂಡ ಕೇಳಿಬರುತ್ತದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಕುಣಬಿ ಸಮುದಾಯ ಅತ್ಯಂತ ಹಿಂದುಳಿದ ಸಮಯದಾಯ. ಶೈಕ್ಷಣಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕವಾಗಿ ಸರ್ಕಾರ ಇವರ ಅಭಿವೃದ್ಧಿಗೆ ಪ್ರಯತ್ನ ಪಡುವುದರ ಜೊತೆಗೆ ಇವರನ್ನು ಪರಿಶಿಷ್ಟ ಪಂಗಡ ಪಟ್ಟಿಗೆ ಸೇರಿಸಿದರೆ ಈ ಸಮುದಾಯ ಸರ್ವಾಂಗೀಣ ಪ್ರಗತಿ ಹೊಂದುತ್ತದೆ.

**ಟಿಪ್ಪಣೆಗಳು**

೧. ಡಾ. ರಮೇಶ ಜೆ.ಕೆ. : 'ಮರಾಠಿ ಕುಣಬಿಗಳು'. ಪು. ೬, ೨೦೦೮.

೨. ಪ್ರಶಾಂತ ಹೆಚ್.ಡಿ. : 'ಜನಸಮುದಾಯ ಸಂಪುಟ'. ಕರ್ನಾಟಕ ರಾಜ್ಯಕೋಶ-೪, ಪು. ೯, ೨೦೦೦.

೩. ಡಾ. ಕೆ. ಎಂ. ಮೇತ್ರಿ, ಡಾ. ಚೆಲುವರಾಜು 'ಬುಡಕಟ್ಟು ಅಧ್ಯಯನ ಸಂಪ್ಮಟ:೩, ಸಚಿಚಿಕೆ:೨, ಪುಟ-೫೨-೫೪, ೨೦೦೬

೪. ಡಾ. ಬೋರಲಿಂಗಯ್ಯ ಹಿ.ಚಿ. : 'ಕುಣಬಿಯರು', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೫೫-೫೭, ೨೦೧೦.

5. Vidyarthi and Rai : The Tribal Culture of India. pp. 195-196, 1977.

6. Thurston Edger : Caste and Tribes of South India. pp. 99-100, 1909.

7. Renuka, Pamecha : Elites in a Tribal Society. p. 214, 1985.

8. Mann and Mann K. : Tribal Cultures and Change. p. 6, 1989.

9. Pratapsinh Velip Kankar : The Kurmis-Kunbis of India. pp. 86-87, 2006.

೧೦. ಡಾ. ಪ್ರಭಾಕರ ಎ. ಎಸ್. 'ಆದಿವಾಸಿಗಳ ಆಖ್ಯಾನ' ಪುಟ ೪೩೮, ೨೦೦೫

೧೧. ಅದೇ ಲೇಖಕರ ಪು ೨೧೬

೧೨. ಅದೇ ಲೇಖಕರ ಪು ೨೧೯.

೧೩. ಅದೇ ಲೇಖಕರ ಪು ೨೨೮.

೧೪. ಪ್ರೊ. ಲಕ್ಕಪ್ಪಗೌಡ ಎಚ್. ಜೆ. 'ಕರ್ನಾಟಕ ಬುಡಕಟ್ಟುಗಳು', ಸಂಪ್ಮಟ:೧, ಪ್ಮಟ ೨೪೨, ೧೯೯೮

೧೫. ಅದೇ ಲೇಖಕರ ಪು ೨೪೯

೧೨. ಅದೇ ಲೇಖಕರ ಪು ೨೫೪.

೧೩. ಅದೇ ಲೇಖಕರ ಪು ೨೬೨.

ಅಧ್ಯಾಯ ೬

# ಅಭಿವೃದ್ಧಿ ಯೋಜನೆಗಳು ಮತ್ತು ಕುಣಬಿ ಸಮುದಾಯ

ಅಧ್ಯಾಯ ೬

# ಅಭಿವೃದ್ಧಿ ಯೋಜನೆಗಳು ಮತ್ತು ಕುಣಬಿ ಸಮುದಾಯ

## ೬.೧ ಅಭಿವೃದ್ಧಿ ಯೋಜನೆಗಳು

ಪರಿಸರ ವಿಧಾನಕ್ಕೆ ತಕ್ಕಂತೆ ಜೀವನ ರೂಪಿಸಿಕೊಳ್ಳುವುದು ಮಾನವನ ಲಕ್ಷಣ. ಹಾಗೆ ಯೋಚಿಸುತ್ತಾ ನಡೆದಾಗ ಪ್ರತಿ ಹಳ್ಳಿ, ಊರು, ಜಿಲ್ಲೆ, ರಾಜ್ಯ, ದೇಶ ಎಲ್ಲವೂ ಪ್ರಕೃತಿಗೆ ತಕ್ಕಂತೆ ಸಂಸ್ಕೃತಿ ಬೆಳೆಸಿಕೊಂಡಿರುವುದನ್ನು ನಾವು ನೋಡುತ್ತೇವೆ. ಆ ಸ್ಥಳದ ಪ್ರಕೃತಿಯ ಅನುಕೂಲದಂತೆ ಜನಜೀವನ ಆಚಾರ ಪದ್ಧತಿಗಳು ರೂಢಿಯಲ್ಲಿರುತ್ತವೆ. ಉತ್ತರ ಕನ್ನಡ ಅತ್ತ ಮಲೆನಾಡಿನ ಮಡಿಲಿನಲ್ಲಿ ಅಡಗಿ ಮುಸು ಮುಸು ಚಳಿಯಲ್ಲಿ ಬೆಚ್ಚಗೆ ಮಲಗಿದ್ದರೆ, ಇತ್ತ ಕರಾವಳಿಯ ತೀರದಲ್ಲಿ ನಮ್ಮ ಮೀನುಗಾರತಿಯರು ಬೀಸುವ ಮೂಡು ಗಾಳಿಗೆ ಎದುರಾಗಿ ಕಡಲಿನತ್ತ ಮುಖ ಮಾಡಿ ನಿಲ್ಲುತ್ತಾರೆ. ಕರಾವಳಿಯ ತೀರದ ಈ ಐದು ತಾಲೂಕುಗಳನ್ನು ಬಿಟ್ಟರೆ ಈ ಜಿಲ್ಲೆಯ ವ್ಯಕ್ತಿತ್ವ ಪರಿಪೂರ್ಣವಾಗುವದಿಲ್ಲ. ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹೀಗೆ ಎಲ್ಲ ದೃಷ್ಟಿಯಿಂದ ಉತ್ತರ ಕನ್ನಡ ಕರಾವಳಿಗೆ ತುಂಬಾ ಪ್ರಾಮುಖ್ಯವಿದೆ.

ಉತ್ತರ ಕನ್ನಡ ಜಿಲ್ಲೆ ಇದೀಗ ಸಂಪೂರ್ಣವಾಗಿ ತನ್ನನ್ನು ಆಧುನಿಕ ಯೋಜನೆಗಳಿಗೆ ಒಡ್ಡಿಕೊಂಡು ತಲ್ಲಣಗಳನ್ನು ಅನುಭವಿಸುತ್ತಿದೆ. ಪ್ರಸ್ತುತ ಅಧ್ಯಾಯದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿನ ಸರಕಾರದ ವಿವಿಧ 'ಅಭಿವೃದ್ಧಿ ಯೋಜನೆಗಳು' ಕುಣಬಿ ಸಮುದಾಯದ ಮೇಲೆ ಉಂಟುಮಾಡಿರುವ ಪರಿಣಾಮಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. 'ಅಭಿವೃದ್ಧಿ' ಎಂದರೆ ಆರ್ಥಿಕವಾಗಿ ಬಲಿಷ್ಠವಾಗುವುದು, ಭೌತಿಕವಾಗಿ ಸಮೃದ್ಧವಾಗುವುದು ಎಂಬುದು ಸರಳ ಸಮೀಕರಣ. ಸರಕಾರವು ತನ್ನ ಸಮುದಾಯಗಳ ಮತ್ತು ಒಟ್ಟಾರೆಯ ನಿರ್ಧಿಷ್ಟ ಪ್ರದೇಶವೊಂದರ ಅಭಿವೃದ್ಧಿಗಾಗಿ ಪ್ರಾರಂಭಿಸುವ ಯೋಜನೆಗಳು ಎಂದು ಭಾವಿಸುವುದು ಸಾಮಾನ್ಯ. ಆದರೆ ಸರಕಾರದ ಬೃಹತ್ ಅಭಿವೃದ್ಧಿ ಯೋಜನೆಗಳು ಹೀಗಿರುವುದಿಲ್ಲ. ಸಾಮಾಜಿಕ-ರಾಜಕೀಯ ಬದುಕಿನಲ್ಲಿ ನೈತಿಕ ವಿವೇಕವೇ ಮಾಯವಾಗುತ್ತಲಿದೆ. ನಗರಗಳ ಜನರ ಕೊಳ್ಳುಬಾಕತನವನ್ನು ಉತ್ತೇಜಿಸಲು ಸರಕಾರ - ಉದ್ಯಮಗಳು, ತಂತ್ರಜ್ಞಾನ, ವಿಜ್ಞಾನಗಳೆಲ್ಲ ಸೇರಿ ಸ್ಪರ್ಧೆ ನಡೆಸುತ್ತಿವೆ. ಏಕೆಂದರೆ ಎಲ್ಲಿ ಕೇಳಿದರೂ 'ಆರ್ಥಿಕವಾಗಿ ಬಲಿಷ್ಠವಾದ ಭಾರತವನ್ನು ಕಟ್ಟಬೇಕು' ಎಂಬುದೇ ನಮ್ಮ ಭಾಷಣಗಳ, ವಿಚಾರ ಸಂಕಿರಣಗಳ ಮುಖ್ಯ ವಿಷಯವಾಗುತ್ತಿದೆ. ನಗರಗಳ ವಿಸ್ತರಣೆ, ಭಾರೀ ಉದ್ಯಮಗಳ ಸ್ಥಾಪನೆ, ವಿದ್ಯುಚ್ಛಕ್ತಿ ಯೋಜನೆ ಮುಂತಾದ ನಾನಾ ಕಾರಣಗಳಿಂದಾಗಿ ಬುಡಕಟ್ಟು ಸಮುದಾಯಗಳನ್ನು ಒಕ್ಕಲೆಬ್ಬಿಸಿ ಅವರ ಜೀವನ ಕ್ರಮಕ್ಕೆ ಹೊಂದದ ಸ್ಥಳಗಳಿಗೆ

ಬಲವಂತವಾಗಿ ಪಲ್ಲಟಗೊಳಿಸಲಾಗುತ್ತಿದೆ. ಆದರೆ ಸರಕಾರದ ಬೃಹತ ಅಭಿವೃದ್ಧಿ ಯೋಜನೆಯಲ್ಲಿ ಹೀಗಿರುವುದಿಲ್ಲ. ಬೃಹತ್ ಅಭಿವೃದ್ಧಿ ಯೋಜನೆಗಳೆಂದರೆ ಅಧಿಕ ಉತ್ಪಾದನೆ ಮಾಡುವ ಮತ್ತು ತೀವ್ರಗತಿಯಲ್ಲಿ ಆರ್ಥಿಕತೆಯನ್ನು ಪ್ರಭಾವಿಸುವ ಉತ್ಪಾದನಾ ಘಟಕಗಳು ಮಾತ್ರ. ಅವುಗಳಿಗೆ ದೇಶದ ಒಟ್ಟಾರೆ ಜನಸಂಖ್ಯೆಯಲ್ಲಿನ ಬಡವರಾಗಲಿ, ನಿಸರ್ಗದ ವೈವಿಧ್ಯತೆಯಾಗಲಿ, ಇಲ್ಲಿನ ಸಾಮಾಜಿಕ ಆರ್ಥಿಕ ವಿಷಮತೆಯಾಗಲಿ ಮುಖ್ಯವಲ್ಲ. ಈ ಯೋಜನೆಗಳು ತಮ್ಮ ಮೇಲೆ ಹೂಡಿದ ಬಂಡವಾಳವನ್ನು ಪುನರುತ್ಪಾದಿಸುವುದನ್ನು ಮಾತ್ರ ಗುರಿಯಾಗಿಸಿಕೊಂಡಿರುತ್ತವೆ. ಅಂದರೆ ಬಂಡವಾಳದ ಮರು ಉತ್ಪಾದನೆ ಈ ಅಭಿವೃದ್ಧಿ ಯೋಜನೆಗಳ ಪರಮ ಗುರಿ. ಇಲ್ಲಿ ಆಗುವುದು ಆರ್ಥಿಕ ಉತ್ಪಾದನೆಯೇ ಹೊರತು ಮಾನವ ಅಭಿವೃದ್ಧಿಯಲ್ಲ.

ಸ್ವಾತಂತ್ರ್ಯ ನಂತರ ಭಾರತ ಅನುಸರಿಸಿದ್ದು ಯುರೋಪ್ ಮಾದರಿಯ ಅಭಿವೃದ್ಧಿ ನೀತಿಯನ್ನು. ಈ ಕಾರಣಕ್ಕಾಗಿಯೇ ಭಾರತ ಯುರೋಪಿನ ಅಭಿವೃದ್ಧಿ ಮಾದರಿಯ ಭಾರತವನ್ನು ಆರ್ಥಿಕವಾಗಿ ಸ್ವತಂತ್ರವಾಗಿಸಲಿಲ್ಲ. ಬ್ರಿಟೀಷರು ತಾಂತ್ರಿಕವಾಗಿ ಭಾರತಕ್ಕೆ ಸ್ವಾತಂತ್ರ್ಯ ಕೊಟ್ಟರೂ ಸಹ ಅವರು ಇಲ್ಲಿ ಸ್ಥಾಪಿಸಿದ 'ಯುನಿಲಿವರ್' ಕಂಪನಿಯು ಭಾರತದ ಮಾರುಕಟ್ಟೆಯನ್ನು ಇಡಿಯಾಗಿ ಆಕ್ರಮಿಸಿತು. ಸ್ವತಂತ್ರ ಭಾರತದ ಪ್ರಥಮ ಪ್ರಧಾನಿಗಳಾದ ಜವಾಹರಲಾಲ ನೆಹರು, ಸಮಾಜವಾದಿ ಆಶಯಗಳಿಂದ ಪ್ರಭಾವಿತರಾಗಿದ್ದರೂ ಸಹ, ಅವರು ಅನುಸರಿಸಿದ್ದು ಯುರೋಪಿನ ಬಂಡವಾಳಶಾಹಿ ಅಭಿವೃದ್ಧಿ ಮಾದರಿಯನ್ನು. ಯುರೋಪಿನ ಅಭಿವೃದ್ಧಿ ಮಾದರಿ ಎಂದರೆ ಬೃಹತ್ ಯೋಜನೆಗಳ ಅನುಷ್ಠಾನ. ಪ್ರಧಾನಿ ನೆಹರು ಅವರು ಬೃಹತ್ ಹಾಗೂ ಮಧ್ಯಮ ನೀರಾವರಿ ಜಲಾಶಯಗಳ ಪ್ರಾಮುಖ್ಯತೆಯ ಬಗ್ಗೆ ಹೊಂದಿದ್ದ ಆಳವಾದ ಅರಿವಿನಿಂದ ಬೃಹತ್ ಹಾಗೂ ಮಧ್ಯಮ ನೀರಾವರಿ ಜಲಾಶಯಗಳನ್ನು 'ಆಧುನಿಕ ಭಾರತದ ಪವಿತ್ರ ದೇವಸ್ಥಾನಗಳು' ಎಂದು ವರ್ಣಿಸಿದ್ದಾರೆ. ಇದರಿಂದಾಗಿ ನೀರಾವರಿ ಯೋಜನೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯು ದೊರಕಿತು. ಹೀಗಾಗಿ ಭಾರತ ಇಂದು ಆಣೆಕಟ್ಟು ನಿರ್ಮಾಣದಲ್ಲಿ ವಿಶ್ವದಲ್ಲಿಯೇ ಮೂರನೆಯ ಸ್ಥಾನ ಪಡೆದಿದೆ. ಪ್ರಪಂಚದ ಪ್ರತಿಶತ ೪೦ ರಷ್ಟು ಬೃಹತ್ ಆಣೆಕಟ್ಟುಗಳು ಭಾರತದಲ್ಲಿ ನಿರ್ಮಿಸಲ್ಪಟ್ಟಿವೆ.

ಬೃಹತ್ ಆಣೆಕಟ್ಟುಗಳು, ದೊಡ್ಡ ಕೈಗಾರಿಕಾ ವಲಯ, ಅಣು ಸ್ಥಾವರಗಳು, ಯುರೋಪಿನ ಬಂಡವಾಳಶಾಹಿ ರಾಷ್ಟ್ರಗಳ ದೃಷ್ಟಿಯಲ್ಲಿ ಅಭಿವೃದ್ಧಿಯನ್ನು ಸಾಧಿಸಲು ಇರುವ ವಿವಿಧ ಆಯಾಮಗಳು. ಕೈಗಾರಿಕಾ ಕ್ರಾಂತಿಯ ನಂತರ ಆರ್ಥಿಕತೆಯ ದೃಷ್ಟಿಯನ್ನು, ಬಲಾಢ್ಯವಾಗಿ ಬೆಳೆದು ನಿಂತ ಯುರೋಪನ್ನು, ಯುರೋಪಿನ ಮಾಜಿ ವಸಾಹತುಗಳು ಅನುಕರಿಸಲು ಆರಂಭಿಸಿದವು. ಜೊತೆಗೆ ಯುರೋಪಿನ ರಾಷ್ಟ್ರಗಳು ತಮ್ಮ ವಸಾಹತುಗಳನ್ನು ಆರ್ಥಿಕವಾಗಿ

ಪರಾವಲಂಭಿಗಳನ್ನಾಗಿಸುವ ತಂತ್ರದ ಭಾಗವಾಗಿಯೂ ಈ ಮಾಜಿ ವಸಾಹತು ದೇಶಗಳು ಯುರೋಪಿನ ಅಭಿವೃದ್ಧಿ ಮಾದರಿಗಳನ್ನು ಅಪ್ಪಿಕೊಂಡವು. 'ಇದು ವಸಾಹತುಶಾಹಿಯಿಂದ ವಿಮೋಚನೆಗೊಂಡ ರಾಷ್ಟ್ರವೊಂದು ತನ್ನ ಆರ್ಥಿಕ ಹಿನ್ನಡೆಯನ್ನು ಸರಿಪಡಿಸಲು ನಡೆಸುವ ವಿಫಲ ಯತ್ನದಂತೆಯೇ ಕಾಣುತ್ತದೆ. ಇಂದು ಇದೇ ರೀತಿಯ 'ಅಭಿವೃದ್ಧಿ ಶೀಲ' ದೇಶಗಳ ಅಭಿವೃದ್ಧಿ ನೀತಿ, ಉತ್ಪಾದನಾ ವಿಧಾನಗಳೆಲ್ಲ ಅನೇಕ ಗೊಂದಲ ಮತ್ತು ಬಿಕ್ಕಟ್ಟುಗಳನ್ನು ಎದುರಿಸುತ್ತಿವೆ. ಆಫ್ರಿಕಾ, ಲ್ಯಾಟಿನ್ ಅಮೇರಿಕಾ ದೇಶಗಳ ಆರ್ಥಿಕ ಹಿನ್ನಡೆ ಇದೇ ಗೊಂದಲಗಳ ಬಿಕ್ಕಟ್ಟುಗಳ ಸೃಷ್ಟಿಯಾಗಿದೆ. ಅವುಗಳ ಆದರ್ಶದ ಮಾದರಿಗಳು, ಅವುಗಳನ್ನು ಆಳಿದ ವಸಾಹತುಶಾಹಿಗಳ ಸೃಷ್ಟಿಗಳೆಂದು ಗೊತ್ತಿದ್ದೂ ಆ ಮಾದರಿಗಳನ್ನು ಕಣ್ಣು ಮುಚ್ಚಿ ಅನುಸರಿಸಿ ಆರ್ಥಿಕವಾಗಿ ನಾಶವಾಗುತ್ತವೆ, ಇಲ್ಲವೆ 'ಜಾಗತೀಕರಣ' ಎಂಬ ಹೆಸರಿನಲ್ಲಿ ಮತ್ತೊಂದು ಸುತ್ತಿನ ಲೂಟಿಗೆ ಹೊಸ ದಿರಿಸು ಹಾಕಿಕೊಂಡು ಬರುತ್ತಿರುವ ನವವಸಾಹತುಶಾಹಿಗೆ ಬಂಡವಾಳ ಹೂಡಲು ರತ್ನಗಂಬಳಿ ಹಾಸುತ್ತವೆ. ಪೇಟೆಂಟ್ ಕಾನೂನಿಗೆ ತಮ್ಮ ಬಳಿ ಇರುವ ಅತ್ಯುತ್ತಮ ಮಾದರಿಗಳನ್ನು ಬಲಿ ಕೊಡುತ್ತಿವೆ'.[೧]

ಯುರೋಪಿನ ಮಾಜಿ ವಸಾಹತುಗಳಲ್ಲಿ ದೇಶೀ ಉತ್ಪಾದನಾ ವ್ಯವಸ್ಥೆಯಾಗಲಿ, ಗುಡಿ ಕೈಗಾರಿಕೆಗಳಾಗಲಿ, ಯುರೋಪಿನ ಬೃಹತ್ ಉತ್ಪಾದನಾ ಘಟಕಗಳ ಮುಂದೆ ಬಹುಪಾಲು ನಿಲ್ಲಲಿಲ್ಲ. ಭಾರತದಂತಹ ದೇಶದಲ್ಲಿ ಗುಡಿ ಕೈಗಾರಿಕೆಗಳು ಇನ್ನಿಲ್ಲದಂತೆ ನಾಶವಾದವು. ಇಂಡಿಯಾದ ಬಹುಸಂಖ್ಯಾತ ಜನ ಅವಲಂಬಿಸಿದ್ದ ಗುಡಿ ಕೈಗಾರಿಕೆಗಳ ನಾಶದಿಂದ ಅವುಗಳನ್ನು ಅನುಸರಿಸುತ್ತಿದ್ದ ಜನಸಮುದಾಯಗಳು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಅತಂತ್ರಗೊಂಡವು. ಯುರೋಪಿನ ಅಭಿವೃದ್ಧಿ ಮಾದರಿಗೆ ಇರುವ ಏಕೈಕ ಉದ್ದೇಶವೆಂದರೆ, ಬಂಡವಾಳದ ಅಭಿವೃದ್ಧಿ. ಬಂಡವಾಳದಿಂದ ಬಂಡವಾಳವನ್ನು ದ್ವಿಗುಣಗೊಳಿಸುವುದೇ ಯುರೋಪಿನ ಅಭಿವೃದ್ಧಿ ಮಾದರಿಯು ಪ್ರಮುಖ ಗುರಿ. ಈ ಕಾರಣದಿಂದ ಈ ಮಾದರಿಯ ಆರ್ಥಿಕ ಉತ್ಪಾದನೆಯು ಬಂಡವಾಳದ ಅಭಿವೃದ್ಧಿಯನ್ನು ಮಾತ್ರ ಗುರಿಯಾಗಿರಿಸಿಕೊಂಡಿರುತ್ತದೆ, ಇದರಿಂದಾಗಿ ಈ ಮಾದರಿ ಮೂರು ಬಗೆಯಲ್ಲಿ ವಸಾಹತು ದೇಶಗಳಲ್ಲಿ ಕಾರ್ಯೋನ್ಮುಖವಾಗುತ್ತದೆ.

೧. ಮೂರನೇ ಜಗತ್ತಿನ ದೇಶದ ನೈಸರ್ಗಿಕ ಸಂಪತ್ತಿನ ಎಗ್ಗಿಲ್ಲದ ಲೂಟಿ.

೨. ಬಂಡವಾಳ ಹೂಡುವ ದೇಶದ ಸ್ಥಳೀಯ ಉತ್ಪಾದನಾ ವಿಧಾನ ಮತ್ತು ಘಟ್ಟಗಳ ನಾಶ.

೩. ಸ್ಥಳೀಯ ಸಂಸ್ಕೃತಿ ಮತ್ತು ಮಾನವ ವೈವಿಧ್ಯಗಳ ಕುರಿತ ತಿರಸ್ಕಾರ.

ಮೇಲ್ಕಾಣಿಸಿ ಮೂರು ಸಂಗತಿಗಳನ್ನು ಇನ್ನೂ ವಿವರವಾಗಿ ನೋಡಬಹುದಾಗಿದೆ.

ಬಂಡವಾಳಶಾಹಿ ಅಭಿವೃದ್ಧಿ ಮಾದರಿಗೆ ಬಂಡವಾಳದ ಅಭಿವೃದ್ಧಿಯ ಗುರಿಯೇ ಮಹತ್ವದ್ದು. ಈ ಮಾದರಿಗೆ ನಿಸರ್ಗ ಮತ್ತು ಅದರ ಜೀವನದಾಯಕ ಆಯಾಮಗಳು ಯಾವತ್ತೂ ಮುಖ್ಯವಾಗುವುದಿಲ್ಲ. ಇಂದಿಗೂ ಸಹ ಮೂರನೇ ಜಗತ್ತಿನ ದೇಶಗಳಲ್ಲೂ ಸಾಮ್ರಾಜ್ಯಶಾಹಿ ದೇಶಗಳು ನಿಸರ್ಗವನ್ನು ಮತ್ತು ಮನುಷ್ಯ ಜೀವಿಸುವ ಪರಿಸರವನ್ನು ಇನ್ನಿಲ್ಲದಂತೆ ನಾಶಮಾಡಿವೆ. ನೆಹರು ಮತ್ತು ನಂತರದ ಉತ್ತರಾಧಿಕಾರಿಗಳು ಯುರೋಪಿನ ಈ ಅಭಿವೃದ್ಧಿ ಮಾದರಿಯನ್ನು ಅನುಸರಿಸಲಾರಂಭಿಸಿದ ಮೇಲೆ ಭಾರತದ ಅರಣ್ಯಗಳು ಸದ್ದಿಲ್ಲದೆ ನಾಶವಾಗತೊಡಗಿವೆ. ಭಾರತದ ಸಂಪದ್ಭರಿತ ಮತ್ತು ಬಹು ಉಪಯೋಗಿ ಕಾಡು ಇದ್ದ ಕಡೆಯೆಲ್ಲೆಲ್ಲ ಮೊದಲಿಗೆ ಕಾಫಿ, ಟೀ ಎಸ್ಟೇಟ್‌ಗಳನ್ನು ವಿಸ್ತರಿಸಲಾಯಿತು, ಜೊತೆಗೆ ಘಟ್ಟಗಳ ಕಣಿವೆ ಪ್ರದೇಶಗಳ ಕಾಡನ್ನು ಸವರಿ ಹಾಕಿ ನೀಲಿ ಮತ್ತು ರಬ್ಬರ ತೋಟಗಳನ್ನು ನೆಡಲಾಯಿತು. ಹೀಗೆ ಯುರೋಪಿನ ವಾಣಿಜ್ಯ ಕೃಷಿಯ ಭಾರತದ ಅತ್ಯಮೂಲ್ಯ ಘಟ್ಟದಲ್ಲಿಯೇ ಹಾಕಲಾದ ರೇಲ್ವೆ ಹಳಿಗಳು ಕಾಡಿನ ಗರ್ಭ ಸೀಳಿ ಹಾಕಿದವು. ಅಲ್ಲದೆ ಸ್ವಾತಂತ್ರ್ಯ ನಂತರದ ಅರಣ್ಯಗಳ ಆಯಕಟ್ಟಿನ ಸ್ಥಳಗಳಲ್ಲಿ ಹಾಕಲಾದ ಬೃಹತ್ ಕೈಗಾರಿಕಾ ಘಟಕಗಳು ಕಾಡನ್ನು ಇಡಿಯಾಗಿ ನುಂಗಿ ಹಾಕಿದವು. ಈ ಕೈಗಾರಿಕೆಗಳಿಗೆ ಬೇಕಾದ ವಿದ್ಯುತ್ತನ್ನು ಒದಗಿಸಲು ನಿರ್ಮಿಸಲಾದ ಬೃಹತ್ ಆಣೆಕಟ್ಟುಗಳಂತೂ ಲಕ್ಷಾಂತರ ಎಕರೆ ಅರಣ್ಯ ಪ್ರದೇಶವನ್ನು ನಾಶಮಾಡಿದವು, ಜೊತೆಗೆ ಕೈಗಾರಿಕೆಗಳಿಗೆ ವಿದ್ಯುತ್ ಒದಗಿಸುವ ಹೈಟೆಷನ್ ಕಂಬಗಳು ಅರಣ್ಯದ ಹೃದಯ ಭಾಗದಲ್ಲಿ ಹಾದು ಹೋದವು. ಈ ಕೈಗಾರಿಕೆಯಲ್ಲಿ ಸಿದ್ಧಗೊಂಡ ಉತ್ಪಾದಿತ ವಸ್ತುಗಳನ್ನು ಸಾಗಿಸಲು ರೈಲ್ವೆ ಸಂಪರ್ಕ ಕಲ್ಪಿಸಲು ಮತ್ತೆ ಕಾಡನ್ನು ನಾಶ ಮಾಡಲಾಯಿತು. ಇದರ ಜೊತೆಗೆ ಭಾರತದಲ್ಲಿ ಪ್ರಾರಂಭವಾದ ಅಣು ವಿದ್ಯುತ್ ಸ್ಥಾವರಗಳು ಪ್ರಾರಂಭವಾದದ್ದು ಅರಣ್ಯದ ಹೃದಯ ಭಾಗಗಳಲ್ಲಿ ಮತ್ತು ಗಣಿಗಾರಿಕೆಯಂತೂ ಭಾರತದ ಅತ್ಯುತ್ತಮ ಕಾಡುಗಳನ್ನು, ಶೋಲಾ ಹುಲ್ಲುಗಾವಲುಗಳನ್ನು ನುಂಗಿ ಹಾಕಿತು. ಈ ಎಲ್ಲ ಬಗೆಯ ಅಭಿವೃದ್ಧಿ ಮಾದರಿಯ ಭಾರತಕ್ಕೆ ಆಮದಾಗಿದ್ದು ಯುರೋಪಿನಿಂದ. ಈ ಅಭಿವೃದ್ಧಿ ಮಾದರಿಗೆ ಪಂಗಲ್ಸ್ ಮತ್ತು ಅದನ್ನು ಪೋಷಿಸುವ ಅರಣ್ಯದ ಮಹತ್ವ ಅರಿವಿಗೆ ಬರುವುದೇ ಇಲ್ಲ. ನಿಸರ್ಗ ಮತ್ತು ಅರಣ್ಯಗಳನ್ನು ಬಲಿಕೊಟ್ಟು ಬಂಡವಾಳವನ್ನು ದ್ವಿಗುಣಗೊಳಿಸುವುದೇ ಈ ಅಭಿವೃದ್ಧಿ ಮಾದರಿಯ ಬಹುದೊಡ್ಡ ಹುನ್ನಾರು.

ಆದರೆ ಭಾರತದಂತಹ ದೇಶದಲ್ಲಿ ಬಂಡವಾಳದ ಅಭಿವೃದ್ಧಿ ನೀತಿ ಎಷ್ಟು ಸಮಂಜಸವಾದದ್ದು? ವಸಾಹತುಶಾಹಿಗಳ ಭೋಗದ ನೀತಿಗಳು ಯಾಕಾಗಿ ಭಾರತಕ್ಕೆ ಮಾದರಿಗಳಾದವು? ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಮೇಲೆ ಸರಕಾರದ ಮುಂಚೂಣಿಯಲ್ಲಿದ್ದವರೇ ಈ ಆಸೆಬುರುಕ ಬಂಡವಾಳಿಗರು. ಅಪ್ರತ್ಯಕ್ಷವಾಗಿ ಸರಕಾರದ ಪರವಾಗಿ ಅಭಿವೃದ್ಧಿ ನೀತಿಯನ್ನು

ರೂಪಿಸಿದವರೂ ಇವರೇ ಆಗಿದ್ದರು. ಹೀಗಾಗಿ ಭಾರತದ ಪ್ರಜಾಪ್ರಭುತ್ವ ಬಂಡವಾಳಿಗರ ಪ್ರಭುತ್ವವೇ ಆಯಿತು. ಜನತೆಯ ಕಲ್ಯಾಣದ ಬದಲು ಬಂಡವಾಳದ ಕಲ್ಯಾಣವೇ ಎಂದಾಯಿತು. ಬಂಡವಾಳದ ಅಭಿವೃದ್ಧಿಯ ನೆಪದಲ್ಲಿ ವೃದ್ಧಿಯಾದದ್ದು ಬಂಡವಾಳದ ಅಭಿವೃದ್ಧಿಯಾಯಿತು. ದೇಶ ಕಾಯಲು ಮಾಡುವ ಯುದ್ಧ, ಬಂಡವಾಳ ಕಾಯುವ ಹೋರಾಟವಾಯಿತು. ನೆಹರು ಮತ್ತು ಅನಂತರದ ನಾಯಕರು ಅಧಿಕಾರದ ಚುಕ್ಕಾಣಿ ಹಿಡಿದು ಇಲ್ಲಿ ಮಾಡಿದ್ದೇ ಇದನ್ನು, ರಾಷ್ಟ್ರ ಪ್ರಭುತ್ವ ಎಂದರೆ ಅದರ ಮರೆಯಲ್ಲಿ ಹೊಂಚಿ ಕುಳಿತದ್ದು ಬಂಡವಾಳವಾದಿ ಪ್ರಭುತ್ವವೇ ಆಗಿತ್ತು. ಇವತ್ತು ಅಮೇರಿಕ, ಚೀನಾ, ಫ್ರಾನ್ಸ್ ದೇಶಗಳಂತಹ ಬಂಡವಾಳ ತಂದುಕೊಂಡ ಬಿಕ್ಕಟ್ಟುಗಳ ನಿವಾರಣೆಗಾಗಿಯೇ ಜಾಗತೀಕರಣ, ಜಾಗತಿಕ ಮಾರುಕಟ್ಟೆ ಎಂಬ ಸ್ಲೋಗನ್‌ಗಳು ಹುಟ್ಟಿರುವುದು. ಶ್ರೀಮಂತ ರಾಷ್ಟ್ರಗಳ ಆಯುಧ ಕಾರ್ಖಾನೆಗಳು ನಡೆಯಬೇಕೆಂದರೆ ಭಾರತ, ಪಾಕಿಸ್ತಾನದಂತಹ ದೇಶಗಳು ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ ಹೊಡೆದಾಡಬೇಕು. ಮೂರನೇ ಜಗತ್ತಿನ ದೇಶಗಳು ಭಾವಾವೇಶದಿಂದ ಹೋರಾಡುತ್ತ ಕಿಚ್ಚು ಹಚ್ಚಿಕೊಂಡರೆ, ಪಶ್ಚಿಮದ ಶೀತಲ ವಲಯದ ಬಂಡವಾಳಿಗ ದೇಶಗಳು ಅದೇ ಕಿಚ್ಚಿನಲ್ಲಿ ಮೈಕಾಯಿಸಿಕೊಳ್ಳುತ್ತವೆ. ಇವತ್ತು ಭಾರತದಂತಹ ರಾಷ್ಟ್ರ ಪ್ರಭುತ್ವಗಳು ತಮ್ಮ ಪ್ರತಿ ವರ್ಷದ ಬಜೆಟ್‌ನಲ್ಲಿ ಅರ್ಧಕ್ಕಿಂತಲೂ ಹೆಚ್ಚು ಹಣವನ್ನೇ ಕಾಯ್ದಿರಿಸುವುದು ಆಯುಧಗಳ ಖರೀದಿಗೆ, ಮಿಲಿಟರಿ ವೆಚ್ಚಕ್ಕೆ.

ಈ ಕಾರಣಕ್ಕೆ ಪಶ್ಚಿಮದ ಶ್ರೀಮಂತ ರಾಷ್ಟ್ರಗಳು ಹೊಡೆದಾಡುವ ದೇಶಗಳ ಪರವಾಗಿ ಒಂದಿಷ್ಟು ರಾಷ್ಟ್ರಗಳು ನಿಂತರೆ, ಉಳಿದ ರಾಷ್ಟ್ರಗಳು ಅದರ ವಿರುದ್ಧವಿದ್ದಂತೆ ತೋರಿಸಿ-ಕೊಳ್ಳುತ್ತವೆಯಷ್ಟೇ. ಒಂದು ಗಂಟೆಯ ಮಾತುಕತೆಯಲ್ಲಿ ಪರಿಹಾರವಾಗಬಹುದಾದ ಸಮಸ್ಯೆಗಳೇ ಭೂತಾಕಾರವಾಗಿ ಬೆಳೆದು, ಈ ಮೂರನೇ ಜಗತ್ತಿನ ರಾಷ್ಟ್ರಗಳನ್ನು ಸದಾ ಯುದ್ಧದಲ್ಲಿ ತೊಡಗಿಸುವಂತೆ ಮಾಡುತ್ತವೆ. ಅದಕ್ಕೆ ಅಂತರಾಷ್ಟ್ರೀಯ ಬಂಡವಾಳಿಗರ ಕುಮ್ಮಕ್ಕು ಇರುತ್ತದೆ.[೨]

ಬಂಡವಾಳವಾದಿ ಅಭಿವೃದ್ಧಿ ಮಾದರಿಯ ಇನ್ನೊಂದು ಬಹುದೊಡ್ಡ ದುಷ್ಪರಿಣಾಮವೆಂದರೆ ಸ್ಥಳೀಯ ಅಥವಾ ದೇಶೀಯ ವಿಧಾನವನ್ನು ನಾಶಮಾಡುವುದು. ಭಾರತದಂತಹ ದೇಶದಲ್ಲಿ ಶತಮಾನಗಳ ಕಾಲ ರೂಢಿಸಿಕೊಂಡು ಬಂದ ಪಾರಂಪರಿಕ ಉತ್ಪಾದನಾ ವ್ಯವಸ್ಥೆಯೊಂದಿದೆ. ಈ ಪಾರಂಪರಿಕ ಉತ್ಪಾದನಾ ವ್ಯವಸ್ಥೆಯು ಒಂದು ಜನತಾಂತ್ರಿಕ ನೆಲೆಯಲ್ಲಿದ್ದು ಅದು ಸಾಮುದಾಯಿಕ ಜವಾಬ್ದಾರಿಯನ್ನು ನಿರ್ವಹಿಸಲ್ಪಡುತ್ತದೆ. ಶ್ರೇಣೀಕೃತ ವ್ಯವಸ್ಥೆಯಲ್ಲಿನ ಅಸಮಾನ ಶ್ರಮ ವಿಭಜನೆ ಹೊರತಾದ ಈ ದೇಶೀ ಕೌಶಲ್ಯದ ಉತ್ಪಾದನಾ ವ್ಯವಸ್ಥೆಯೊಂದಿದೆ. ಗ್ರಾಮ ಸಮಾಜದ ಕೊಡು-ಕೊಳ್ಳುವ ವ್ಯವಹಾರದ ಭಾಗವಾಗಿ ಒಂದು ಆರೋಗ್ಯಪೂರ್ಣ ಸಾಮಾಜಿಕ, ಆರ್ಥಿಕ ಸಂಬಂಧಗಳನ್ನು ಪೋಷಿಸಿಕೊಂಡು ಬಂದಿದೆ. ಎಣೆ ತಯಾರಿಸುವುದು, ಬಟ್ಟೆ

ನೇಯುವುದು, ಕುಂಬಾರಿಕೆ, ಕಮ್ಮಾರಿಕೆ, ಬಡಗಿತನದಂತಹ ದೇಶೀಯ ಉತ್ಪಾದನಾ ವ್ಯವಸ್ಥೆ ಕೃಷಿಗೆ ಪೂರಕವಾದ ಉತ್ಪಾದನಾ ಸಂಬಂಧಗಳನ್ನು ಪೋಷಿಸಿಕೊಂಡು ಬಂದಿತ್ತು. ಆದರೆ ಯಾವಾಗ ಬೃಹತ್ ಉತ್ಪಾದನಾ ಘಟಕಗಳು ಭಾರತದಲ್ಲಿ ಸ್ಥಾಪನೆಯಾದವೋ ಅಂದಿನಿಂದ ಈ ದೇಶೀಯ ಸ್ಥಳೀಯ ಉತ್ಪಾದನಾ ಸಂಬಂಧಗಳು ನಾಶವಾಗಿ ಹೋದವು. ಬಂಡವಾಳವಾದಿ ಅಭಿವೃದ್ಧಿ ಮಾದರಿಯು ಈ ಸ್ಥಳೀಯ ಉತ್ಪಾದನಾ ಕೌಶಲ್ಯಗಳನ್ನು ನಿರ್ಲಕ್ಷಿಸುವುದರ ಜೊತೆಗೆ ಈ ಕೌಶಲ್ಯಗಳನ್ನು ಹೊಂದಿದ ಸಮುದಾಯಗಳನ್ನು ನಿರ್ಗತಿಕವಾಗಿಸಿತು.

ಬಂಡವಾಳಶಾಹಿ ಅಭಿವೃದ್ಧಿ ಮಾದರಿಯ ಇನ್ನೊಂದು ದುಷ್ಪರಿಣಾಮವೆಂದರೆ ಸ್ಥಳೀಯ ಸಂಸ್ಕೃತಿ ಮತ್ತು ಮಾನವ ವೈವಿಧ್ಯಗಳನ್ನು ನಾಶ ಮಾಡುವುದು. ಹೀಗೆ ಸಮುದಾಯಗಳನ್ನು ನಾಶಮಾಡುವ ಪ್ರವೃತ್ತಿಯನ್ನು ವಸಾಹತುಶಾಹಿ ತನ್ನ ಸಾಮ್ರಾಜ್ಯವನ್ನು ವಿಸ್ತರಿಸುವ ಭಾಗವಾಗಿ ರೂಢಿಸಿಕೊಂಡಿತು. ಆಸ್ಟ್ರೇಲಿಯಾ ಮತ್ತು ಲ್ಯಾಟಿನ್ ಅಮೇರಿಕಾದಂತಹ ದೇಶಗಳ ಅನೇಕ ಜನಾಂಗಗಳು ವಸಾಹತು ದೇಶಗಳ ದಾಳಿಯಲ್ಲಿ ಅಕ್ಷರಶಃ ನಾಶವಾದವು. ಜನಾಂಗ ನಾಶಮಾಡುವುದು ವಸಾಹತು ಯುದ್ಧ ನೀತಿಯ ಒಂದು ಭಾಗವಾಗಿ ಕಳೆದ ಕೆಲವು ಶತಮಾನಗಳಿಂದ ರೂಢಿಯಲ್ಲಿದೆ. ಬಂಡವಾಳವಾದಿ ಅಭಿವೃದ್ಧಿ ನೀತಿಗೆ ಸಮುದಾಯ ವೈವಿಧ್ಯ ಮತ್ತು ಸ್ಥಳೀಯ ಸಂಸ್ಕೃತಿ ಮತ್ತು ಸಮುದಾಯಗಳ ಕುರಿತು ಯಾವ ಕಾಳಜಿಗಳಿರುವುದಿಲ್ಲ. ಸ್ವಾತಂತ್ರ್ಯ ಬಂದಮೇಲೆ ಕಟ್ಟಿದ ಆಣೆಕಟ್ಟುಗಳು ಲಕ್ಷಾಂತರ ಎಕರೆ ಅರಣ್ಯಗಳನ್ನಷ್ಟೇ ನುಂಗಿ ಹಾಕಲಿಲ್ಲ, ಬದಲಿಗೆ ಅರಣ್ಯದ ಒಂದು ಭಾಗವೇ ಆದ ಶತಮಾನಗಳಿಂದ ಬದುಕಿಬಂದಿದ್ದ ಆದಿವಾಸಿಗಳನ್ನು ಹೊರಹಾಕಿದವು. ಇದರ ಜೊತೆಗೆ ವಸಾಹತು ಆಡಳಿತ ವ್ಯವಸ್ಥೆ ಮತ್ತು ದೇಶೀ ಆಡಳಿತ ವ್ಯವಸ್ಥೆ ಜಾರಿಗೆ ಬಂದ ಅರಣ್ಯ ನೀತಿ ಸಹ ಕಾಡಿನ ಜೀವ ವೈವಿಧ್ಯವನ್ನು ರಕ್ಷಿಸಲು ರೂಪುಗೊಳ್ಳಲಿಲ್ಲ.

ನಮ್ಮ ದೇಶದಲ್ಲಿ ಅಭಿವೃದ್ಧಿಯಾಗಿಯೇ ಇಲ್ಲವೆಂದಲ್ಲ, ಆದರೆ ಸರಕಾರಗಳ ಆದ್ಯತಾವಲಯ ಅಭಿವೃದ್ಧಿಯ ಪರಿಕಲ್ಪನೆ ಹಾಗೂ ಜನಸಾಮಾನ್ಯರ ದೃಷ್ಟಿಯಲ್ಲಿನ ಆದ್ಯತಾವಲಯ ಹಾಗೂ ಅಭಿವೃದ್ಧಿಯ ಪರಿಕಲ್ಪನೆಗಳ ನಡುವೆ ಅಗಾಧ ಕಂದಕವಿದೆ. ವ್ಯಕ್ತಿಯೊಬ್ಬನ ಕನಿಷ್ಠ ಅವಶ್ಯಕತೆಗಳಾದ ಅನ್ನ, ಬಟ್ಟೆ, ವಸತಿಗಳಿಂದಾಗಿ ಇಂದಿಗೂ ಸಮುದಾಯಗಳಲ್ಲಿ ಹೋರಾಟ ಕೊನೆಗೊಂಡಿಲ್ಲ. ಯೋಜನೆಗಳ ಮೇಲೆ ಯೋಜನೆಗಳು ಬಂದರೂ ಬಡತನ, ಆತ್ಮಹತ್ಯೆಗಳ ಪ್ರಮಾಣ ಹೆಚ್ಚುತ್ತಲೇ ಇದೆ. ಸಮಾಜವಾದದ ನಂತರ ಜಪಿಸುವ ಈ ದೇಶದಲ್ಲಿ ಅಸಮಾನತೆ ಕಡಿಮೆಯಾಗುವುದರ ಬದಲು ಹೆಚ್ಚಾಗುತ್ತಿದೆ. ಯೋಜನೆಗಳಿಗೆ ಹಣ ಒದಗಿಸುವಾಗ ರಕ್ಷಣಾ ವಲಯಕ್ಕೆ ಸಿಂಹಪಾಲು. ಶಿಕ್ಷಣ ಕ್ಷೇತ್ರಕ್ಕೆ ಹೆಚ್ಚುತ್ತಿರುವ ಕಡಿತ, ಹಣ ಕೊಟ್ಟು ಓದಬೇಕಾದ

ನೀತಿಯಿಂದಾಗಿ ಶಿಕ್ಷಣವು ಒಂದು ಮಾರುವ ಸರಕಾಗಿದೆ. ಇದರಿಂದಾಗಿ ಶಿಕ್ಷಣದಿಂದ ದೊರೆಯಬೇಕಾದ ಸಾಮಾಜಿಕ ಜವಾಬ್ದಾರಿ, ನೈತಿಕ ಹೊಣೆಗಾರಿಕೆ ಒತ್ತು ನಿಧಾನವಾಗಿ ಮಾಯವಾಗುತ್ತಿದೆ. ಈ ವಿವರವಾದ ಹಿನ್ನೆಲೆಯನ್ನು ಆಧಾರವಾಗಿಟ್ಟುಕೊಂಡು ಆಧುನಿಕ ಸರಕಾರಗಳ ಯೋಜನೆಗಳು ಕುಣಬಿ ಸಮುದಾಯದ ಜೀವನ ವಿಧಾನದ ಮೇಲೆ ಮಾಡಿರುವ ಪರಿಣಾಮಗಳನ್ನು ಅವಲೋಕಿಸಬಹುದು.

**೬.೨ ಕುಣಬಿ ಸಮುದಾಯ ಮತ್ತು ಕಾಡಿನ ಸಂಬಂಧ**

ನಿತ್ಯ ಹರಿದ್ವರ್ಣದ ಕಾಡುಗಳೆನಿಸಿದ ಪಶ್ಚಿಮ ಘಟ್ಟದ ಅರಣ್ಯಗಳು ಪ್ರಪಂಚದಲ್ಲಿಯೇ ಅಪರೂಪದ ಸಸ್ಯ ರಾಶಿಗಳನ್ನು ಪಡೆದಿದ್ದು; ಜೀವಜಗತ್ತಿನ ಎಲ್ಲ ವಿಸ್ಮಯಗಳನ್ನು ಪ್ರತಿಬಿಂಬಿಸುವ ತಾಣಗಳಾಗಿವೆ. ಹೊನ್ನೆ, ನಂದಿ, ತಡಸಲು, ನೇರಳೆ, ಬೂರಗ, ದೂಪ, ಧೂಮ, ಹಲಸು, ಹೆಬ್ಬಲಸು, ಸಳ್ಳೆ, ಸಾತಿ, ಮುಂತಾದೆ ನೂರಾರು ರೀತಿಯ ಭೀಮಕಾಯದ ಮರಗಳು ಪಶ್ಚಿಮ ಘಟ್ಟದ ಸಮೃದ್ಧಿಗೆ ಸಾಕ್ಷಿಯಾಗಿವೆ. ಭೂಮ್ಯಾಕಾಶಗಳನ್ನು ಒಂದು ಮಾಡಿ ಸೂರ್ಯ ಕಿರಣಗಳನ್ನು ನುಂಗಿ ಭೂಮಿಯನ್ನು ತಣ್ಣಗಿಟ್ಟು ಅದರಲ್ಲಿ ಮತ್ತೆ ನಾನಾ ವಿಧವಾದ ಅಣಬೆ ಆರ್ಕೇಡ್‌ಗಳು ಬೆಳೆಯಲು ಸಹಕಾರಿಯಾಗಿ ಜೊತೆಗೆ ಬಿದಿರು, ಬೆತ್ತ ಹಾಗೂ ಹತ್ತಾರು ಬಗೆಯ ಬಳ್ಳಿಗಳು ಹಬ್ಬಿ ಹೆಣೆದುಕೊಂಡಿವೆ. ಅಡಿಕೆ, ತೆಂಗು, ಬೈನೆ, ಈಚಲು, ಮುಂತಾದ ಸಸ್ಯಗಳಲ್ಲದೆ ಕಾಫಿ, ಟೀ, ಏಲಕ್ಕಿ, ಲವಂಗ, ಮೆಣಸು, ಕೊಕೊ ಹಾಗೂ ಕಿತ್ತಳೆಗಳಂತಹ ವಾಣಿಜ್ಯ ಬೆಳೆಗಳು ಸಮೃದ್ಧವಾಗಿವೆ.

ಒಂದು ಕಾಲಕ್ಕೆ ತಮ್ಮ ಕುಲ ಹಾಗೂ ಪಂಗಡಗಳಿಗೆ ಗಿಡಮರಗಳ ಹೆಸರನ್ನೇ ಇಟ್ಟುಕೊಂಡು ಅವುಗಳ ಮೂಲಕವೇ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಂಡ ಹತ್ತಾರು ಬುಡಕಟ್ಟುಗಳು ಇಂದಿಗೂ ಈ ಸಂಪ್ರದಾಯಗಳನ್ನು ಅನುಸರಿಸುತ್ತಿವೆ. ಇಂಥವುಗಳಲ್ಲಿ ಕುಣಬಿ ಸಮುದಾಯ ಪ್ರಮುಖವಾದುದು. ದೇವರ ಹೆಸರಿನಲ್ಲಿ ಮೀಸಲಿಟ್ಟ ಕಾಡುಗಳು ಇಂದಿಗೂ ದೇವರ ಕಾಡುಗಳಾಗಿ ಉಳಿದು ಬಂದಿರುವುದನ್ನು ನಾವು ನೋಡುತ್ತೇವೆ. ಮೀಸಲಿಲ್ಲದ ಕಾಡಿನಲ್ಲೂ ಒಂದು ಮರ ಕಡಿಯಬೇಕಾದ ಪ್ರಸಂಗ ಬಂದರೆ ಅದನ್ನು ಪೂಜಿಸಿ ಅತ್ಯಂತ ಗೌರವದಿಂದ ಮರಗಳನ್ನು ಕಡಿಯುತ್ತಿದ್ದ ಕುಣಬಿಗಳ ಮೌಲ್ಯ ಆದರ್ಶಪ್ರಾಯ. ಹೀಗೆ ಕಾಡಿನ ಆಸರೆಯಲ್ಲಿ ಅದರ ಮಗುವಿನಂತೆ ಬೆಳೆದ ಮನುಷ್ಯ ಅದು ನೀಡುವ ಜೇನು, ಗೆಡ್ಡೆ-ಗೆಣಸು, ಹಣ್ಣು-ಹಂಪಲು ಹಾಗೂ ಅದರೊಳಗಿನ ಪ್ರಾಣಿ-ಪಕ್ಷಿಗಳನ್ನು ಅಗತ್ಯವಿದ್ದಷ್ಟು ಸೇವಿಸಿ, ಬಿದಿರು, ಬೆತ್ತ ಹಾಗೂ ಹೊಂಬುಬಳ್ಳಿಗಳಲ್ಲಿ ತಯಾರಿಸಿದ ವಸ್ತುಗಳನ್ನು ಕಾಡಿನಾಚೆಯ ಸಂತೆಗಳಲ್ಲಿ ಮಾರಿ ತನಗೆ ಬೇಕಾದ ಅಗತ್ಯ ವಸ್ತುಗಳನ್ನು ಕೊಳ್ಳುತ್ತಿದ್ದ. ಇಷ್ಟರಮಟ್ಟಿಗೆ ಮಾತ್ರ ಹೊಸ ಜಗತ್ತಿನೊಂದಿಗೆ

ಸಂಪರ್ಕ ಇಟ್ಟುಕೊಂಡು ತನ್ನ ಪಾಡಿಗೆ ತಾನು ಕಾಡಿನ ಕುವರನಾಗಿ ಇದ್ದ ಇವನಿಗೆ ಬಹುಶಃ ನಮ್ಮ ದೇಶ ಸ್ವಾತಂತ್ರ್ಯ ಕಳೆದುಕೊಂಡಿದೆ ಎಂದಾಗಲಿ (ಕರ್ನಾಟಕದ ಮಟ್ಟಿಗೆ) ನಾವು ಗುಲಾಮರು (ಆಧುನಿಕ ಅರ್ಥದಲ್ಲಿ) ಎಂದಾಗಲೀ ಗೊತ್ತಿರಲಿಲ್ಲವೆನಿಸುತ್ತದೆ. ಇದ್ದಕ್ಕಿದ್ದ ಹಾಗೇ ತನ್ನ ಕಾಡೊಳಗೆ ನಾಗರಿಕರೂ ಅವರ ಜೊತೆಗೆ ಬಿಳಿಯರೂ ಬರತೊಡಗಿದಾಗ ಕೂಡ ಈ ಬಿಳಿಯರು ನಮ್ಮ ದೇಶವನ್ನಾಳುತ್ತಿರುವರು ಎಂಬ ಅರಿವು ಅವನಿಗಿರಲಿಲ್ಲವೆಂದೇ ಭಾವಿಸಬಹುದು. ಆದರೆ ತಮ್ಮದಾದ ಕಾಡನ್ನು ಮತ್ತ್ಯಾರೋ ಬಂದು ನಿಯಂತ್ರಿಸುತ್ತಿದ್ದಾರೆ ಎಂಬ ವಾಸ್ತವ ಅವನಿಗೆ ಗೊತ್ತಾಗತೊಡಗಿದ್ದು ನಮಗೆ ಸ್ವಾತಂತ್ರ್ಯ ಬಂದಮೇಲೆಯೇ.

ಸ್ವಾತಂತ್ರ್ಯ ನಂತರದ ನಮ್ಮ ಸರಕಾರಿ ವ್ಯವಸ್ಥೆಯಲ್ಲಿ ಆಡಳಿತ ನಿರ್ವಹಣೆಗಾಗಿ ಅನೇಕ ಇಲಾಖೆಗಳು ಹುಟ್ಟಿಕೊಂಡಿದ್ದನ್ನು ನಾವು ಕಂಡಿದ್ದೇವೆ. ಇಂತಹ ಪ್ರಮುಖ ಇಲಾಖೆಗಳಲ್ಲಿ ಅರಣ್ಯ ಇಲಾಖೆಯೂ ಒಂದೆಂಬುದು ಎಲ್ಲರಿಗೂ ಗೊತ್ತಿರುವ ವಿಚಾರ. ಈ ಇಲಾಖೆಯ ಮುಖ್ಯ ಕೆಲಸ ಅರಣ್ಯ ಇಲ್ಲದಿರುವ ಕಡೆ ಅರಣ್ಯ ಬೆಳೆಸುವುದು ಹಾಗೂ ಅರಣ್ಯ ಇರುವ ಕಡೆ ಅದನ್ನು ರಕ್ಷಿಸುವುದು. ಅರಣ್ಯ ಇಲ್ಲದಿರುವ ಕಡೆ ಅರಣ್ಯ ಬೆಳೆಸಿದ್ದು ಅಷ್ಟಾಗಿ ನಮ್ಮ ಕಣ್ಣಿಗೆ ಗೋಚರವಾಗುತ್ತಿಲ್ಲ ಎಂದರೆ ಆ ಇಲಾಖೆಗೆ ಸಿಟ್ಟು ಬರಬಹುದೇನೋ. ಏಕೆಂದರೆ ಇದು ನಿಜವಾಗಿದ್ದರೆ ಉತ್ತರ ಕರ್ನಾಟಕದ ಕೆಲವು ಭಾಗವಾದರೂ ಸ್ವಾತಂತ್ರ್ಯ ಬಂದು ೬೩ ವರ್ಷಗಳಲ್ಲಿ ಹಸಿರಾಗಬೇಕಾಗಿತ್ತು, ಆದರೆ ಅರಣ್ಯ ಇಲಾಖೆ ತನ್ನ ಗಮನ ಕೇಂದ್ರೀಕರಿಸಿದ್ದು ಈಗಾಗಲೇ ಯಥೇಚ್ಛವಾಗಿ ಬೆಳೆದು ನಿಂತಿರುವ ಮಲೆನಾಡಿಗೆ – ಇದಕ್ಕಿರುವ ಒಳಕಾರಣಗಳನ್ನು ಶೋಧಿಸುವುದು ಅಪ್ರಸ್ತುತ. ರಕ್ಷಣೆಯ ನೆಪದಲ್ಲಿ ಈ ಕಾಡಿಗೆ ದಾಳಿ ಇಟ್ಟ ಅರಣ್ಯ ಇಲಾಖೆಗೆ ಮೊದಲು ಕಂಡವರು ಅದರ ಗರ್ಭದಲ್ಲಿ ಅಡಗಿ ಜೀವಿಸುತ್ತಿದ್ದ ಬುಡಕಟ್ಟುಗಳು. ಅದುವರೆಗೆ ಸ್ವಂತ ಆಸ್ತಿಯ ಕಲ್ಪನೆಯಿಲ್ಲದೆ ಸ್ವಚ್ಛಂದವಾಗಿ ಬದುಕುತ್ತಿದ್ದ ಅವರು 'ನಿಮ್ಮ ಖಾತೆ' ಎಲ್ಲಿ?, ನಮ್ಮ 'ಹಕ್ಕು' ಯಾವುದು? ಎಂದು ಪ್ರಶ್ನಿಸುವ ಹೊಸ ಬಗೆಯ ಜನ ಬಂದುದನ್ನು ಕಂಡು ದಿಕ್ಕೆಟ್ಟು ಹೋದರು. ಅಂದಿನಿಂದ ಇಂದಿನವರೆಗೂ ಅನೇಕ ಬುಡಕಟ್ಟುಗಳು ಅದೇ ಡೋಲಾಯಮಾನದಲ್ಲಿ ಬದುಕುತ್ತಿವೆ. ಈ ಆರು ದಶಕಗಳ ನಮ್ಮ ಪ್ರಜಾಪ್ರಭುತ್ವ ಅವರನ್ನು ಸ್ಥಳದಿಂದ ಸ್ಥಳಕ್ಕೆ ಎತ್ತಂಗಡಿ ಮಾಡಿದೆ. ಯಾರೋ ಕಡಿದ ಕಾಡಿನ ಬೊಡ್ಡೆಗಳಿಗೆ ಇವರ ಹೆಸರು ಹೋಗುತ್ತಿದೆ, ಯಾರೋ ಹಚ್ಚಿದ ಕಾಳ್ಗಿಚ್ಚುಗಳಿಗೆ ಇವರು ನೆಪವಾಗುತ್ತಿದ್ದಾರೆ, ಇನ್ನಿಲ್ಲದ ಕಿರುಕುಳಗಳ ನಡುವೆ ಅರಣ್ಯ ಇಲಾಖೆಯ ಪ್ಲಾಂಟೇಷನ್‌ಗಳನ್ನು ಬೆಳೆಸುತ್ತಿರುವವರೂ ಇವರೇ ಆಗಿದ್ದಾರೆ. ಒಟ್ಟಿನಲ್ಲಿ ಪೊರೆದ ತಾಯಿಯಿಂದ ಜನರನ್ನು ಬೇರ್ಪಡಿಸುವ ಅಥವಾ ಆ ತಾಯಿ ಸೆರಗಿನ ಪ್ರೀತಿಯಿಂದ ದೂರ ಮಾಡಿದ ಪಾಪವನ್ನಂತೂ ನಮ್ಮ ಪ್ರಜಾಪ್ರಭುತ್ವ ಹೊತ್ತುಕೊಂಡಿದೆ. ಕಾಡಿಗೂ ಆ ಜೀವಿಗಳಿಗೂ

ಇದ್ದ ಅವಿನಾಭಾವ ಸಂಬಂಧ ಈಗ ಕೇವಲ ಕೃತಕವಾಗಿ ದಿಕ್ಕುತಪ್ಪಿದ ಹಸುಳೆಗಳಾಗಿ ಅವರು ಅತಂತ್ರದ ಸ್ಥಿತಿ ತಲುಪಿದ್ದಾರೆ.

ಹೀಗೆ ಅವರ ಆಶ್ರಯ ತಾಣವಾಗಿದ್ದ ಅವರನ್ನು ಪೊರೆಯುತ್ತಿದ್ದ ಕಾಡು ಅಧಿಕಾರಿಶಾಹಿ ಮನೋಭಾವದ ಜನರಿಂದಾಗಿ ಅವರಿಂದ ದೂರವಾಗತೊಡಗಿದೆ. ಸ್ವಾತಂತ್ರ್ಯಾ ನಂತರದಲ್ಲಿ ಜಾರಿಗೆ ಬಂದ ನಾನಾ ಕಾಯ್ದೆಗಳು ಅವರ ಮೇಲೆ ಅಪಾರವಾದ ನಿಯಂತ್ರಣ ಹೇರಿದೆ. ಬೇಟೆಯ ನಿಷೇಧವೊಂದನ್ನು ಒಪ್ಪಬಹುದು, ಆದರೆ ಶತ-ಶತಮಾನಗಳಿಂದ ಅರಣ್ಯವನ್ನು ಪೋಷಿಸಿಕೊಂಡು ಬಂದಿದ್ದರೂ ಅವರನ್ನೇ ಅದರ ಶತ್ರುಗಳಂತೆ ಬಿಂಬಿಸುವುದು ಆಧುನಿಕ ವ್ಯವಸ್ಥೆಯ ಅಪರಾಧ.

ಈ ಕಾರಣಕ್ಕಾಗಿ ಆದಿವಾಸಿಗಳು ಮುಖ್ಯವಾಹಿನಿಯ ಜನರಿಂದ ಅನೇಕ ಬಗೆಯ ಶೋಷಣೆಗಳಿಗೆ ಒಳಗಾಗುವ ಸಂದರ್ಭಗಳು ತಲೆದೋರುತ್ತಾ ಬಂದಿವೆ. ಇದನ್ನು ಮನಗಂಡು ಸ್ವಾತಂತ್ರ್ಯಾ ನಂತರ, ಅರಣ್ಯ ಮತ್ತು ಆದಿವಾಸಿಗಳನ್ನು ಜೊತೆಯಲ್ಲಿಯೇ ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಲು ಅನೇಕ ಆಯೋಗಗಳನ್ನು ಭಾರತ ಸರಕಾರ ನೇಮಿಸಿದೆ. ಸ್ವತಃ ನೆಹರು ಆದಿವಾಸಿಗಳನ್ನು ಅಪಾರವಾಗಿ ಪ್ರೀತಿಸುತ್ತಿದ್ದರು. ಆದಿವಾಸಿಗಳ ಅಭಿವೃದ್ಧಿಗಾಗಿ ಪಂಚಶೀಲ ತತ್ವಗಳನ್ನು ನೆಹರು ರೂಪಿಸಿದರು. ಅಲ್ಲದೆ ಆದಿವಾಸಿಗಳ ಕಾಡಿನ ಮುಗ್ಧ ಪರಿಸರವನ್ನು ಹೊರಗಿನ ಜನ ಯಾವ ಕಾರಣಕ್ಕೂ ಕದಡಬಾರದೆಂದು ನೆಹರು ಪದೆ ಪದೆ ತಮ್ಮ ಭಾಷಣಗಳ ಮೂಲಕ ಕರೆ ನೀಡುತ್ತಿದ್ದರು. ಆದಿವಾಸಿಗಳು ಕಾಡಲ್ಲಿಯೇ ಇದ್ದು, ಅವರಷ್ಟಕ್ಕೆ ಅವರು ಅಭಿವೃದ್ಧಿಯ ಕಡೆಗೆ ನಡೆದು ಹೋಗಬೇಕೆಂದು ನೆಹರು ಬಯಸುತ್ತಿದ್ದರು. ಅವರ ಕಾಲದಲ್ಲಿಯೇ ಮೊದಲ ಬಾರಿಗೆ ಅರಣ್ಯ ಮತ್ತು ಆದಿವಾಸಿಗಳ ಪಾರಂಪರಿಕ ಸಂಬಂಧ ಕುರಿತು ವೈಜ್ಞಾನಿಕ ವರದಿಯನ್ನು ಸಿದ್ಧಪಡಿಸಲು ಧೇಬರ್ ಆಯೋಗವನ್ನು ನೇಮಿಸಲಾಯಿತು. ಅನಂತರ ಅನೇಕ ಆಯೋಗಗಳು ಸ್ವಾತಂತ್ರ್ಯ ನಂತರ ನೇಮಿಸಲ್ಪಟ್ಟಿವೆ. ಆ ಆಯೋಗಗಳು ಈ ಕೆಳಗಿನಂತಿವೆ:

1. 'Dhebar Commission, 1961.
2. Harisingh Committee, 1967.
3. The National Commission on Agriculture, 1976.
4. The Conference of State Minister in Charge of Forest and Tribal Development, 1978.
5. Roy Burman Commission, 1982.
6. Bhuria Commission, 1996'.[4]

ಆದಿವಾಸಿಗಳು ಅರಣ್ಯದ ಜೊತೆ ಹೊಂದಬಹುದಾದ ಸಂಬಂಧ ಮತ್ತು ಈ ಸಂಬಂಧವನ್ನು ಕುರಿತು ಸರಕಾರ ಈಗಾಗಲೇ ಅಂಗೀಕರಿಸಿರುವ ಅರಣ್ಯಾ ನೀತಿಯಲ್ಲಿ

ಇರಬಹುದಾದ ಅಡತಡೆಗಳನ್ನು ಸರಿಪಡಿಸುವ ಕುರಿತು ಅನೇಕ ಸಲಹೆ ಸೂಚನೆಗಳನ್ನು ಮೇಲಿನ ಆರು ಆಯೋಗಗಳು ನೀಡಿವೆ. ಅರಣ್ಯ ಮತ್ತು ಆದಿವಾಸಿಗಳ ನಿತ್ಯದ ಸಂಬಂಧಗಳನ್ನು ಸುಧಾರಿಸುವ ನಿಟ್ಟಿನಲ್ಲಿ ಈ ಮೇಲಿನ ಆಯೋಗಗಳು ಮಹತ್ವದ ಶಿಫಾರಸ್ಸುಗಳನ್ನು ಮಾಡಿವೆ.

ಅರಣ್ಯ ಮತ್ತು ಆದಿವಾಸಿಗಳ ನಡುವಿನ ಪಾರಂಪರಿಕ ಸಂಬಂಧಗಳನ್ನು ಕಾಪಾಡುವುದು, ಅರಣ್ಯದ ಉಪ ಉತ್ಪನ್ನಗಳ ಮೇಲೆ ಆದಿವಾಸಿಗಳಿಗೆ ಸಂಪೂರ್ಣ ಅಧಿಕಾರ ಹೊಂದಲು ಅವಕಾಶ ಮಾಡಿಕೊಡುವುದು, ಸಂಗ್ರಹಿಸಲ್ಪಟ್ಟ ಅರಣ್ಯದ ಉಪ ಉತ್ಪನ್ನಗಳಿಂದ ಬಂದ ಆದಾಯವನ್ನು ಆದಿವಾಸಿಗಳ ಮತ್ತು ಅರಣ್ಯಗಳ ಅಭಿವೃದ್ಧಿಗೆ ಉಪಯೋಗಿಸುವುದು ಮತ್ತು ಆದಿವಾಸಿಗಳನ್ನು ಅರಣ್ಯದ ಉಳುವಿನ ಮತ್ತು ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಪ್ರಧಾನ ಪಾತ್ರ ವಹಿಸುವಂತೆ ಪ್ರೋತ್ಸಾಹಿಸುವುದೆ ಈ ಎಲ್ಲಾ ಆಯೋಗಗಳ ಶಿಫಾರಸ್ಸುಗಳ ಮುಖ್ಯ ಆಶಯಗಳಾಗಿವೆ. ಅಲ್ಲದೆ ಸರಕಾರ ಯಾವ ಅರಣ್ಯ ನೀತಿಯನ್ನು ಯಥಾವತ್ತು ಅನುಷ್ಠಾನಕ್ಕೆ ತರಲು ಯತ್ನಿಸುತ್ತಿದೆಯೋ ಆ ನೀತಿಗೆ ಮಾನವೀಯ ಸ್ಪರ್ಶ ನೀಡುವ ಮೂಲ ಆಶಯಗಳನ್ನು ಇಟ್ಟುಕೊಂಡೇ ಈ ಆಯೋಗಗಳು ತಮ್ಮ ವರದಿಗಳನ್ನು ಸಿದ್ಧಪಡಿಸಿವೆ.

ಆದರೆ ಈ ಮೇಲಿನ ಆಯೋಗಗಳ ಶಿಫಾರಸ್ಸುಗಳು ಕಾನೂನುಬದ್ಧವಾಗಿ ಜಾರಿಯಾಗಲಿಲ್ಲ. ರಾಷ್ಟ್ರೀಯ ಉದ್ಯಾನ ಕಾಯ್ದೆ ಮತ್ತು ಆದಿವಾಸಿಗಳ ಸಹಜ ಹಕ್ಕುಗಳ ನಡುವಿನ ಸಂಘರ್ಷಗಳು ಇಂದಿಗೂ ಜೀವಂತವಾಗಿವೆ. ಪ್ರಸ್ತುತ ಯೋಜನೆಯಲ್ಲಿ ಕರ್ನಾಟಕದಲ್ಲಿನ ರಾಷ್ಟ್ರೀಯ ಉದ್ಯಾನಗಳಿಂದ ನಿರಾಶ್ರಿತರಾದ ಮತ್ತು ಪುನರ್‌ವಸತೀಕರಣಗೊಂಡ ಆದಿವಾಸಿಗಳನ್ನು ಅಧ್ಯಯನಕ್ಕೊಳಪಡಿಸಲಾಗುತ್ತಿದೆ. ಕರ್ನಾಟಕದಲ್ಲಿ ಒಟ್ಟು ಐದು ರಾಷ್ಟ್ರೀಯ ಉದ್ಯಾನಗಳಿವೆ, ಐದು ಉದ್ಯಾನಗಳು ಈ ಕೆಳಗಿನಂತಿವೆ.

**ಕೋಷ್ಟಕ–೬.೧**

**ರಾಷ್ಟ್ರೀಯ ಉದ್ಯಾನಗಳ ಪಟ್ಟಿ**

| ಕ್ರ.ಸಂ. | ರಾಷ್ಟ್ರೀಯ ಉದ್ಯಾನಗಳು | ಜಿಲ್ಲೆ | ಸಮುದಾಯಗಳು |
|---|---|---|---|
| ೧ | ಬಂಡಿಪುರ ರಾಷ್ಟ್ರೀಯ ಉದ್ಯಾನ | ಮೈಸೂರು | ಜೇನುಕುರುಬ |
| ೨ | ಬನ್ನೇರಘಟ್ಟ ರಾಷ್ಟ್ರೀಯ ಉದ್ಯಾನ | ಬೆಂಗಳೂರು ಗ್ರಾಮೀಣ | ಹಕ್ಕಿಪಿಕ್ಕಿ, ಇರುಳ |
| ೩ | ನಾಗರಹೊಳೆ ರಾಷ್ಟ್ರೀಯ ಉದ್ಯಾನ | ಮೈಸೂರು, ಕೂರ್ಗ | ಜೇನುಕುರುಬ, ಸೋಲಿಗ |
| ೪ | ಕುದುರೆಮುಖ ರಾಷ್ಟ್ರೀಯ ಉದ್ಯಾನ | ಚಿಕ್ಕಮಗಳೂರು | ಗೌಡಲು, ಮಲೆಕುಡಿಯ |
| ೫ | ಅಣಶಿ ರಾಷ್ಟ್ರೀಯ ಉದ್ಯಾನ | ಉತ್ತರ ಕನ್ನಡ | ಸಿದ್ಧಿ, ಕುಣಬಿ |

ಆಧಾರ: ವಿಜಯಲಕ್ಷ್ಮೀ ಆರ್. 'ಹಾಲಕ್ಕಿ ಒಕ್ಕಲಿಗ ಮಹಿಳೆ' (ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನ) ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ.

ಕರ್ನಾಟಕದ ಈ ಐದು ರಾಷ್ಟ್ರೀಯ ಉದ್ಯಾನಗಳು ಒಟ್ಟು ೨೪೭೫ ಚ.ಕಿ.ಮೀ. ಅರಣ್ಯವನ್ನು ಒಳಗೊಂಡಿದೆ ಮತ್ತು ಈ ಉದ್ಯಾನಗಳು ಕರ್ನಾಟಕದ ಪಶ್ಚಿಮ ಘಟ್ಟಗಳಲ್ಲಿ ವಿಸ್ತರಿಸಿಕೊಂಡಿವೆ. ಈ ಉದ್ಯಾನಗಳ ವ್ಯಾಪ್ತಿಯಲ್ಲಿ ಬರುವ ಬುಡಕಟ್ಟುಗಳಿಗೆ ಇಂದಿಗೂ ಸೂಕ್ತ ಪರಿಹಾರ ಮತ್ತು ಪುನರ್‌ವಸತಿ ಲಭ್ಯವಾಗಿಲ್ಲ. ಕೆಲವು ಕಡೆ ಪುನರ್‌ವಸತಿ ಕಲ್ಪಿಸಲಾಗಿದ್ದರೂ ಸಹ ಆದಿವಾಸಿಗಳು ಅದನ್ನು ತಿರಸ್ಕರಿಸಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಅಣಶಿ ರಾಷ್ಟ್ರೀಯ ಉದ್ಯಾನ ಘಟ್ಟದ ಪೂರ್ವಭಾಗದಲ್ಲಿದೆ, ಅಂದರೆ ಕರಾವಳಿ ಭಾಗದ ಅರಣ್ಯವು ಈ ಉದ್ಯಾನ ವ್ಯಾಪ್ತಿಗೆ ಬರುವದಿಲ್ಲ. ಆದರೆ ಕರಾವಳಿಯ ಭಾಗದಲ್ಲಿ ಬೀಡುಬಿಟ್ಟಿರುವ ಬೃಹತ್ ಯೋಜನೆಗಳು ಆ ಭಾಗದ ಆದಿವಾಸಿಗಳನ್ನು ಕಾಡಿಗೆ ತೆರಳಿ ಅಲ್ಲಿನ ಉತ್ಪನ್ನಗಳನ್ನು ಸಂಗ್ರಹಿಸಲು ಅವಕಾಶ ಮಾಡಿಕೊಟ್ಟಿಲ್ಲ. ಕುಣಬಿಯರು ಅರಣ್ಯದ ಉಪ ಉತ್ಪನ್ನಗಳನ್ನು ಈ ಹಿಂದೆ ಆಯ್ದು, ಸಂಗ್ರಹಿಸಿ, ಮಾರಾಟ ಮಾಡಿ ಜೀವನ ನಡೆಸುತ್ತಿದ್ದರು. ಆದರೆ ಕೈಗಾ, ಸೀಬರ್ಡ್, ಕೊಂಕಣ ರೇಲ್ವೆಗಳಂತಹ ಬೃಹತ್ ಯೋಜನೆಗಳ ವ್ಯಾಪ್ತಿಗೆ ಬರುವ ಅರಣ್ಯದಲ್ಲಿ ಬುಡಕಟ್ಟು ಸಮುದಾಯಗಳು ಕಾಡನ್ನು ಪ್ರವೇಶಿಸುವಂತಿಲ್ಲ, ಅದರಲ್ಲೂ ಅಂಕೋಲಾ ಮತ್ತು ಕಾರವಾರ ನಡುವಿನ ಬಹುತೇಕ ಅರಣ್ಯವು ಸೀಬರ್ಡ್ ನೌಕಾ ನೆಲೆಯ ವ್ಯಾಪ್ತಿಗೆ ಸೇರಿ ಹೋಗುತ್ತದೆ.

**೬.೩ ವಿವಿಧ ಅಭಿವೃದ್ಧಿ ಯೋಜನೆಗಳು ಮತ್ತು ಕುಣಬಿ ಸಮುದಾಯಗಳು**

ಅಭಿವೃದ್ಧಿಗೆ ಬೇಕಾಗುವ ಮೂಲಭೂತ ಸೌಕರ್ಯಗಳಾದ ವಿದ್ಯುಚ್ಛಕ್ತಿ, ರಸ್ತೆ, ಸಾರಿಗೆ, ನೀರಾವರಿ, ಉದ್ಯಾನವನ, ನೌಕಾ ನೆಲೆ ಹಾಗೂ ಉದ್ಯಮಗಳ ಸ್ಥಾಪನೆಗಾಗಿ ಸರಕಾರ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುತ್ತಿದೆ. ಶತಮಾನಗಳಿಂದಲೂ ಒಂದು ಪ್ರದೇಶದಲ್ಲಿ ನೆಲೆಸಿರುವ ಸಮುದಾಯವನ್ನು ಅವರ ಮೂಲಸ್ಥಳದಿಂದ ಸ್ಥಳಾಂತರಗೊಳಿಸುವುದು ಒಂದು ಜಟಿಲ ಸಮಸ್ಯೆ. ಅದು ಆ ಸಮುದಾಯದ ಸಾಮಾಜಿಕ ಸಂಘಟನೆ, ಸ್ಥಾಪಿತ ಪರಿಸರಗಳ ಮೇಲೆ ವ್ಯಾಪಕವಾದ ಪರಿಣಾಮವನ್ನು ಉಂಟುಮಾಡುತ್ತದೆ. ಹೀಗಾಗಿ ಭಾರತದಲ್ಲಿ ಜಲಾಭಿವೃದ್ಧಿ ಯೋಜನೆಗಳ ಅಡಿಯಲ್ಲಿ ಮುಳುಗಡೆಯಾಗುವ ಮನೆ ಹಾಗೂ ಕೃಷಿ ಭೂಮಿ ಕಳೆದುಕೊಂಡು ಸಂತ್ರಸ್ತರಾದವರಲ್ಲಿ ದಲಿತರು ಹಾಗೂ ಆದಿವಾಸಿ ಜನರೇ ಹೆಚ್ಚು. ಅಭಿವೃದ್ಧಿ ಯೋಜನೆಗಳು ಭಾರತವನ್ನು ಕೇವಲ ಪ್ರಗತಿಪರವಾಗಿ ಕಾರ್ಯನಿರ್ವಹಿಸದೆ ಹಲವು ಮೂಲಭೂತ ಸಮಸ್ಯೆಗಳಿಗೆ ಎಡೆಮಾಡಿಕೊಟ್ಟಿದೆ. ಇಂತಹ ಸಮಸ್ಯೆಗಳಲ್ಲಿ ಉದಾಹರಣೆಗಾಗಿ ವಲಸೆ, ನಿರುದ್ಯೋಗ, ಮನೆರಹಿತತನ, ಭೂರಹಿತತನ ಇವೆ ಮುಂತಾದವುಗಳು. ಬಹುಶಃ ಇಂತಹ ಅಭಿವೃದ್ಧಿ ಯೋಜನೆಗಳು ಜನರನ್ನು ಇಂತಹ ಹೀನ ಸ್ಥಿತಿಗೆ ತಳ್ಳುತ್ತವೆಂದು ಯಾರೂ ನಿರೀಕ್ಷಿಸಿರಲಿಲ್ಲ

ಅಭಿವೃದ್ಧಿ ಯೋಜನೆಯಿಂದ ಅನಾನುಕೂಲಕ್ಕೆ ಒಳಗಾಗುವ ಜನ ಒಂದು ಭಾಗದವರಾದರೆ, ಈ ಯೋಜನೆಗಳ ಫಲ ಅನುಭವಿಸುವವರು ಇನ್ನೊಂದು ಭಾಗದವರಾಗಿದ್ದಾರೆ.

ಅಭಿವೃದ್ಧಿ ಎಂದರೆ ಬಹುದೊಡ್ಡ ಕಾರ್ಖಾನೆಗಳ ಸ್ಥಾಪನೆ, ಬೃಹತ್ ಆಣೆಕಟ್ಟುಗಳ ನಿರ್ಮಾಣ, ಬಂದರು ಮತ್ತು ಗಣಿಗಳ ಏಳಿಗೆ ಎಂದೇ ಭಾವಿಸಿರುವ ನಾವು ಅಮೇರಿಕ, ಜಪಾನ, ಮುಂತಾದ ದೇಶಗಳನ್ನು ನೋಡಿ ಅನುಕರಿಸುವ ಸಾಹಸಕ್ಕೆ ಕೈಹಾಕುತ್ತಿದ್ದೇವೆ. ನಮ್ಮ ದೇಶದಲ್ಲಿ ಆದಿಯಿಂದಲೂ ಇದ್ದ ಕೆರೆಕುಂಟೆಗಳ ತಂತ್ರಜ್ಞಾನವಾಗಲಿ, ಗುಡಿಕೈಗಾರಿಕೆಗಳಾಗಲಿ ಈಗ ನಮಗೆ ಮೋಹಕವಲ್ಲ, ಆಣೆಕಟ್ಟೆ ಇಲ್ಲದೇ ನದಿಯಿಂದ ನೀರು ತರುತ್ತಿದ್ದ ವಿಜಯನಗರ ಕಾಲದ ಕಾಲುವೆಗಳು ನಮ್ಮ ನೆನಪಿನಲ್ಲೂ ಇಲ್ಲ. ಏಕಾಏಕಿ ಸಾವಿರಾರು ಟಿ.ಎಂ.ಸಿ. ನೀರು ಸಂಗ್ರಹವಾಗಬೇಕು. ಅದರ ಹಿಂದೆ ಸುಂದರ ಉದ್ಯಾನಗಳು ತಲೆಯೆತ್ತಬೇಕು, ಅವು ಪ್ರವಾಸಿತಾಣಗಳಾಗಿ ಅಭಿವೃದ್ಧಿ ಹೊಂದಬೇಕು ಇತ್ಯಾದಿ ಅನೇಕ ಮೋಹಕ ಯೋಜನೆಗಳು ನಮ್ಮ ತಲೆಯಲ್ಲಿ ಬರುತ್ತವೆಯೇ ಹೊರತು ಆಣೆಕಟ್ಟು ನಿರ್ಮಾಣದಿಂದ ನಲುಗುವ ಜೀವಗಳ ಗತಿಯೇನು ಹಾಗೂ ಆ ಮೂಲಕ ಆಗುವ ಪರಿಸರ ಅಸಮತೋಲನದ ಪರಿಣಾಮಗಳೇನು ಎಂಬ ಬಗ್ಗೆ ತಲೆಕೆಡೆಸಿಕೊಳ್ಳುವುದೇ ಇಲ್ಲ, ಈ ಸಂದರ್ಭದಲ್ಲಿ ದೇಶದಲ್ಲಿಯೇ ವಿವಾದ ಹುಟ್ಟುಹಾಕಿರುವ 'ನರ್ಮದಾ ಯೋಜನೆ'ಯ ನೆನಪು ಬರುತ್ತಿದೆ. ಆದರೆ ಅದಕ್ಕಿಂತ ನಮಗೆ ಮುಖ್ಯವಾಗುವುದು ನಮ್ಮ ಕರ್ನಾಟಕದಲ್ಲಿ ಇದೇ ರೀತಿಯಾಗಿರುವ ಮತ್ತು ಆಗುತ್ತಿರುವ ದೃಷ್ಟಾಂತಗಳು. ಆಣೆಕಟ್ಟು ನಮಗೆ ವಿದ್ಯುಚ್ಛಕ್ತಿ ಒದಗಿಸುತ್ತದೆ ಎಂಬ ಮಾತನ್ನು ಅಲ್ಲಗಳೆಯುವಂತಿಲ್ಲ, ಆದರೆ ಆ ಆಣೆಕಟ್ಟೆ ಎಷ್ಟೊಂದು ಬೃಹತ್ ಅರಣ್ಯವನ್ನು ಭಕ್ಷಿಸಿತು ಹಾಗೂ ಎಷ್ಟೆಲ್ಲಾ ಜೀವ ಚರಗಳನ್ನು ಬಲಿತೆಗೆದುಕೊಂಡಿತು ಮತ್ತು ಆ ಮೂಲಕ ಪಶ್ಚಿಮ ಘಟ್ಟದ ಏನೆಲ್ಲ ವೈಶಿಷ್ಟ್ಯಗಳು ಏಕಾಏಕಿ ನಾಶವಾದವು ಎಂಬುದನ್ನು ಯೋಚಿಸಿಲ್ಲ, ಅಲ್ಲದೇ ಆ ಬೃಹದಾರಣ್ಯದಲ್ಲಿ ನೆಲೆಯೂರಿಕೊಂಡಿದ್ದ ಕುಣಬಿಯರು, ಹಸಲರು ಮುಂತಾದ ಸಮುದಾಯಗಳು ಯಾವ ರೀತಿಯಲ್ಲಿ ಇಚ್ಚಾಡಿ ಹೋದವು ಎಂಬುದನ್ನು ಯೋಚಿಸಲೇ ಇಲ್ಲ. ಅಂದು ನೆಲೆ ಕಳೆದುಕೊಂಡ ಬುಡಕಟ್ಟುಗಳು ಇಂದಿಗೂ ಅದೇ ರೀತಿಯ ಡೋಲಾಯಮಾನದಲ್ಲಿಯೇ ಬದುಕುತ್ತಿರುವುದನ್ನು ಕಂಡಾಗ ದುಃಖವಾಗುತ್ತದೆ. ನಾಗರಿಕ ಜಗತ್ತಿಗೆ ಬೆಳಕು ಹರಿಸಲು ಪಟ್ಟಣಗಳ ಕಾರ್ಖಾನೆಗಳನ್ನು ನಡೆಸಲು ಒಟ್ಟಾರೆ ಮಾತ್ರ ಜಗತ್ತು ಮುಂದುವರೆಯಲು ಇಷ್ಟೆಲ್ಲಾ ಮಾಡಿದ ಸ್ವತಂತ್ರ ಭಾರತದ ನಾವು ಅದಕ್ಕಾಗಿ ತ್ಯಾಗಮಾಡಿದ ಬುಡಕಟ್ಟುಗಳಿಗೆ ಏನು ಮಾಡಿದೆವು? ಎಂದು ಒಮ್ಮೆಯೂ ಪ್ರಶ್ನಿಸಿಕೊಳ್ಳಲಿಲ್ಲ.

ಇದೇ ರೀತಿ ನಿರ್ಮಾಣ ಮಾಡಲಾಗಿರುವ ಕಾಳಿ ಯೋಜನೆಯ ಪ್ರದೇಶದಲ್ಲಿ ವಾಸವಿರುವ ಕುಣಬಿಯರು, ಗೌಳಿಗಾರರು, ಸಿದ್ಧಿಯರು, ಇದಕ್ಕಿಂತ ಭಿನ್ನ ಪರಿಸ್ಥಿತಿಯಲ್ಲೇನೂ ಇಲ್ಲ. ಶರಾವತಿ, ಟೇಲ್‌ರೇಸ್, ಬೇಡ್ತಿ, ಚಕ್ರ, ಮುಂತಾದ ಕಡೆಗಳಲ್ಲೂ ಇದೇ ಪರಿಸ್ಥಿತಿ ಇದೆ.

**ಆಣೆಕಟ್ಟುಗಳು ಮತ್ತು ಬೃಹತ್ ಅಭಿವೃದ್ಧಿಯ ಯೋಜನೆಗಳು**

ಜಗತ್ತಿನಲ್ಲಿಯೇ ಅತ್ಯಂತ ವೈವಿಧ್ಯಮಯ ಮತ್ತು ಅತ್ಯುಪಯುಕ್ತ ಅರಣ್ಯವನ್ನು ಹೊಂದಿರುವ ಉತ್ತರ ಕನ್ನಡ ಜಿಲ್ಲೆ ತನ್ನ ಒಡಲಲ್ಲಿ ಅನೇಕ ನದಿಗಳನ್ನು ಇಟ್ಟುಕೊಂಡಿದೆ. ಪಶ್ಚಿಮ ಘಟ್ಟದಲ್ಲಿ ಹುಟ್ಟಿ, ಉತ್ತರ ಕನ್ನಡ ಜಿಲ್ಲೆಯಾದ್ಯಂತ ಹರಿಯುವ ಈ ನದಿಗಳು ಇಲ್ಲಿನ ಕಾಡುಗಳನ್ನು ಸಮೃದ್ಧವಾಗಿಟ್ಟುಕೊಂಡು ಬಂದಿವೆ. ದೇಶದ ಅಭಿವೃದ್ಧಿಯ ನೆಪದಲ್ಲಿ ಸಣ್ಣ ಸಮುದಾಯಗಳನ್ನು ಸಂಪೂರ್ಣವಾಗಿ ಬಲಿಕೊಡುವುದು ಸಾಧುವೇ ಎಂಬುದನ್ನು ಗಂಭೀರವಾಗಿ ಯೋಚಿಸಬೇಕು. ಕುಣಬಿಯರು, ಹಾಲಕ್ಕಿ ಒಕ್ಕಲಿಗರು, ಸಿದ್ಧಿಯರು, ಗೌಳಿಗರು, ಮುಂತಾದ ಅರಣ್ಯವಾಸಿ ಸಮುದಾಯಗಳ ಬದುಕಿನ ಮೇಲೆ ಅಪಾರ ಪ್ರಭಾವ ಬೀರಿರುವ ರಾಷ್ಟ್ರೀಯ ಅಭಿವೃದ್ಧಿ ಯೋಜನೆಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ.

೧. 'ಸೂಪಾ ಜಲಾಶಯ
೨. ದಾಂಡೇಲಿ ಜಲಾಶಯ
೩. ಬೊಮ್ಮನಹಳ್ಳಿ ಜಲಾಶಯ
೪. ತಟ್ಟಿಹಳ್ಳಿ ಜಲಾಶಯ
೫. ಕಾಗೇರಿ ಜಲಾಶಯ
೬. ಕೊಡ್ಸಳ್ಳಿ ಜಲಾಶಯ
೭. ಕದ್ರಾ ಜಲಾಶಯ
೮. ಮಾಗೋಡು ಜಲಾಶಯ
೯. ಅಘನಾಶಿನಿ ಜಲಾಶಯ
೧೦. ಶರಾವತಿ ಟೈಲ್‌ರೇಸ್
೧೧. ಲಿಂಗನಮಕ್ಕಿ ಜಲಾಶಯ
೧೨. ಕೈಗಾ ವಿದ್ಯುತ್ ಯೋಜನೆ
೧೩. ಅಣಶಿ ನ್ಯಾಷನಲ್ ಪಾರ್ಕ್
೧೪. ಗಣಿಗಾರಿಕೆಗೆ ಒಳಗಾಗಿದ್ದ ಪ್ರದೇಶಗಳು

೧. ಡಿಗ್ಗಿ

೨. ಸುಳಾವಲಿ

೩. ಬಾಮಣಿ

೪. ತೆರಾಳಿ

೫. ಉಡಸಿ

೬. ಚಾಪೆರಾ

೭. ನಗರಿ

೮. ಪಣಸೋಲಿ

೯. ಕೆವಾಲಿ'.[೫]

ಉತ್ತರ ಕನ್ನಡ ಜಿಲ್ಲೆಯಲ್ಲಿ ಸೃಷ್ಟಿಯಾಗಿರುವ ಈ ಕೃತಕ ಸಮುದ್ರಗಳಿಂದ ನಾಶವಾದ ಪಶ್ಚಿಮ ಘಟ್ಟದ ಅರಣ್ಯ ಅಪಾರ. ಆದರೆ ಈ ಅರಣ್ಯದ ಭಾಗವಾಗಿ ಬದುಕುತ್ತಿದ್ದ ಆದಿವಾಸಿಗಳು ಒಕ್ಕಲೆದ್ದು ಹೋಗಿರುವುದಕ್ಕೆ ಯಾವ ಇಲಾಖೆಯೂ ಇಲ್ಲಿಯವರೆಗೆ ಲೆಕ್ಕ ಇಟ್ಟಂತೆ ಕಾಣುವದಿಲ್ಲ. ಭಾರತದಲ್ಲಿ ಈವರೆಗೆ ವಿವಿಧ ಅಭಿವೃದ್ಧಿ ಯೋಜನೆಗಳಿಂದ ಒಕ್ಕಲೆದ್ದ ಆದಿವಾಸಿಗಳ ಸಂಖ್ಯೆ ಈ ಕೆಳಗಿನಂತಿದೆ.

**ಕೋಷ್ಟಕ–೬.೨ : ಒಕ್ಕಲೆಬ್ಬಿಸಲ್ಪಟ್ಟ ಆದಿವಾಸಿಗಳು**

**೧೯೫೧ ರಿಂದ ೧೯೯೦ರ ವರೆಗಿನ ಅಭಿವೃದ್ಧಿ ಯೋಜನೆಗಳಿಂದ ಒಕ್ಕಲೆಬ್ಬಿಸಲ್ಪಟ್ಟ ಆದಿವಾಸಿಗಳ ಜನಸಂಖ್ಯೆ**

| ಯೋಜನೆಗಳು | ಅಲ್ಲಿದ್ದ ಒಟ್ಟು ಆದಿವಾಸಿಗಳು | ಒಕ್ಕಲೆಬ್ಬಿಸಲ್ಪಟ್ಟ ಆದಿವಾಸಿಗಳು | ಒಕ್ಕಲೆಬ್ಬಿಸಲ್ಪಟ್ಟ ಶೇಕಡಾವಾರು | ಪುನರ್ವಸತಿ ಕಲ್ಪಿಸಲಾದವರು | ಉಳಿದ ನಿರಾಶ್ರಿತರು | ಹೊರಹಾ–ಕಲ್ಪಟ್ಟವರು ಶೇಕಡಾ |
|---|---|---|---|---|---|---|
| ಗಣಿಗಾರಿಕೆ | ೧೪,೧೫,೦೦೦ | ೧೨,೦೦,೦೦೦ | ೮೪.೮೧ | ೩,೦೦,೦೦೦ (೨೫) | ೯,೦೦,೦೦೦ (೭೫) | ೪೦.೦೫ ರಷ್ಟು |
| ಕೈಗಾರಿಕೆಗಳು | ೩,೦೦,೦೦೦ | ೨,೬೦,೦೦೦ | ೮೬.೬೭ | ೬೫,೦೦೦ (೨೫) | ೧,೯೫,೦೦೦ (೭೫) | |
| ಆಣೆಕಟ್ಟೆಗಳು | ೭೦,೦೦,೦೦೦ | ೫೩,೦೦,೦೦೦ | ೭೫.೭೧ | ೧೩,೧೫,೦೦೦ (೨೪.೮೧) | ೩೯,೪೫,೦೦೦ (೭೫.೦೯) | |
| ಅಭಯಾರಣ್ಯ | ೬,೦೦,೦೦೦ | ೫,೦೦,೦೦೦ | ೮೩.೩೩ | ೧,೨೫,೦೦೦ (೨೫) | ೩,೭೫,೦೦೦ (೭೫) | |
| ಇತರ | ೨,೦೦,೦೦೦ | ೧,೫೦,೦೦೦ | ೭೫ | ೪೦,೦೦೦ (೨೬.೬೭) | ೧,೧೦,೦೦೦ (೭೪.೩೩) | |
| ಒಟ್ಟು | ೯೫,೧೫,೦೦೦ | ೭೪,೧೦,೦೦೦ | ೭೭.೮೮ | ೧೮,೫೦,೦೦೦ (೨೪.೯೭) | ೫೫,೬೦,೦೦೦ (೭೫.೦೩) | |

ಆಧಾರ: ವಿಜಯಲಕ್ಷ್ಮೀ ಆರ್. 'ಹಾಲಕ್ಕಿ ಒಕ್ಕಲಿಗ ಮಹಿಳೆ' (ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನ) ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ.

## ೬.೪ ಸ್ಥಳಾಂತರ ಮತ್ತು ಕುಣಬಿ ಸಮುದಾಯ

'ಸರಕಾರದ ಅನೇಕ ಅಭಿವೃದ್ಧಿ ಯೋಜನೆಗಳಿಂದು ಬುಡಕಟ್ಟುಗಳನ್ನು ಅರಣ್ಯದಿಂದ ಸ್ಥಳಾಂತರಿಸುವ ಕೆಲಸ ನಡೆಯುತ್ತಿದೆ. ಸ್ಥಳಾಂತರ ಎನ್ನುವುದು ಅತ್ಯಂತ ಸುಂದರ ಪದ. ಆದರೆ ಬುಡಕಟ್ಟುಗಳನ್ನು ಅತ್ಯಂತ ಅಮಾನವೀಯವಾಗಿ ಅವರ ಮೂಲ ನೆಲೆಗಳಿಂದ ಅಕ್ಷರಶಃ ಹೊರಗಟ್ಟಲಾಗುತ್ತದೆ. ಸ್ಥಳಾಂತರಗೊಳ್ಳುವ ಸಮುದಾಯ ತನ್ನ ಮೂಲ ನೆಲೆಯೊಡನೆ ಇಟ್ಟುಕೊಂಡ ಭಾವನಾತ್ಮಕ ಸಂಬಂಧದಿಂದ ಕಳಚಿಕೊಳ್ಳುವಲ್ಲಿ ಅದು ಮಾನಸಿಕವಾಗಿ ಕುಗ್ಗಿಹೋಗಿರುತ್ತದೆ. ತನ್ನೆಲ್ಲ ಚಟುವಟಿಕೆಗಳಿಗೆ ಇಂಬು ಕೊಟ್ಟಿದ್ದ ತಲತಲಾಂತರದ ಬದುಕನ್ನು ರೂಪಿಸಿಕೊಳ್ಳಲು ಅನುವು ಮಾಡಿಕೊಟ್ಟ ನೆಲೆಯನ್ನು ಬಿಟ್ಟು ಹೋಗುವುದು ಯಾರಿಗಾದರೂ ಕಷ್ಟದ ಕೆಲಸವೇ. ಅಭಿವೃದ್ಧಿಯ ಹೆಸರಲ್ಲಿ ಸರಕಾರ ರೂಪಿಸುವ ಅನೇಕ ಯೋಜನೆಗಳು ಇಂದು ಹಲವು ಕಡೆಯಲ್ಲಿ ಈ ಸ್ಥಳಾಂತರದ ಸಮಸ್ಯೆಯನ್ನು ಹುಟ್ಟುಹಾಕಿವೆ. ಅನಿವಾರ್ಯವಾಗಿ 'ರಾಷ್ಟ್ರದ ಹಿತ' ವೃದ್ಧಿಯಿಂದ ಎಲ್ಲರೂ ಸರಕಾರದ ಆದೇಶದ ಮೇರೆಗೆ ಏನೇ ಕಷ್ಟವಾದರೂ ಸ್ಥಳಾಂತರಗೊಳ್ಳಲು ಅಂತಿಮವಾಗಿ ಒಪ್ಪಿಬಿಡುತ್ತಾರೆ. ಪುನರ್ವಸತಿಯಲ್ಲಿ ಅನೇಕ ಸಲ ವಿಳಂಬ, ಪಕ್ಷಪಾತ, ಎಲ್ಲವೂ ಅತ್ಯಂತ ಸಾಮಾನ್ಯವೆಂಬಂತೆ ನಡೆದುಹೋಗುತ್ತವೆ'.[೬] ಆದಿವಾಸಿಗಳು ಮೊದಲೇ ರಾಜಕೀಯವಾಗಿ ಅಸಂಘಟಿತರು, ಅವರಿಗೆ ತಮ್ಮ ಆಸ್ತಿಯ ಮೇಲಿನ ಅಧಿಕಾರವನ್ನು ಒಂದು ರಾಜಕೀಯ ಹಕ್ಕಾಗಿ ಪ್ರತಿಪಾದಿಸುವ ದಾರಿ ಗೊತ್ತಿಲ್ಲದೆ ಈ ಸ್ಥಳಾಂತರವನ್ನು ಅನಿವಾರ್ಯವಾಗಿ ಒಪ್ಪಿಬಿಡುತ್ತಾರೆ. ಹೀಗಾಗಿ 'ಅಭಿವೃದ್ಧಿ ಎಂದರೆ ಅಸಮಾನತೆಯನ್ನು ಬಿತ್ತುವ ಒಂದು ತಂತ್ರ'. ಒಂದು ಪ್ರದೇಶ, ಒಂದು ಸಮುದಾಯದ ಪ್ರಾಕೃತಿಕ ಸಂಪನ್ಮೂಲಗಳನ್ನು ಇನ್ನೊಂದು ಪ್ರದೇಶ ಅಥವಾ ಸಮುದಾಯ ಕಿತ್ತುಕೊಳ್ಳುವುದು. ಆದಿವಾಸಿ ಸಮುದಾಯದ ಉಸಿರಾದ ಕಾಡು ಇನ್ನೊಬ್ಬನ ಅಭಿವೃದ್ಧಿಯ ಮಾನದಂಡದ ಮಾದರಿಯಾಗುತ್ತದೆ. ಇದಕ್ಕೆ ರಾಜಕೀಯ ಹಾಗೂ ಸಾಮಾಜಿಕ ಕುಮ್ಮಕ್ಕು ಇರುವುದರಿಂದಲೇ ಇದು ರಾಷ್ಟ್ರೀಯ ಅಭಿವೃದ್ಧಿ ಮಾದರಿಯೆಂಬ ಭ್ರಮೆಯನ್ನು ಬಿತ್ತಲಾಗುತ್ತದೆ'.[೭] ಸರಕಾರವಾಗಲೀ, ಆಡಳಿತ ಮಂತ್ರವಾಗಲೀ ಅಂತಿಮವಾಗಿ ಸರಕಾರ ಅಥವಾ ಖಾಸಗೀಯವರ ಬಂಡವಾಳ ಹೂಡಿಕೆಯ ಪರವಾಗಿ ನಿಂತು ಬಿಡುತ್ತದೆ. ಆದರೆ ಯೋಜನೆಯಿಂದಾಗುವ ಪರಿಣಾಮಗಳ ಬಗ್ಗೆ ಎಲ್ಲರೂ ಕುರುಡರಾಗಿ, ಕಿವುಡರಾಗಿ ವರ್ತಿಸಲಾರಂಭಿಸುತ್ತಾರೆ.

'ಬುಡಕಟ್ಟು ಸಮುದಾಯಗಳ ಕುರಿತು ಬಹಳ ಸಲ ಸರಕಾರ ಈ ಸ್ಥಳಾಂತರದ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸುವುದೇ ಇಲ್ಲ, ಅದಕ್ಕಾಗಿ ಈ ಸಮುದಾಯಗಳ ಪುನರ್ವಸತಿ ಕೆಲವು ಸಲ ನಡೆಯುವುದೇ ಇಲ್ಲ. ಮೊದಲೇ ಅಸಂಘಟಿತ, ಧ್ವನಿ ಇಲ್ಲದ ಸಮುದಾಯಗಳ ಪರಿಹಾರ ಅಥವಾ ಪುನರ್ವಸತಿಯ ಕುರಿತು ಯೋಚಿಸುವುದೇ ಇಲ್ಲ.

ಕುಡಗುಂಜಿ ದ್ವೀಪದ ಹಸಲರು ಇಂದು ಪರಿಹಾರದ ಕನಸನ್ನು ಕಾಣುತ್ತಿಲ್ಲ, ಅವರಿಗೆ ತಿನ್ನಲು ಅನ್ನವೂ ಇಲ್ಲ, ಯಾವುದೋ ಮರದ, ಕಾಂಡದ ತಿರುಳನ್ನ, ಗೆಡ್ಡೆ-ಗೆಣಸುಗಳನ್ನು ತಿಂದು ಬದುಕುವ ಅನಿವಾರ್ಯತೆ ಬಂದಿದೆ. ಆಳುವ ವರ್ಗದ ದಿವ್ಯ ನಿರ್ಲಕ್ಷ್ಯ ಇದಕ್ಕೆಲ್ಲಾ ಕಾರಣ. ಆಣೆಕಟ್ಟು ಅಥವಾ ಇನ್ನಾವುದೇ ಬೃಹತ್ ಯೋಜನೆ ತನ್ನ ಅತಿಯಾದ ವ್ಯಾಪ್ತಿಯಿಂದ ಭಾರಿ ಗಾತ್ರದಲ್ಲಿ ಸ್ಥಳಾಂತರ, ಪರಿಹಾರ ಮತ್ತು ಪುನರ್ವಸತಿಯ ಸಮಸ್ಯೆಯನ್ನು ಹುಟ್ಟು ಹಾಕಿಬಿಡುತ್ತದೆ. ಅನಂತರ ಸಂತ್ರಸ್ತರ ಬಳಿ ಹೋಗಿ, ನಿಮ್ಮ ಹೊಲದ ಪಾಣಿ ಕೊಡಿ, ಹಕ್ಕು ಪತ್ರ ಕೊಡಿ ಎಂದೆಲ್ಲಾ ದಾಖಲೆಗಳನ್ನು ಕೇಳುತ್ತಾರೆ. ಅರಣ್ಯದ ಬುಡಕಟ್ಟುಗಳು ಎಲ್ಲಿಂದ ತಾನೇ ಅವರಿಗೆ ದಾಖಲೆಗಳನ್ನು ಸೃಷ್ಟಿಸಿಯಾರು? ಇನ್ನು ಸಂತ್ರಸ್ಥರಿಗೆ ಪ್ರಾರಂಭವಾದ ಯೋಜನೆಯಲ್ಲಿ ಒಂದು ನೌಕರಿ ಕೊಡುವ ಆಮಿಷ ಒಡ್ಡಲಾಗುತ್ತದೆ. ಯಾವ ತಾಂತ್ರಿಕ ತರಬೇತಿ ಇಲ್ಲದ, ವಿದ್ಯಾರ್ಹತೆ ಇಲ್ಲದ ಬುಡಕಟ್ಟು ಸಮುದಾಯಗಳು ಅಲ್ಲಿ ಯಾವ ಬಗೆಯ ಉದ್ಯೋಗವನ್ನು ನಿರ್ವಹಿಸಬಲ್ಲರು, ಎಷ್ಟೋ ಸಲ ಪರಿಹಾರ ಕಾರ್ಯಗಳು ಸೂಕ್ತ ಕಾಲದಲ್ಲಿ ನಡೆಯದೆ ಹೋಗುತ್ತದೆ. ತತ್ತರಿಸಿದ ಸಮುದಾಯಗಳು ಹಲವು ಕಡೆ ಪುನರ್ವಸತಿ ಪರಿಹಾರ ಎರಡನ್ನೂ ನಿರಾಕರಿಸಿ ನಿರಾಸೆಯಿಂದ ಎತ್ತಲೋ ಹೋಗಿಬಿಡುತ್ತವೆ’.[೮] ಈ ಎಲ್ಲಾ ಕಾರಣಗಳಿಂದ ಸ್ಥಳಾಂತರ ಎನ್ನುವುದು ಒಂದು ಸಮುದಾಯವನ್ನು ಅದರ ಮೂಲ ಬೇರುಗಳಿಂದ ಕಿತ್ತು ಹಾಕುವುದು, ಆ ಸಮುದಾಯದ ಸ್ಮೃತಿ ಜಗತ್ತನ್ನು ಇಲ್ಲವಾಗಿಸಿ ಲೌಕಿಕದಲ್ಲಿ ಅದನ್ನು ಅಕ್ಷರಶಃ ನಾಶಮಾಡುವುದು. ಸ್ಥಳಾಂತರವು ಒಂದು ಬಗೆಯಲ್ಲಿ ಸಮುದಾಯದ ನಾಶವನ್ನು ತನ್ನಲ್ಲಿ ಹುದುಗಿಸಿಕೊಂಡಿದೆ, ಇದರ ಜೊತೆಗೆ ಸ್ಥಳಾಂತವು ಸ್ಥಳಾಂತರಗೊಂಡ ಆದಿವಾಸಿ ಸಮುದಾಯಗಳಲ್ಲಿ ವಿಚಿತ್ರವಾದ ಸಮಸ್ಯೆಗಳನ್ನು ಹುಟ್ಟು ಹಾಕುತ್ತದೆ. ಸ್ಥಳಾಂತರಗೊಂಡ ಸಮುದಾಯ ತನ್ನ ಪಾರಂಪರಿಕ ಉತ್ಪಾದನಾ ವ್ಯವಸ್ಥೆಯಿಂದ ದೂರವಾಗಿ ನಗರಕ್ಕೆ ಅಥವಾ ಯಾವುದೇ ಪಟ್ಟಣಕ್ಕೆ ಹೋಗಿ ನೆಲೆ ನಿಲ್ಲಬೇಕಾಗುತ್ತದೆ. ಆದರೆ ಸ್ಥಳಾಂತರದಿಂದಾಗಿ ಆದಿವಾಸಿ ಸಮುದಾಯ ತನ್ನ ಪಾರಂಪರಿಕ ಪರಿಸರದಿಂದ ದೂರವಾಗುತ್ತದೆ. ಜನ್ಮತಃ ಕಾಪಾಡಿಕೊಂಡು ಬಂದಿದ್ದ ತನ್ನೆಲ್ಲ ಜೀವದಾಯಕ ಅಂಶಗಳಿಂದ ಆದಿವಾಸಿ ಸಮುದಾಯ ದೂರವಾಗುತ್ತದೆ. ಇದಲ್ಲದೆ ‘ಸ್ಥಳಾಂತರಗೊಂಡ ಸಮುದಾಯ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಲವಾರು ಅವಕಾಶಗಳಿಂದ ವಂಚಿತರಾಗಿದ್ದಾರೆ. ಸ್ಥಳಾಂತರಗೊಂಡ ಪ್ರದೇಶದಲ್ಲಿ ವ್ಯವಸಾಯವನ್ನು ಮಾಡುತ್ತಿದ್ದರು; ಅದೂ ಸಹ ಸಂಕೀರ್ಣ ಸ್ಥಿತಿಯನ್ನು ತಲುಪಿದೆ. ರಾಸಾಯನಿಕ ಗೊಬ್ಬರಗಳ ಉಪಯೋಗ, ಬಂಡವಾಳದ ಅಗತ್ಯ ಮುಂತಾದವು ವ್ಯವಸಾಯ ಕ್ಷೇತ್ರದಿಂದ ದೂರ ಮಾಡುತ್ತಿದೆ. ಅಪರಿಚಿತ ಪ್ರದೇಶದ ಸಂಸ್ಕೃತಿ, ಲೈಂಗಿಕ ಹಿಂಸೆ, ಇನ್ನಿತರ ಕಾರಣಗಳಿಂದಾಗಿ ಆದಿವಾಸಿ ಸ್ತ್ರೀಯರ ಜೀವನ ದುರ್ಭರವಾಗಿದೆ. ಒಂದು ಸಮುದಾಯ

ತನ್ನನ್ನು ಅರ್ಥೈಸಿಕೊಳ್ಳುವುದು ಹಾಗೂ ಪುನರ್‌ರಚಿಸಿಕೊಳ್ಳುವುದನ್ನು ಸ್ತ್ರೀಯರ ನಿಯಂತ್ರಣದ ಮೂಲಕವೇ ಮಾಡುತ್ತದೆ'.[೯] ಇದಲ್ಲದೆ ಸ್ಥಳಾಂತರದ ನಂತರ ಆದಿವಾಸಿ ಮಹಿಳೆ ಒಂದು ಬಗೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಸ್ಥಿರತೆಯನ್ನು ಅನುಭವಿಸಲಾರಂಭಿಸುತ್ತಾಳೆ, ಮುಖ್ಯವಾಹಿನಿ ಸಮಾಜ ಆದಿವಾಸಿ ಹೆಂಗಸರನ್ನು 'ಲೈಂಗಿಕವಾಗಿ ಮುಕ್ತತೆಯನ್ನು ಆಚರಿಸುತ್ತಾರೆಂದು ಭಾವಿಸುತ್ತದೆ, ಸಮಾಜದ ಮುಖ್ಯ ವಾಹಿನಿಯ ವಿಶೇಷವಾಗಿ ಪುರುಷರು ಆದಿವಾಸಿ ಹೆಂಗಸರನ್ನು ಭೋಗಿಸಲು ಇರುವರೆಂದೇ ಭಾವಿಸುತ್ತಾರೆ, ಆದಿವಾಸಿ ಹೆಂಗಸರನ್ನು ಮುಕ್ತ ಲೈಂಗಿಕತೆಯಿಂದಾಗಿ, ಆದಿವಾಸಿ ಸ್ತ್ರೀಯರು ಅತ್ಯಾಚಾರ ಹಾಗೂ ಇತರ ಲೈಂಗಿಕ ಕಿರುಕುಳವನ್ನು ಸಹ ಸಂತೋಷಿಸುತ್ತಾರೆಂದು ಭಾವಿಸುತ್ತಾರೆ. ವಲಸೆ ಬಂದ ಬಹುಪಾಲು ಆದಿವಾಸಿಗಳು ಕಟ್ಟಡದ ಕೆಲಸಗಳಲ್ಲಿ ತೊಡಗುವುದರಿಂದ ಸ್ತ್ರೀಯರ ಮೇಲೆ ನಡೆಯುವ ಲೈಂಗಿಕ ಹಿಂಸೆಯ ಪ್ರಮಾಣವು ಅಧಿಕವಾಗಿದೆ ಎಂಬುದು ಅಂಕಿಅಂಶಗಳಿಂದ ಸಾಬೀತಾಗಿದೆ. ಆದಿವಾಸಿ ಸಮಾಜದಲ್ಲಿ ಸ್ತ್ರೀ ಮತ್ತು ಪುರುಷರ ನಡುವೆ ಇರುವ ಸಮಾನತೆ ಅಂಶವನ್ನು ಗುರುತಿಸುವಲ್ಲಿ ನಾಗರಿಕವೆಂದೆನಿಸಿಕೊಂಡ ಸಮಾಜ ಸೋತಿದೆ. ಲೈಂಗಿಕತೆಯ ಮುಕ್ತತೆಯ ನೆಪದಲ್ಲಿ ಆದಿವಾಸಿ ಸ್ತ್ರೀಯರನ್ನು ಭೋಗದ ವಸ್ತುವೆಂದು ನ್ಯಾಯಸಮ್ಮತಗೊಳಿಸಲು ಪ್ರಯತ್ನಿಸುತ್ತಿದೆ'.[೧೦] ಸ್ಥಳಾಂತರದ ಅನಿಶ್ಚಿತತೆ ಮತ್ತು ಅತಂತ್ರ ಆರ್ಥಿಕ ಸ್ಥಿತಿಗತಿಯಿಂದ ದಿಕ್ಕೆಟ್ಟ ಆದಿವಾಸಿ ಸಮುದಾಯಗಳು ಅನುಭವಿಸುವ ತುಮುಲ ಮಾತ್ರ ಅಗಣಿತವಾದದ್ದು, ಹೀಗಾಗಿ ಸ್ಥಳಾಂತರದಿಂದ ಒಂದು ಆದಿವಾಸಿ ಸಮಾಜದಲ್ಲಿ ಹೆಚ್ಚು ಅತಂತ್ರಗಳಾದವರು ಕುಣಬಿಯರೇ ಆಗಿದ್ದಾರೆ. ಕುಣಬಿ ಸಮುದಾಯದಲ್ಲಿ ಈ ಬಗೆಯ ತಲ್ಲಣಗಳು ಕಳೆದ ಹಲವಾರು ವರ್ಷಗಳಿಂದ ಸಂಚಯಿಸುತ್ತಲೇ ಇವೆ. ಸೋಪಾ ಜಲಾಶಯ ಕುಣಬಿಗಳ ಕೃಷಿ ಭೂಮಿಯನ್ನು ಕಿತ್ತುಕೊಂಡು ಒಕ್ಕಲೆಬ್ಬಿಸಿತು. ಗಣಿಗಾರಿಕೆ ಮತ್ತು ಅದಿರಿನ Stock Yard ಗಳು ಕುಣಬಿಗಳನ್ನು ನಿರಂತರವಾಗಿ ಕಾಡುತ್ತಿದೆ. ಇನ್ನು ಸೀಬರ್ಡ್ ನೌಕಾ ನೆಲೆಯಂತೂ ಅಂಕೋಲಾ ಮತ್ತು ಕಾರವಾರ ನಡುವೆ ಬದುಕುವ ಕುಣಬಿಗಳ ಎಲ್ಲ ಬಗೆಯ ಪಾರಂಪರಿಕ, ಆರ್ಥಿಕ ಚಟುವಟಿಕೆಗಳನ್ನು ನಾಶಮಾಡಿದೆ.

### ೬.೫ ಯೋಜನೆಗಳು ಮತ್ತು ಪರಿಣಾಮಗಳು

ಉತ್ತರ ಕನ್ನಡ ಜಿಲ್ಲೆಯಲ್ಲಿ ಹಲವಾರು ಯೋಜನೆಗಳಿಂದ ಸಮುದಾಯಗಳು ನಿರಾಶ್ರಿತರಾದರು. ಸೀಬರ್ಡ್ ನೌಕಾನೆಲೆ, ಕೈಗಾ ಅಣು ವಿದ್ಯುತ್, ಕಾಳಿ ನದಿ ಯೋಜನೆಯಲ್ಲಿ ಕೊಡಸಳ್ಳಿ ನಿರಾಶ್ರಿತರು, ಕದ್ರಾ ನಿರಾಶ್ರಿತರು, ಸೂಪಾ ನಿರಾಶ್ರಿತರು, ಶರಾವತಿ ಟೇಲ್‌ರೇಸ್ ನಿರಾಶ್ರಿತರು, ಕೊಂಕಣ ರೈಲ್ವೆ, ಹೀಗೆ ಈ ಯೋಜನೆಯಡಿಯಲ್ಲಿ ಮನೆಮಠ ಕಳೆದುಕೊಂಡವರು ಹಲವಾರು. ನಿರಾಶ್ರಿತರಿಗೆ ಪರಿಹಾರ ನೀಡಿದರೂ ಅದು ಎಲ್ಲರಿಗೂ ಸಮರ್ಪಕವಾಗಿ ತಲುಪಿಲ್ಲ.

ನಿರಾಶ್ರಿತರಿಗೆ ಬೇಕಾದ ಮೂಲ ಸೌಲಭ್ಯ ಒದಗಿಸಿಲ್ಲ. ಒಟ್ಟಾಗಿ ಕಲೆತು ಬಾಳಿದ ಮನೆ, ಊರುಗಳು ದಿಕ್ಕಾಪಾಲಾಗಿವೆ, ಸರಕಾರ ನೀಡಿದ ಭೂಮಿಗಳೆಲ್ಲವೂ ಫಲವತ್ತತೆಯಿಂದ ಕೂಡಿದ ಭೂಮಿಯಲ್ಲ. ಒಂದೇ ಬೆಳೆಯನ್ನು ನೆಚ್ಚಿಕೊಂಡು ಅದೇ ಬೆಳೆಯನ್ನು ಕೊಟ್ಟ ಭೂಮಿಯಲ್ಲಿ ಬೆಳೆಸಲಾಗದೆ, ಪರ್ಯಾಯ ಬೆಳೆ ಬೆಳೆಯಲಾಗದೆ ನಿರಾಶ್ರಿತರು ಕಂಗೆಡುವಂತಾಗಿದೆ. ನೀರಿನಿಂದಾಗಿ ಮುಳುಗಿದ ಮನೆಮಾರುಗಳನ್ನು ತ್ಯಾಗ ಮಾಡಿದ ಊರಿನ ಜನತೆಗೆ ಕುಡಿಯಲು ನೀರಿಲ್ಲ, ಆರೋಗ್ಯಪೂರ್ಣ ಪರಿಸರವಿಲ್ಲ, ಪರಿಸರಗಳನ್ನು ಹಾಳು ಮಾಡಲು ಯಾಕಾದರೂ ಇಂತಹ ಉದ್ಯಮಗಳು ಬರುತ್ತವೋ?

ಇಲ್ಲಿನ ಜಲಪಾತಗಳು, ನದಿಗಳು ಜಿಲ್ಲೆಗೆ ವರವಾಗಿ ಬರಲಿಲ್ಲ, ಇಲ್ಲಿ ಬಂದಷ್ಟು ವಿದ್ಯುತ್ ಯೋಜನೆಗಳು ಬೇರಾವ ಜಿಲ್ಲೆಗೂ ಬಂದಿರಲಿಕ್ಕಿಲ್ಲ. ನೋಡಲು ಸುಂದರ ಕಾಣುವ ಉತ್ತರ ಕನ್ನಡ ಜಿಲ್ಲೆ ಸಮಸ್ಯೆಗಳ ಅಗರವಾಗಿದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಮುತ್ಸದ್ದಿ ಧುರೀಣರೂ ಬೇಕಾಗಿದ್ದಾರೆ, ಜೇಬೊಳಗೆ ಹಣ ತುಂಬಿ, ಇನ್ನೊಂದಿಷ್ಟು ಯೋಜನೆಗಳನ್ನು ಹರಸಾಹಸ ಮಾಡಿ ತುಂಬಲು ಮುಖಂಡರಿದ್ದಾರಷ್ಟೆ, ಬಡವರ ಹಿಡಿ ಭೂಮಿಯನ್ನು ಕಬಳಿಸಿ, ತನ್ನ ಅನ್ನವನ್ನು ತಾನು ಪಡೆಯುವ ರೈತನ ಆಸೆಗಿಲ್ಲಿ ಕಲ್ಲು ಬಿದ್ದಿದೆ. ಕರಾವಳಿ ತೀರದ ಜನತೆಯ ಬದುಕಂತೂ ಬಿಡಿ ಮೀನುಗಾರರೇ ಹೆಚ್ಚಿರುವ ಆ ವಲಯದಲ್ಲಿ ಅವರಿಗೆ ಹೊಲ ಗದ್ದೆಗಳಿಲ್ಲ, ಕೇವಲ ಮೀನು ಹಿಡಿದು ಅದರಿಂದ ಬಂದ ಹಣದಲ್ಲಿ ಬದುಕು ಸಾಗಿಸಬೇಕು. ಒಟ್ಟಾರೆ ಉತ್ತರ ಕನ್ನಡದ ಜನತೆಯ ಬದುಕು ನೂರಾರು ಕಷ್ಟ ಕೋಟಲೆಗಳ ಕಣಜವಂತೂ ಹೌದು. ಇಷ್ಟೇ ಆಗಿದ್ದರೇ ಪರವಾಗಿರಲಿಲ್ಲ ಇನ್ನೂ ಮುಂದೆ ಈ ಜಿಲ್ಲೆಯ ಮೇಲೆ ಭಯೋತ್ಪಾದಕರ ಬೆದರಿಕೆಗಳು ಬರಬಹುದು. ಇಲ್ಲಿನ ನೆಮ್ಮದಿಗೆ ಭಂಗ ತರಬಹುದು ಎಂದಾದರೂ ಉತ್ತರ ಕನ್ನಡ ಶೇಷ ಪ್ರಶ್ನೆಯಾಗಿ ಉಳಿಯಬಹುದು. ಅವಶೇಷಗಳಡಿಯಲ್ಲಿ, ಕಡಲ ನೀರಲ್ಲಿ, ಕದಡಿದ ಕೆಸರಿನ ಕೆಂಪು ರಾಡಿಯಲ್ಲಿ ಹುದುಗಿ ಹೋಗಬಹುದು, ಇಲ್ಲವೇ ಬೆಂಕಿಯ ಉರಿಜ್ವಾಲೆಯಲ್ಲಿ ಸುಟ್ಟು ಭಸ್ಮವಾಗಬಹುದು. ಎಲ್ಲದ್ದಕ್ಕೂ ಈ ಜಿಲ್ಲೆ ಸಜ್ಜಾಗಿ ನಿಲ್ಲಬೇಕಾಗಿದೆ. ಅಭಿವೃದ್ಧಿಯ ಹೆಸರಿನಲ್ಲಿ ಮಾಡುವ ಯೋಜನೆಗಳಿಂದ ಪಶ್ಚಿಮ ಘಟ್ಟಗಳಿಗಂತೂ ಅಪಾಯ ತಪ್ಪಿದ್ದಲ್ಲ, ಜಿಲ್ಲೆಯಲ್ಲಿ ಜಲ ವಿದ್ಯುತ್ ಯೋಜನೆಯಾಯಿತು, ಅಣು ವಿದ್ಯುತ್ ಯೋಜನೆಯೂಯಾಯಿತು. ಈ ಖಾತೆಗಳ ಜೊತೆ ತದಡಿಯಲ್ಲಿ ಉಷ್ಣ ವಿದ್ಯುತ್ ಖಾತೆ ತೆರೆಯುವ ಹವಣಿಕೆಯಲ್ಲಿದೆ. ಹಾಗೆ ಬೇಡ್ತಿ, ಅಘನಾಶಿನಿ ಎನ್ನುತ್ತಾ ಜನರ ನಿದ್ದೆ ಕೆಡಿಸಿದ್ದಂತೂ ಸತ್ಯ. ಆಶ್ರಯವಾಗಿ ನೀಡಿದ ಭೂಮಿಯಲ್ಲಿ ಫಸಲಿನೊಸಲನ್ನ ಕಾಣದೆ ದೇಹ ಕೊರಡಾಗುತ್ತಿದೆ. ರೈತರು ಬೆಳೆಯುವ ಬೆಳೆಗೆ ಸೂಕ್ತ ಮಾರುಕಟ್ಟೆ ಸಿಗದೆ ಪರಿತಪಿಸುವಂತಾಗಿದೆ. ಇಲ್ಲಿನ ಜನತೆಗೆ ಉತ್ತರ ಕನ್ನಡವೆಂದರೆ ಪ್ರಶ್ನೆಯ ಗೂಡು, ಯಾವ ಸರಕಾರಗಳು ಬಂದರೂ, ಉತ್ತರ ಕನ್ನಡದ ಜನತೆಯೆಂದರೆ 'ಹರಕೆಯ ಕುರಿ' ಎಂಬ ಮಾತು ಸತ್ಯವಾಗಿದೆ.

ಉತ್ತರ ಕನ್ನಡ ಅರಣ್ಯ ಕಡಿಯುವ ಯೋಜನೆಗಳು ಬಂದಿವೆ. ಯಾವ ಯಾವ ಯೋಜನೆಗಳಿಂದ ಈವರೆಗೆ ಎಷ್ಟು ಅರಣ್ಯ ಭೂಮಿ ಕಬಳಿಸಿವೆ ಎಂಬುದು ಈ ಕೆಳಗಿನಂತಿವೆ.

**ಕೋಷ್ಟಕ–೬.೩**
**ಎಷ್ಟಿದೆ ಅರಣ್ಯ ಪ್ರದೇಶ (ಚ.ಕಿ.ಮೀ. ಯಲ್ಲಿ)**

| ಅ.ನಂ. | ವಿವರ | ಅರಣ್ಯದ ಪ್ರದೇಶ |
|---|---|---|
| ೧ | ಜಿಲ್ಲೆಯ ಒಟ್ಟು ಭೂಪ್ರದೇಶ | ೧೦೨೯೧ ಚ.ಕಿ.ಮೀ. |
| ೨ | ಒಟ್ಟು ಅರಣ್ಯ ಪ್ರದೇಶ | ೮೨೯೬ |
| ೩ | ಕಾಯ್ದಿಟ್ಟ ಅರಣ್ಯ | ೭೭೨೭ |
| ೪ | ಬೆಟ್ಟ–ರಕ್ಷಿತ ಅರಣ್ಯ | ೫೧೦ |
| ೫ | ರಕ್ಷಿತ ಅರಣ್ಯ | ೩೧ |
| ೬ | ಗ್ರಾಮ ಅರಣ್ಯ | ೨೬ |
| ೭ | ಕಾಂಡ್ಲವನ, ಇತ್ಯಾದಿ | ೯೪೩೮ |

**ಕೋಷ್ಟಕ–೬.೪**
**ಯಾವ ಯೋಜನೆಗೆ ಎಷ್ಟು ಅರಣ್ಯ ಭೂಮಿ (ಹೆಕ್ಟೇರ್‌ಗಳಲ್ಲಿ)**

| ಅ.ನಂ. | ವಿವರ | ಅರಣ್ಯದ ಪ್ರದೇಶ |
|---|---|---|
| ೧ | ಸೀಬರ್ಡ್ ನೌಕಾನೆಲೆಗೆ | ೨೨೫೯ |
| ೨ | ಸೀಬರ್ಡ್ ಮೂರನೆ ಹಂತ | ೧೦೦೦ |
| ೩ | ಸೀಬರ್ಡ್ ಪುನರ್ವಸತಿಗೆ | ೬೪೩ |
| ೪ | ಕೈಗಾ ವಿದ್ಯುತ್ ಯೋಜನೆ | ೭೨೭ |
| ೫ | ಕೊಡಸಳ್ಳಿ ಅಣೆಕಟ್ಟು | ೧೩೬೦ |
| ೬ | ಕದ್ರಾ ಅಣೆಕಟ್ಟು | ೩೦೫೧ |
| ೭ | ಶರಾವತಿ ಅಣೆಕಟ್ಟು | ೭೦೦ |
| ೮ | ಅತಿಕ್ರಮಣ ಸಕ್ರಮಕ್ಕೆ (೧೯೯೭) | ೨೮೨೪ |
| ೯ | ಕೈಗಾ ನರೇಂದ್ರ ಮಾರ್ಗಕ್ಕೆ | ೩೩೦ |
| ೧೦ | ಕೊಂಕಣ ರೇಲ್ವೆ ಯೋಜನೆ | ೨೭೨ |
| ೧೧ | ಇನ್ನಷ್ಟು ಕಾರ್ಯಕ್ಕೆ ಸೇರಿ ಒಟ್ಟು | ೧೪೬೫೧ |

ಆಧಾರ : ವಿಜಯ ಕರ್ನಾಟಕ, ದಿನಪತ್ರಿಕೆ, ೨೯–೧೧–೨೦೦೯

ನನ್ನೊಳಗಿನ ಪ್ರಶ್ನೆಗಳು

೧. ಉತ್ತರ ಕನ್ನಡಕ್ಕೆ ವಿದ್ಯುತ್ ಯೋಜನೆಗಳು ಸೀಮಿತವೇ?

೨. ಈ ಜಿಲ್ಲೆಯಲ್ಲಿರುವಷ್ಟು ನಿರಾಶ್ರಿತರು ಬೇರಾವ ಜಿಲ್ಲೆಯಲ್ಲಿದ್ದಾರೆ?

೩. ಯೋಜನೆಗಳಿಂದ ನಿರಾಶ್ರಿತರಾದವರಿಗೆ ಯಾವ ಮೂಲಭೂತ ಸೌಲಭ್ಯ ಒದಗಿಸಿದರು?

೪. ಉದ್ಯಮಗಳು ಬರುವಾಗ ಬೇರೆ ಅಂದರೆ ಕೃತಕವಾಗಿ ಕಾಡನ್ನು ಬೆಳೆಸಬಹುದೆಂದು ಹೇಳುವ ಸರಕಾರಗಳು, ಈಗ ಹಾಳು ಕೆಡುವಿದ ಕಾಡನ್ನು ಮತ್ತೆಲ್ಲಿ ಬೆಳೆಸಿತು?

೫. ಶುದ್ಧ ಪರಿಸರ ಜನತೆಗೆ ಸಿಕ್ಕಿತೆ?

೬. ಬಂದ ಬೃಹತ್ ಯೋಜನೆಗಳಲ್ಲಿ ಈ ಜಿಲ್ಲೆಯ ಎಷ್ಟು ಜನರಿಗೆ ಉದ್ಯೋಗ ಒದಗಿಸಿತು?

೭. ಅಭಿವೃದ್ಧಿಯ ನೆಪವಿಟ್ಟು ಬಂದ ಯೋಜನೆಗಳು ಇವರಿಗೆಷ್ಟು ಪೂರಕವಾದವು?

೮. ವಿದ್ಯುತ್ ಉತ್ಪಾದನೆ ಈ ಜಿಲ್ಲೆಯಲ್ಲಿ, ವಿದ್ಯುತ್ ಕಡಿತ ಇವರಿಗೆ ಯಾಕೆ?

೯. ಈ ಜಿಲ್ಲೆಯ ಜನತೆಯ ತ್ಯಾಗ, ಕಂಬನಿ, ನಿಟ್ಟುಸಿರು, ಇವಕ್ಕೆಲ್ಲಾ ಯಾವ ಬೆಲೆಯೂ ಇಲ್ಲವೆ?

೧೦. ಯೋಜನೆಗಳು ಬರಲಿ, ಆದರೆ ಇಲ್ಲಿನ ಪರಿಸರಕ್ಕೆ ಅನುಕೂಲಕರವಾಗುವ ರೀತಿಯಲ್ಲಿ ನಡೆಸಲಿ, ಬರೇ ವಿದ್ಯುತ್ ಯೋಜನೆಗಳೇ ಯಾಕೆ ಇಲ್ಲಿ ಬರಬೇಕು? ಉತ್ತರ ಕನ್ನಡವೆಂದರೆ ಅಗ್ಗಗ್ಗೆ ಮಾರಾಟವಾಗುವ ಜಿಲ್ಲೆಯೇ?

ಪ್ರಶ್ನೆಗಳು ನೂರುಂಟು, ಉತ್ತರ ಕಂಡುಕೊಳ್ಳಲಾಗದ ಪ್ರಶ್ನೆಗಳೇ ಅಧಿಕ. ಚಡಿ ಏಟು ಬೀಳದ ಹೊರತು ತಾವು ಎಚ್ಚೆತ್ತುಕೊಳ್ಳಲಾರೆವು ಅಂತಾದರೆ, ನಮಗೆ ಗೊತ್ತಾಗದ ರೀತಿಯಲ್ಲಿ, ನಾವೊಂದು ದಿನ ಬೆಳಕಿದ್ದೂ, ಕತ್ತಲೆಯ ಗರ್ಭದಲ್ಲಿ ಹೂತು ಹೋಗುವುದಂತೂ ಸತ್ಯ.

ಭಾರತ ಸರಕಾರ ಆಣೆಕಟ್ಟುಗಳ ನಿರ್ಮಾಣವನ್ನು ದೇಶದ ಅಭಿವೃದ್ಧಿ ಹಾಗೂ ಪ್ರವಾಹ ಪೀಡಿತ ಪ್ರದೇಶಗಳ ರಕ್ಷಣೆಯ ಎರಡು ಮೂಲ ಉದ್ದೇಶದಿಂದ ನಿರ್ಮಾಣಗೊಳ್ಳುತ್ತ ಹೋದಹಾಗೆ ಆಣೆಕಟ್ಟುಗಳು ಬೃಹತ್ ಪ್ರಮಾಣದ ಅರಣ್ಯ ಕೃಷಿ ಭೂಮಿ, ಬುಡಕಟ್ಟು ಸಮುದಾಯ, ಹಳ್ಳಿಗಳು, ನಗರಗಳು ಇವುಗಳ ಸಂಪೂರ್ಣ ಮುಳುಗಡೆ ಮತ್ತು ಅರ್ಧ ಭಾಗ ಮುಳುಗಡೆಯಾಗಿ ಭಾರತದ ಆಡಳಿತಕ್ಕೆ ಸಮಸ್ಯೆಯಾಗಿ ಪರಿಣಮಿಸಿದೆ. ಇವುಗಳಲ್ಲಿ ಮುಖ್ಯವಾಗಿ ನರ್ಮದಾ ಸಾಗರ ಆಣೆಕಟ್ಟು ಮತ್ತು ಸರ್ದಾರ ಸರೋವರಗಳು ಸ್ಥಳಾಂತರ ಹಾಗೂ ಪುನರ್ವಸತಿ ಸಮಸ್ಯೆಗಳು ಜಾಗತಿಕವಾಗಿ ಪರಿಚಯವಾಗಿದೆ. ಭಾರತದಲ್ಲಿ ಅತಿ ಹೆಚ್ಚಿನ ಸ್ಥಳಾಂತರ ಮತ್ತು ಪುನರ್ವಸತಿ ಸಮಸ್ಯೆಗಳಾದ ಆಣೆಕಟ್ಟು ಯೋಜನೆಗಳೆಂದರೆ ಸೈಲೆನ್ಸ್ ವ್ಯಾಲಿ ಪೊಯಾಮಕೊಟ್ಟೆ ಆಣೆಕಟ್ಟು, ಆಲಮಟ್ಟಿ ಆಣೆಕಟ್ಟು, ಕೋಯಲಾ ಆಣೆಕಟ್ಟು, ನರ್ಮದಾ ಸಾಗರ

ಆಣೆಕಟ್ಟುಗಳು, ಸರ್ದಾರ ಸರೋವರ ಆಣೆಕಟ್ಟು, ಮಹೇಶ್ವರ ಆಣೆಕಟ್ಟು, ಬಾರಿಗೇ ಆಣೆಕಟ್ಟು, ತೆಹರಾ ಆಣೆಕಟ್ಟು, ಹಿರಾಕುಡ್ಡ ಆಣೆಕಟ್ಟುಗಳಾಗಿವೆ.

ಹೀಗೆ ಕುಣಬಿಯರು ಸರಕಾರದ ಅಭಿವೃದ್ಧಿ ಯೋಜನೆಯಿಂದ ಕಂಗಾಲಾಗಿ ಹೋಗಿದ್ದಾರೆ. ಈಗಲೂ ಕೂಡ ಕುಣಬಿ ಸಮುದಾಯ ತನ್ನ ಆರ್ಥಿಕತೆಯ ಅಭಿವೃದ್ಧಿಗಾಗಿ ಕೃಷಿಯನ್ನೇ ಮುಖ್ಯ ಕಸುಬಾಗಿ ಮಾಡಿಕೊಂಡಿದೆ. ಅಲ್ಲದೆ ಕಾಡಿನಲ್ಲಿ ಸಿಗುವ ಇತರೆ ಅರಣ್ಯೋತ್ಪನ್ನಗಳಿಂದ ಬುಟ್ಟಿ, ದಬ್ಬೆ, ಬೇಸಾಯದ ಪರಿಕರಗಳು, ಪಶು ಸಾಕಾಣಿಕೆ, ಮುಂತಾದ ಕಸಬುಗಳನ್ನು ಮಾಡಿಕೊಂಡು ಆರ್ಥಿಕವಾಗಿ ಸ್ವಾವಲಂಬಿಯಾಗಿ ಜೀವಿಸುತ್ತಿದ್ದರು. ಆದರೆ ಇಂದು ಸರಕಾರದ ಯೋಜನೆಗಳು ಕುಣಬಿಯರನ್ನು ಸಂಧಿಗ್ಧತೆಗೆ ಸಿಲುಕಿಸಿವೆ.

ಶೈಕ್ಷಣಿಕವಾಗಿ ಕುಣಬಿಯರು ಬಹಳ ಹಿಂದೆ ಉಳಿಸಿದ್ದಾರೆ. ಇಲ್ಲಿ ೧ ರಿಂದ ೫ನೇ ತರಗತಿಯವರೆಗೆ ಶಾಲೆಗಳಿವೆ, ಆದರೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಮಕ್ಕಳು ನಗರ ಪ್ರದೇಶಗಳಿಗೆ ಬರಬೇಕಾಗಿದೆ. ಆದ್ದರಿಂದ ಇಲ್ಲಿ ಹೆಚ್ಚು ಹೆಚ್ಚು ಮಕ್ಕಳು ವಿದ್ಯಾಭ್ಯಾಸ ಮಾಡಿದರೆ ಬೇರೆಯವರು ಯಾರೂ ಅವರನ್ನು ಅಭಿವೃದ್ಧಿ ಮಾಡಬೇಕಾಗಿಲ್ಲ. ಆದ್ದರಿಂದ ಶಿಕ್ಷಣವು ಕೂಡಾ ಒಂದು ಸಮುದಾಯ ಅಭಿವೃದ್ಧಿಯಾಗಲಿಕ್ಕೆ ಪೂರಕವಾಗಿರುವುದರಿಂದ ಶಿಕ್ಷಣದ ಬಗ್ಗೆ ಯೋಚಿಸಲೇ ಬೇಕಾಗಿದೆ.

ಕುಣಬಿಯರ ಅಭಿವೃದ್ಧಿಯ ಬಗ್ಗೆ ನಾವು ಆಳವಾಗಿ ಆಲೋಚಿಸಿ ಹೊರಟರೆ ಯಾವುದೇ ಆಸ್ಪತ್ರೆಗಳಿರದೆ, ಸರಿಯಾದ ರಸ್ತೆಗಳಿರದೆ, ಸಾರಿಗೆಯ ವ್ಯವಸ್ಥೆಯೇ ಇಲ್ಲದ ಪ್ರದೇಶಗಳಲ್ಲಿ ತಮ್ಮದೇ ಆದ ಬದುಕನ್ನು ಸಾಗಿಸುತ್ತಿದ್ದಾರೆ. ಆದ್ದರಿಂದ ಕುಣಬಿಯರ ಅಭಿವೃದ್ಧಿ ಸರಿಯಾದ ನೆಲೆಯನ್ನು ಕಾಣದಾಗಿದೆ.

**ಉಪಸಂಹಾರ**

ಈ ಹಿನ್ನೆಲೆ ಕುಣಬಿ ಸಮುದಾಯದ ಅಥವಾ ಉತ್ತರ ಕನ್ನಡ ಜಿಲ್ಲೆಯ ಆಣೆಕಟ್ಟುಗಳ ಸಮಸ್ಯೆಯನ್ನು ಒಳಗೊಂಡಿದೆ. ಉತ್ತರ ಕನ್ನಡ ಜಿಲ್ಲೆಯ ಆಣೆಕಟ್ಟು, ರೈಲು, ರಸ್ತೆ, ಇಂತಹ ಯೋಜನೆಗಳಿಂದಾಗಿ ಕುಣಬಿ ಸಮುದಾಯ ಉತ್ತರ ಕನ್ನಡ ಜಿಲ್ಲೆಯ ಪರಿಸರ ಕಳೆದುಕೊಂಡ ಸಂಪತ್ತು ಅಧಿಕ. ಈ ಬಗೆಯ ಚರ್ಚೆ ಇಂದಿನ ಅನಿವಾರ್ಯ. ಆದರೆ ನಾಗರಿಕತೆ ಬೆಳವಣಿಗೆಯ ಭರದಲ್ಲಿ ನಾವು ಸಾಂಸ್ಕೃತಿಕ ಚಿಂತನೆಯ ಅರಿವಿಲ್ಲದೆ ಹೋದರೆ ನಮ್ಮ ಸಮುದಾಯದ ಶ್ರೀಮಂತಿಕೆಯನ್ನು ಕಳೆದುಕೊಳ್ಳುತ್ತೇವೆ. ಆಧುನಿಕತೆಯ ಯೋಜನೆ ಹಾಕುವವದು ಅವರ ಮೂಲ ನಿವಾಸಿಗಳ ಬದುಕು–ಇರುವಿಕೆಯ ಬಗೆಗೆ ಮೊದಲು ಸರಿಯಾದ ತೀರ್ಮಾನ ಮಾಡಿ ಅದಕ್ಕೆ ಪರಿಹಾರ ಕಾಣದ ಹೊರತು ಈ ಬಗೆಯ ಯೋಜನೆಗಳಿಗೆ ಕೈ ಹಾಕಬಾರದು. ಸಾವಿರಾರು

ವರ್ಷಗಳಿಂದ ನಾವು ಬೆಳೆಸಿಕೊಂಡು ಬಂದ ಒಂದು ಸಮುದಾಯ-ಸಂಸ್ಕೃತಿ ಆಧುನಿಕತೆಯ ಯೋಜನೆಗಳ, ಅಭಿವೃದ್ಧಿಯ ಹೆಸರಲ್ಲಿ ನಾಶವಾಗುವದು ಯಾವ ನ್ಯಾಯ? ಈ ಬಗೆಯ ಚಿಂತನೆ ಇಂದು ಸಮಾಜದಲ್ಲಿ ರಾಜ್ಯ-ರಾಷ್ಟ್ರ ಆಳುವವರಲ್ಲಿ ಬರಬೇಕಾಗಿದೆ. ಅಂಥ ಚಿಂತನೆ ಬೆಳೆಸುವ ಪ್ರಯತ್ನಕ್ಕೆ ಸಮುದಾಯದ ಸಂಘಟಿತ ಹೋರಾಟ ಆರಂಭಿಸಬೇಕಿದೆ. ಅಂದರೆ ಮಾತ್ರ ಸಮುದಾಯದ ಉಳಿವು ಸಾಧ್ಯವಾಗುತ್ತದೆ.

## ಟಿಪ್ಪಣಿಗಳು

೧. ಪ್ರಿಯಾ ಎಂ. ಭಟ್ : 'ನಮ್ಮ ಜಿಲ್ಲೆ, ನಮ್ಮ ಕರಾವಳಿ'. ಸ್ಮರಣ ಸಂಚಿಕೆ, ಪು. ೧೦, ೨೦೦೭.

೨. ಡಾ. ಬೋರಲಿಂಗಯ್ಯ ಹಿ.ಚಿ. : 'ಕುಣಬಿಯರು', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೬೬-೬೭, ೨೦೧೦.

೩. ಡಾ. ಪ್ರಭಾಕರ ಎ.ಎಸ್. : 'ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು'. ಪು. ೧೪೮-೧೪೯, ೨೦೦೦.

೪. ಡಾ. ಬೋರಲಿಂಗಯ್ಯ ಹಿ.ಚಿ. : 'ಕುಣಬಿಯರು', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೫೦-೫೨, ೨೦೧೦.

5. Report of Committee on Forest and Tribals in India, pp. 1-54, 1982.

೬. ಮೋಹನಕೃಷ್ಣ ರೈ : 'ಅಭಿವೃದ್ಧಿ ಪಥ'. ಪು. ೯೪೪, ೨೦೦೮.

೭. ಡಾ. ಪ್ರಭಾಕರ ಎ.ಎಸ್. : 'ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು'. ಪು. ೧೭೦, ೨೦೦೦.

೮. ಸುಧಾ ಎಂ. ಕರ್ಕಿಸವಲು : 'ನೋಡಲು ಚೆಲುವಿನ, ಸಮಸ್ಯೆಗಳ ಗೂಡು ಉತ್ತರ ಕನ್ನಡ'. ಸ್ಮರಣ ಸಂಚಿಕೆ, ಪು. ೧೫-೧೬, ೨೦೦೭.

೯. ತಿಳುವಳಿಕೆ ನೀಡಿದವರು – ಸುಭಾಷ ವೇಳಿಪ, ಜೋಯಿಡಾ ತಾಲೂಕು.

೧೦. ತಿಳುವಳಿಕೆ ನೀಡಿದವರು – ಪರಮೇಶ್ವರ ರಾಮಾ ಕುಣಬಿ, ಕಟ್ಟಿಗೆ, ಯಲ್ಲಾಪುರ ತಾಲೂಕು.

೧೧. ತಿಳುವಳಿಕೆ ನೀಡಿದವರು – ಮಹಾಬಳೇಶ್ವರ ಸೋ. ಕಾಜುಗಾರ, ಅಣಶಿ, ಜೋಯಿಡಾ ತಾಲೂಕು.

೧೨. ತಿಳುವಳಿಕೆ ನೀಡಿದವರು – ಮಹೇಂದ್ರ ಕುಮಾರ ಬಿ.ಪಿ. 'ಗ್ರೀನ್ ಇಂಡಿಯಾ', ಆಜಾದ ನಗರ, ದಾಂಡೇಲಿ.

೧೩. ವಿಜಯಲಕ್ಷ್ಮೀ ಆರ್. 'ಹಾಲಕ್ಕಿ ಒಕ್ಕಲಿಗ ಮಹಿಳೆ' (ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನ) ಪುಟ ೨೩೫-೨೩೬, ಅಪ್ರಕಟಿತ ಪಿಎಚ್.ಡಿ. ಮಹಾ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮.

೧೪. ವಿಜಯ ಕರ್ನಾಟಕ, ದಿನಪತ್ರಿಕೆ, ಪು. ೨, ೧೨ನೇ ಡಿಸೆಂಬರ್ ೨೦೦೯.

15. Prakash S.R. : 'River Dam Construction and Resettlement of Affected Villages'. Inter Indian Publication, New Delhi, pp. 140-141, 1995.

16. Sundarraj : 'Development Projects and Discipline Peoples'. Man and Development Journal, Vol. 21, No. 1, pp. 42-44, 1999.

ಅಧ್ಯಾಯ ೭

# ಸಮಾರೋಪ

ಭಾರತ ತುಂಬಾ ಸಂಕೀರ್ಣವಾದ ದೇಶ, ಇಲ್ಲಿ ಹಲವಾರು ಧಾರ್ಮಿಕ ಪಂಥಗಳು, ಹೊಸ ಹೊಸ ಸಮುದಾಯಗಳು ಹುಟ್ಟಲು ಕಾರಣವಾಗಿದೆ. ಹಾಗೆ ಧಾರ್ಮಿಕ ಪಂಥದಷ್ಟೇ ಬಲಿಷ್ಠವಾದ ರಾಜಶಾಹಿ ವ್ಯವಸ್ಥೆಯೂ ಸಹಿತ ಹಲವು ಜಾತಿ ಸಮುದಾಯಗಳ ಹುಟ್ಟಿಗೆ ಕಾರಣವಾದುದನ್ನು ಚರಿತ್ರೆಯ ಮೂಲಕ ಅರಿತಿದ್ದೇವೆ.

ಒಂದು ಕಾಲಕ್ಕೆ ತಮ್ಮ ವೃತ್ತಿಗಳನ್ನು ಅನುಸರಿಸುತ್ತಾ ಅವುಗಳ ಉತ್ಪಾದಕತೆ ಮತ್ತು ವ್ಯವಹಾರಗಳನ್ನು ನಡೆಸುತ್ತ ವ್ಯವಸ್ಥೆಯೊಳಗೆ ಒಂದು ಗೌರವದ ಸ್ಥಾನವನ್ನು ಸಂಪಾದಿಸಿದ್ದವು. ತಾವು ಅನುಸರಿಸುವ ವೃತ್ತಿಗಳ ಕಾರಣಕ್ಕಾಗಿಯೇ ಅಧಮ, ಮಧ್ಯಮ, ಉತ್ತಮ ಎಂದು ನಿರ್ಧರಿತಗೊಳ್ಳತೊಡಗಿದವು. ಪಂಥಗಳು ಪಂಗಡಗಳಾಗಿ, ಪಂಗಡಗಳೇ ಜಾತಿಗಳಾಗಿ ಪರಿವರ್ತಿತಗೊಂಡವು. ತಮ್ಮ ತಮ್ಮ ವೃತ್ತಿಗಳನ್ನು ಮಾಡುತ್ತಾ ನೆಮ್ಮದಿಯಾಗಿದ್ದ ಕುಶಲಕರ್ಮಿ ಆದಿವಾಸಿಗಳ ಶ್ರಮ ಶಕ್ತಿಯನ್ನು ರಾಜಶಾಹಿ ತನ್ನ ಉಪಯೋಗಕ್ಕೆ ಬಳಸಿಕೊಳ್ಳುವ ಚಾಣಾಕ್ಷತೆ ತೋರತೊಡಗಿತು. ಅಮಾಯಕ ಮುಗ್ಧ ಸಮುದಾಯಗಳು ರಾಜಶಾಹಿಯ ಆಮಿಷಗಳಿಗೆ ಸುಲಭವಾಗಿಯೇ ಬಲಿ ಬಿದ್ದವು. ಕೊನೆಗೊಂದು ದಿನ ರಾಜ ವ್ಯವಸ್ಥೆಯ ಅವನತಿಯಿಂದಾಗಿ ರಾಜಶಾಹಿಯನ್ನೇ ನಂಬಿದ್ದ ಬಹುಪಾಲು ಸಮುದಾಯಗಳು ನೆಲೆ ಕಳೆದುಕೊಂಡು ಕಾಡು ಸೇರುವಂತಾಯಿತು, ಕಾಡೇ ಅವರ ಬದುಕಾಯಿತು. ಕಾಡಿನಿಂದ ಕಾಡಿಗೆ ಅಲೆಯುತ್ತಾ ಅತಂತ್ರವಾಗಿ ಆದರೂ ಸ್ವತಂತ್ರವಾಗಿ ಬದುಕಿದ್ದ ಸಮುದಾಯಗಳಿಗೆ ರಕ್ತಬೀಜಾಸುರನಂತೆ ಕಾಡಿದ್ದು ಮಾತ್ರ ವಸಾಹತುಶಾಹಿ ಬ್ರಿಟಿಷ ಆಡಳಿತ. ಬ್ರಿಟಿಷ ಆಡಳಿತದಿಂದಾಗಿ ನಿರ್ಗತಿಕವಾದ ಸಮುದಾಯಗಳು ಕೊನೆಗೆ ತಮ್ಮ ಬದುಕಿಗೆ ಮುಳುವಾದ ವ್ಯವಸ್ಥೆ ವಿರುದ್ಧವೇ ತಿರುಗಿಬಿದ್ದವು. ಆದರೆ ಆ ವ್ಯವಸ್ಥೆಯನ್ನು ಎದುರಿಸುವಷ್ಟು ಬಲ ಮತ್ತು ಒಗ್ಗೂಡುವಿಕೆಯ ಶಕ್ತಿ ಈ ಸಮುದಾಯಗಳಿಗಿರಲಿಲ್ಲ. ಈ ಸಮುದಾಯಗಳನ್ನು, ಹಿಡಿತದಲ್ಲಿ ಇರಿಸಿಕೊಳ್ಳಲು ಪ್ರಾಯಶಃ ಬ್ರಿಟಿಷರು ಒಡೆದು ಆಳುವ ನೀತಿಯನ್ನೆ ಅನುಸರಿಸಿದರೆನಿಸುತ್ತದೆ. ಪಂಗಡ ಪಂಗಡಗಳಾಗಿ ಪ್ರತ್ಯೇಕವಾಗಿ ಕಾಡಿನಲ್ಲಿ ಜೀವಿಸುತ್ತಿದ್ದ ಅಲೆಮಾರಿ ಬುಡಕಟ್ಟುಗಳನ್ನು ಒಂದೇ ಕಡೆಗೆ ಕೂಡಿ ಹಾಕುವದಷ್ಟೆ ಅಲ್ಲ ತಮ್ಮ ಅವಶ್ಯಕತೆಗಳನ್ನು ಪೂರೈಸುವ ಜೀತದ ಆಳುಗಳಾಗಿಸಿಕೊಂಡರು, ಹೀಗೆ ೧೯೪೭ರ ವರೆಗೆ ತಾವು ಭಾರತ ಬಿಟ್ಟು ಹೋಗುವವರೆಗೂ ಈ ಬುಡಕಟ್ಟುಗಳನ್ನು ಬ್ರಿಟಿಷರು ದುಡಿಸಿಕೊಂಡರು. ತರುವಾಯ ಸ್ವತಂತ್ರ ಭಾರತದ ಅಧಿಕಾರಿಗಳು ಅವರನ್ನು ಬ್ರಿಟಿಷ ರೀತಿಯಲ್ಲಿಯೇ ನಡೆಸಿಕೊಂಡರು.

ದೇಶಕ್ಕೆ ಸ್ವಾತಂತ್ರ ಸಿಕ್ಕಿತು. ಆದರೆ ಬುಡಕಟ್ಟುಗಳಿಗೆ ಸ್ವಾತಂತ್ರ್ಯ ಸಿಗಲಿಲ್ಲ. ಇಂದಿಗೂ ಈ ಸಮುದಾಯಗಳನ್ನು ಬ್ರಿಟಿಷ ಕಾಲದ ಆಡಳಿತದ ದೃಷ್ಟಿಕೋನದಲ್ಲಿಯೇ ಇಲ್ಲಿಯ ಪೊಲೀಸರು, ಅರಣ್ಯಾಧಿಕಾರಿಗಳು, ಮೇಲ್ವರ್ಗದ ಜನ ನೋಡುತ್ತಾರೆ. ಭಾರತವನ್ನು ಆಳುತ್ತಿದ್ದ ಬ್ರಿಟಿಷರಿಗೆ ಅಲ್ಪಸ್ವಲ್ಪವಾದರೂ ಮನುಷ್ಯತ್ವ ಇದ್ದಿರಬಹುದು ನಮ್ಮವರಿಗೆ ಅದೂ ಇಲ್ಲ ಎಂದು ಹಿರಿಯ ವ್ಯಕ್ತಿಯೊಬ್ಬರು ಕ್ಷೇತ್ರಕಾರ್ಯದಲ್ಲಿ ತಿಳಿಸಿದರು. ಅಂದರೆ ಸ್ವತಂತ್ರ್ಯ ಭಾರತದಲ್ಲಿ ಅವರೆಷ್ಟು ನೋವು ಅನುಭವಿಸುತ್ತಿದ್ದಾರೆಂಬುದು ಅವರ ಮನದಾಳದ ಮಾತುಗಳೆ ತಿಳಿಸಿಕೊಡುತ್ತವೆ.

ಪ್ರಸ್ತುತ ಈ ಅಧ್ಯಯನದ ಪ್ರಮುಖ ಉದ್ದೇಶವೇನೆಂದರೆ ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಸಿಸುತ್ತಿರುವ ಕುಣಬಿ ಬುಡಕಟ್ಟು ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಈ ಪ್ರಬಂಧದಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಕುಣಬಿ ಸಮುದಾಯವು ಪರಿಶಿಷ್ಟ ವರ್ಗಕ್ಕೆ ಸೇರದ ಬುಡಕಟ್ಟು ಸಮುದಾಯವಾಗಿದ್ದು, ಹೆಚ್ಚಾಗಿ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಯಲ್ಲಾಪುರ, ಅಂಕೋಲಾ, ಕಾರವಾರ ತಾಲೂಕಿನಲ್ಲಿ ನೆಲೆಸಿದೆ. ಅಲ್ಲಲ್ಲಿ ಸಣ್ಣ ಸಣ್ಣ ಘಟಕಗಳು ಹಳಿಯಾಳ, ಕುಂದಾಪುರ ಹಾಗೂ ಶಿರಸಿ ತಾಲೂಕಿನಲ್ಲಿ ಕಾಣಿಸುತ್ತವೆ. ಕೆಲವು ಗುಂಪುಗಳು ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ಮತ್ತು ಮಂಗಳೂರು ತಾಲೂಕಿನಲ್ಲಿ ನೆಲೆಸಿವೆ. ಉಡುಪಿ ಜಿಲ್ಲೆಯ ಕಾರ್ಕಳ ಹಾಗೂ ಬಂಟ್ವಾಳ ತಾಲೂಕಿನಲ್ಲಿ ಕಾಣಿಸುತ್ತವೆ. ಶಿವಮೊಗ್ಗ, ಚಿಕ್ಕಮಗಳೂರು ಹಾಗೂ ಬೆಳಗಾವಿ ಜಿಲ್ಲೆಯಲ್ಲಿಯೂ ನೆಲೆಸಿದ್ದು. ಕೇರಳ ಮತ್ತು ಮಹಾರಾಷ್ಟ್ರ ರಾಜ್ಯದ ಕೆಲವು ಪ್ರದೇಶಗಳಲ್ಲಿ ಕಾಣ ಸಿಗುತ್ತವೆ. ಹೀಗಾಗಿ ಕುಣಬಿ ಸಮುದಾಯವು ದಕ್ಷಿಣ ಭಾರತದ ಪ್ರಮುಖ ಬುಡಕಟ್ಟು ಸಮುದಾಯವೆನಿಸಿಕೊಂಡಿದೆ. ಅವರು ಸಾಮಾಜಿಕವಾಗಿ ಹಿಂದುಳಿದವರಾಗಿ, ಶಿಕ್ಷಣ ಮತ್ತು ಆರ್ಥಿಕವಾಗಿ ಬಡವರಾಗಿ ಮತ್ತು ರಾಜಕೀಯದಲ್ಲಿ ಅಸಂಘಟಿತರಾಗಿ ತೋರುತ್ತಾರೆ. ಅವರನ್ನು ಉತ್ತರ ಕನ್ನಡ ಜಿಲ್ಲೆಯ ಅತ್ಯಂತ ದುರ್ಬಲ ಸಮುದಾಯ ಎಂದು ಗುರುತಿಸಲಾಗಿದೆ.

ಭಾರತದ ಬುಡಕಟ್ಟು ಪಂಗಡಗಳ ಬಗ್ಗೆ ವಿಶೇಷ ಅಧ್ಯಯನ ವರದಿಗಳು ಬಹುಮಟ್ಟಿಗೆ ಪರಿಶಿಷ್ಟ ಪಂಗಡಗಳಿಗೆ ಸೀಮಿತವಾಗಿವೆ ಅದಾಗ್ಯೂ ನಮ್ಮ ನಾಡಿನಲ್ಲಿ ಕುಣಬಿಗಳಂತೆ ಅನೇಕ ಬುಡಕಟ್ಟು ಸಮುದಾಯ ಹಾಗೂ ಹಾಲಕ್ಕಿ ಒಕ್ಕಲಿಗರು, ಡೊಂಬರು, ಲಂಬಾಣಿಗಳಂತಹ ಅನೇಕ ಅಲೆಮಾರಿ ಸಮುದಾಯದವರೂ ವಾಸವಾಗಿದ್ದರೂ ಇಂತಹ ಬುಡಕಟ್ಟು ಪಂಗಡ ಅಧ್ಯಯನ ನಾವು ನಿರ್ಲಕ್ಷಿಸಿದಷ್ಟು ವಿಸ್ತಾರ ಹರವು ಪಡೆದುಕೊಂಡಿದೆ. ಕುಣಬಿ ಸಮುದಾಯವು ಒಂದು ಬುಡಕಟ್ಟು ಪಂಗಡಕ್ಕೆ ಸೇರಿದ್ದು ಅವರ ಸಾಮಾಜಿಕ ಹಾಗೂ ಆರ್ಥಿಕ ಸ್ಥಾನಮಾನಗಳು

ಕರ್ನಾಟಕದ ಇತರ ಪಂಗಡಗಳಂತೆ ಕೆಳಮಟ್ಟದಲ್ಲಿವೆ. ಆದಾಗ್ಯೂ ಕರ್ನಾಟಕ ಸರಕಾರವು ಕುಣಬಿ ಸಮುದಾಯವನ್ನು ಪರಿಶಿಷ್ಟ ಪಂಗಡದ ಯಾದಿಯಲ್ಲಿ ಸೇರಿಸಿಲ್ಲ.

ಇನ್ನೊಂದು ಮಹತ್ವದ ಸಂಗತಿಯೆಂದರೆ ಇದುವರೆಗೆ ಕುಣಬಿ ಸಮುದಾಯದ ಬಗ್ಗೆ ಅಚ್ಚುಕಟ್ಟಾದ ಪ್ರಾಯೋಗಿಕ ಸಮೀಕ್ಷೆ ನಡೆದಿಲ್ಲ, ಹೀಗಾಗಿ ಕುಣಬಿ ಸಮುದಾಯದ ಜೀವನ ಮತ್ತು ಅವರ ಸಮಸ್ಯೆಗಳ ಬಗೆಗೆ ಸಮಗ್ರ ಪ್ರೌಢ ಪ್ರಬಂಧ ಇದುವರೆಗೂ ಲಭ್ಯವಾಗಿಲ್ಲ. ಆದರೂ ಅಲ್ಲಲ್ಲಿ ಕೆಲವು ಲೇಖನಗಳು, ವರದಿಗಳು ಪ್ರಾದೇಶಿಕ ದಿನಪತ್ರಿಕೆಯಲ್ಲಿ ಸಚಿತ್ರ ಲೇಖನಗಳು, ಜಿಲ್ಲಾ ಗೆಜೆಟೀಯರ್‌ನಲ್ಲಿ ಅಂಕಿಅಂಶ ಸಹಿತ ವರದಿ, ರಾಜ್ಯ ಪರಿಪತ್ರ ಸಮೀಕ್ಷೆಗಳು ಕುಣಬಿ ಸಮುದಾಯದ ಬಗ್ಗೆ ಇತಿಹಾಸ ತಜ್ಞರ ಸಂಶೋಧಕರ ಗಮನ ಸೆಳೆಯುವಲ್ಲಿ ಸಫಲವಾಗಿವೆ. ಈ ಪ್ರಬಂಧದಲ್ಲಿ ಮೊದಲಬಾರಿಗೆ ಅಂತಹ ಒಂದು ನಿರ್ಧಿಷ್ಟ ಅಧ್ಯಯನ ನಡೆದಿದೆ. ಕೆಲವೊಂದು ನಿಚ್ಚಳ ಸಂಗತಿ ಹಾಗೂ ಸಮಸ್ಯೆಗಳು ಕುಣಬಿ ಸಮುದಾಯದ ಅಧ್ಯಯನ ಸಮೀಕ್ಷೆ ಹಾಗೂ ಪ್ರೌಢ ಪ್ರಬಂಧದ ಆಯ್ಕೆಗೆ ಪ್ರೇರಕವಾಗಿದೆ.

ಅರಣ್ಯವಾಸಿ ಸಮುದಾಯಗಳಿಗೆ ಆತ್ಮವಿಶ್ವಾಸದಿಂದ ಬದುಕುವ ಮಾನವೀಯ ವಾತಾವರಣವನ್ನು ನಿರ್ಮಿಸುವ ಅಗತ್ಯವಿದೆ. ಪರಂಪರೆಯಿಂದ ಸಾಗುವಳಿ ಮಾಡಿಕೊಂಡು ಬಂದ ಅವರ ಭೂಮಿಯನ್ನು ಹಾಗೂ ಪರಂಪರೆಯಿಂದ ಅವರೆ ರಕ್ಷಿಸಿಕೊಂಡು ಬಂದ ಅವರ ಅರಣ್ಯವನ್ನು ಅವರಿಂದ ಬೇರ್ಪಡಿಸಬಾರದು. ಭೂಮಿ ಮತ್ತು ಅರಣ್ಯವೆಂಬ ಕುಣಬಿಯರ ಅಭಿವೃದ್ಧಿ ಮೂಲ ಸಂಗತಿಗಳನ್ನು ತೆಗೆದುಕೊಳ್ಳಬೇಕಾಗಿದೆ. ಅಂದರೆ ಅವರು ನಂಬಿ ಬಂದ ಬದುಕಿನ ಮೂಲಕವೇ ಅವರನ್ನು ಸದೃಢಗೊಳಿಸಬೇಕಾದ ಅಗತ್ಯವಿದೆ.

ಪಂಚ ವಾರ್ಷಿಕ ಯೋಜನೆಗಳ ಮೂಲಕ ನಾವು ಕೈಗೊಂಡ ದೊಡ್ಡ ದೊಡ್ಡ ಆಣೆಕಟ್ಟುಗಳ ನಿರ್ಮಾಣ, ವಿದ್ಯುತ್ ಯೋಜನೆಗಳು, ರಾಷ್ಟ್ರೀಯ ಉದ್ಯಾನಗಳು, ಸಂರಕ್ಷಿತ ಅರಣ್ಯ ಯೋಜನೆಗಳು ಮಾತ್ರ ನಮ್ಮ ಅಭಿವೃದ್ಧಿಯ ದ್ಯೋತಕವಾಗಿ ಇಂದು ಕಾಣುತ್ತಿವೆ. ಇಂಥ ದೊಡ್ಡ ಯೋಜನೆಗಳಿಗೆ ವಿನಿಯೋಗಿಸಿ ಉಳಿದ ಹಣವನ್ನು ಧನ ಸಹಾಯದ ಸ್ವರೂಪದಲ್ಲಿ ಬಡವರಿಗೆ, ಹಿಂದುಳಿದವರಿಗೆ, ದಲಿತರಿಗೆ, ಬುಡಕಟ್ಟುಗಳಿಗೆ ಹಂಚುವ ಮೂಲಕ ಸಾಮಾಜಿಕ ಮತ್ತು ಆರ್ಥಿಕ ನ್ಯಾಯವನ್ನು ನೀಡುವ ಸಾಂಪ್ರದಾಯಿಕ ಅಭಿವೃದ್ಧಿ ಚಿಂತನೆ ಸ್ವಾತಂತ್ರ್ಯ ನಂತರದ ನಮ್ಮ ಎಲ್ಲ ಸರಕಾರಗಳಲ್ಲಿಯೂ ಕಂಡುಬರುತ್ತಿದೆ, ಆದರೆ ದೊಡ್ಡ ಸಮುದಾಯಗಳ ಒಳಿತಿನ ಅಥವಾ ದೇಶದ ಹಿತದೃಷ್ಟಿಯ ಬೃಹತ್ ಯೋಜನೆಗಳನ್ನು ಜಾರಿಗೊಳಿಸುವ ಭರದಲ್ಲಿ ಸಣ್ಣ ಸಮುದಾಯಗಳ ಆತ್ಮಸ್ಥೈರ್ಯವನ್ನು ನಾಶಮಾಡುವ ಕೆಲಸವಾಗಬಾರದು, ಅಭಿವೃದ್ಧಿ ಎಂಬುದು ಏಕಮುಖವಾಗಬಾರದು.

ನಮ್ಮ ದೇಶದ ಅರಣ್ಯವಾಸಿ ಅಲೆಮಾರಿ ಮತ್ತು ಬುಡಕಟ್ಟು ಸಮುದಾಯಗಳನ್ನು ಕೇವಲ ದುಡಿಯುವವರು, ಕೂಲಿಕಾರರು ಅಥವಾ ಭಿಕ್ಷುಕರು ಎಂದು ಪರಿಗಣಿಸಲಾಯಿತೇ ಹೊರತು ಅವರು ಕೂಡಾ ಉತ್ಪಾದಕರು ಎಂಬ ದೃಷ್ಟಿಯಿಂದ ನೋಡಲೇ ಇಲ್ಲ. ಆಧುನಿಕ ಅಭಿವೃದ್ಧಿ ಪರಂಪರೆಯಲ್ಲಿ ಅವರು ಒಂದು 'ಹೊರೆ'ಯಾಗಿ ಪರಿಣಮಿಸಿದುದು ದುರಂತ. ನಮ್ಮ ಸ್ವಾತಂತ್ರ್ಯೋತ್ತರ ಆಡಳಿತ ಅರಣ್ಯವನ್ನು ಒಂದು ಉತ್ಪಾದನಾ ಕ್ಷೇತ್ರವೆಂದು ಪರಿಗಣಿಸಿತು. ಆದರೆ ಸಾವಿರಾರು ವರ್ಷಗಳಿಂದ ಆ ಅರಣ್ಯವನ್ನು ಕಾಪಾಡಿಕೊಂಡು ಬಂದಿದ್ದ ಅದರೊಳಗಿನ ಪರಂಪರಾಗತ ನಿವಾಸಿಗಳನ್ನು ಅರಣ್ಯಕ್ಕೆ ಮಾರಕವೆಂದು ಭಾವಿಸಿತಲ್ಲದೆ, ಅವರನ್ನು ಅರಣ್ಯದಿಂದ ಓಡಿಸುವ ಪ್ರಯತ್ನವನ್ನು ಮಾಡಲಾಯಿತು. ಆದರೆ ಅರಣ್ಯವನ್ನು ಮಾತ್ರ ಮುಖ್ಯವೆಂದು ಭಾವಿಸಿ ಏಕ ಕಾಲದಲ್ಲಿ ಅರಣ್ಯದ ಪಾಲಕರು, ಉತ್ಪಾದಕರೂ ಆಗಿದ್ದ ಗಿರಿಜನರನ್ನು ಕಡೆಗಣಿಸಿದ್ದೇ ಅರಣ್ಯ ನಾಶಕ್ಕೆ ಕಾರಣ. ನಮ್ಮ ಆಧುನಿಕ ವ್ಯವಸ್ಥೆಯ ಬ್ರಹ್ಮಾಂಡ ಭ್ರಷ್ಟತೆ ಅರಣ್ಯವನ್ನು ಬಲಿ ತೆಗೆದುಕೊಂಡಿತೇ ವಿನಹ ಅರಣ್ಯವಾಸಿಗಳು ಅದಕ್ಕೆ ಕಾರಣರಾಗಿರಲಿಲ್ಲ, ಇಂಥ ಅಧಿಕಾರಶಾಹಿ ನೀತಿಗಳಿಂದ ನಾವು ಕಳೆದುಕೊಂಡದ್ದು ಕೇವಲ ಅರಣ್ಯವನ್ನಲ್ಲ. ಆ ಅರಣ್ಯವನ್ನು ಕುರಿತಾದ ಒಂದು ಜ್ಞಾನ ಪರಂಪರೆಯನ್ನು ನಮ್ಮ ಪಶ್ಚಿಮ ಘಟ್ಟಗಳು ಮತ್ತು ಕರಾವಳಿಯ ಉದ್ದಕ್ಕೆ ಹಬ್ಬಿ ಹರಡಿದ್ದ ಆ ನಿಬಿಡಾರಣ್ಯದಲ್ಲಿ ಅದೆಷ್ಟು ಬಗೆಯ ಔಷಧಿ ಸಸ್ಯಗಳಿದ್ದವೋ, ಅದೆಷ್ಟು ಬಗೆಯ ಜೀವರಾಶಿಗಳಿದ್ದವೋ, ಆ ಇಡೀ ಜೀವಜಾಲದ ಅರಿವಿದ್ದ, ಅರಣ್ಯದ ವಿಜ್ಞಾನ ಗೊತ್ತಿದ್ದ ಗಿರಿಜನರನ್ನು ಸಕ್ರೀಯವಾಗಿ ಬಳಸಿಕೊಂಡಿದ್ದರೆ ಆ ಅರಣ್ಯವೂ ಇರುತ್ತಿತ್ತು, ಆ ಜ್ಞಾನ ಸಂಪತ್ತೂ ಇರುತ್ತಿತ್ತು. ಅಂತಹ ಪರಂಪರೆಯನ್ನು ಉಳಿಸಿಕೊಳ್ಳುವ ಪ್ರಯತ್ನ ಸಮುದಾಯಗಳಿಂದ ಆಗಬೇಕಾಗಿದೆ ಎಂಬುದೇ ಈ ಪ್ರಬಂಧದ ಆಶಯವಾಗಿದೆ.

ಇಂದಿಗೂ ಕುಣಬಿ ಸಮುದಾಯಗಳ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳಲ್ಲಿ ಯಾವ ಬದಲಾವಣೆಗಳಾಗಿಲ್ಲ. ಅಲ್ಪಸ್ವಲ್ಪವಾಗಿ ಅಕ್ಷರ ಕಲಿಯುವುದಕ್ಕೆ ಈಗಿನ ಮಕ್ಕಳ ಶಾಲೆಗೆ ಹೋಗುತ್ತಿವೆಯಾದರೂ ಮಧ್ಯದಲ್ಲಿಯೇ ಶಾಲೆ ಬಿಡುವ ಮಕ್ಕಳ ಪ್ರಮಾಣ ಕುಣಬಿ ಸಮುದಾಯಗಳಲ್ಲಿ ಹೆಚ್ಚಾಗಿದೆ. ರಾಜಕೀಯವಾಗಿ ಬೆಳೆಯಲು ಈ ಸಮುದಾಯಗಳಿಗೆ ಇನ್ನೂ ಎಷ್ಟು ಶತಮಾನಗಳು ಬೇಕಾಗುತ್ತದೋ ಯಾರಿಗೆ ಗೊತ್ತು? ಈ ಬಗೆಯ ಚಿಂತನೆ ಕುಣಬಿ ಸಮುದಾಯಕ್ಕೆ ಮಾಡಬೇಕಾದದ್ದು ಅಗತ್ಯ ಎಂದು ಈ ಪ್ರಬಂಧ ನಿರೂಪಿಸುತ್ತದೆ.

ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಇನ್ನೂ ಹೀನಾಯ ಸ್ಥಿತಿಯಲ್ಲಿರುವ ಇಂದಿಗೂ ಅವಮಾನಿತ ಬದುಕನ್ನೇ ನಡೆಸುತ್ತಿರುವ ಬುಡಕಟ್ಟುಗಳು ಇನ್ನಾದರೂ ಸಂಘಟನಾತ್ಮಕವಾಗಿ ವ್ಯವಸ್ಥೆಯ ವಿರುದ್ಧ ಧ್ವನಿ ತೆಗೆಯಬಲ್ಲವೆನೋ ಕಾದು ನೋಡಬೇಕಾಗಿದೆ.

**ಅಧ್ಯಯನದ ಫಲಿತಗಳು**

ನನ್ನ ಕ್ಷೇತ್ರ ಕಾರ್ಯದ ಅನುಭವ ಹಾಗೂ ಅವರೊಡನೆ ಇದ್ದ ದೀರ್ಘ ಒಡನಾಟದ ಹಿನ್ನಲೆಯಲ್ಲಿ ಈ ಅಧ್ಯಯನವು ಕುಣಬಿ ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ರಂಗದ ಸ್ಥಿತಿಗತಿಗಳ ಪ್ರಮುಖ ಅಂಶಗಳ ವಿವರಗಳನ್ನು ಈ ಮುಂದೆ ವಿವರಿಸಲಾಗಿದೆ.

ಈ ಅಧ್ಯಯನದ ಮೂಲಕ ಗೊತ್ತಾಗುವ ಸ್ಪಷ್ಟ ಸಂಗತಿಯೆಂದರೆ ಭಾರತದ ಅತ್ಯಂತ ವಿಶಿಷ್ಟವಾದ ಸಮುದಾಯಗಳಲ್ಲಿ ಒಂದಾದ ಕುಣಬಿ ಸಮುದಾಯವು ಪೋರ್ಚುಗೀಸರ ದಬ್ಬಾಳಿಕೆಯಿಂದ ೧೬ನೇ ಶತಮಾನದಲ್ಲಿ ಗೋವಾದಿಂದ ವಲಸೆ ಬಂದ ಸಮುದಾಯವೇ ಕುಣಬಿಯರು. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಸಮುದಾಯಗಳಲ್ಲಿ ಕುಣಬಿಗಳು ಅತ್ಯಂತ ಹಿಂದುಳಿದವರು. ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಕಾರವಾರ, ಅಂಕೋಲಾ, ಕುಮಟಾ, ಭಟ್ಕಳ, ಹೊನ್ನಾವರ, ಶಿರಸಿ, ಯಲ್ಲಾಪುರ, ಜೋಯಿಡಾ, ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಯ ಮಂಗಳೂರು, ಪುತ್ತೂರು, ಸುಳ್ಯ, ಉಡುಪಿ, ಕುಂದಾಪುರ, ಕಾರ್ಕಳ, ಕೊಡಗು, ಬೆಳಗಾವಿ, ಖಾನಾಪುರ, ಶಿವಮೊಗ್ಗ, ಸಾಗರ, ಹೊಸನಗರ, ತೀರ್ಥಹಳ್ಳಿ, ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ. ಎನ್.ಆರ್. ಪುರ, ಶೃಂಗೇರಿ ಮತ್ತು ಮೂಡಗೆರೆ ತಾಲೂಕುಗಳಲ್ಲಿ ಮಾತ್ರ ಕಂಡುಬರದೆ ಭಾರತದಾದ್ಯಂತ ಇಂದು ಕುಣಬಿಯರು ಮಹಾರಾಷ್ಟ್ರ, ಗೋವಾ, ಓರಿಸ್ಸಾ, ಕೇರಳ, ಗುಜರಾತ ಕಡೆಯಲ್ಲೂ ಹರಡಿರುವರು. ಅಲ್ಲಿಯ ಭಾಷೆ ಮತ್ತು ಪ್ರದೇಶಗಳಿಗೆ ಅನುಗುಣವಾಗಿ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಿಕೊಳ್ಳುತ್ತಿರುವರು. ಇಷ್ಟೆಲ್ಲಾ ಪ್ರದೇಶಗಳಲ್ಲಿ ವಾಸಿಸುತ್ತಿದ್ದರೂ ಬೇರೆ ಬೇರೆ ಸಮುದಾಯದವರೊಡನೆ ಹೋಲಿಸಿ ನೋಡಿದಾಗ ಕುಣಬಿಗಳು ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ನಿರುದ್ಯೋಗಿಗಳಾಗಿರುವುದು ಕಂಡು ಬರುತ್ತದೆ.

ಭಾರತದ ಅನೇಕ ಬುಡಕಟ್ಟು ಸಮುದಾಯದಂತೆ ಕುಣಬಿ ಜನರು ಕಾಡುಗಳಲ್ಲಿ, ಹಳ್ಳಿಗಳಲ್ಲಿ ವಾಸಿಸುತ್ತಾರೆ. ಅವರು ಆಯಾ ಕಾಡುಗಳಲ್ಲಿ ವಾಸಿಸುತ್ತಾರೆ. ಅವರು ಆಯಾ ಹಳ್ಳಿಗಳಲ್ಲಿ ತಮ್ಮದೇ ಆದ ವಸತಿ ಸಮೂಹ ಪ್ರತ್ಯೇಕವಾಗಿ ರಚಿಸಿಕೊಳ್ಳುತ್ತಾರೆ, ಇವರ ಮನೆಗಳು ಸಾದಾ ಹುಲ್ಲು ಗುಡಿಸಲುಗಳಾಗಿದ್ದು ದಯನೀಯ ಸ್ಥಿತಿಯಲ್ಲಿರುತ್ತವೆ. ಅವರ ಜೀವನ ಸ್ಥಿತಿಯು ಶೋಚನೀಯವಾಗಿದೆ. ಬಹುತೇಕ ಕುಣಬಿ ಕುಟುಂಬಗಳು ತೀರಾ ಕೆಳಮಟ್ಟದ ಮನೆಗಳನ್ನು ಕಟ್ಟಿಕೊಂಡು ದುರ್ಬರ ಜೀವನ ಸಾಗಿಸುತ್ತಾರೆ.

ಪೂರ್ವ ಕಾಲದಲ್ಲಿ ಕುಣಬಿ ಸಮುದಾಯದವರು ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿದ್ದರಿಂದ ಆಹಾರದಲ್ಲಿ ಕಾಳುಕಡಿ, ಕಾಯಿಪಲ್ಲೆ ಬಳಸುತ್ತಿದ್ದಿಲ್ಲ. ಕೆಲವು ಸಾಂಪ್ರದಾಯಿಕ ನಂಬಿಕೆಯಿಂದ ಆಹಾರ ಪದ್ಧತಿಯಲ್ಲಿಯೂ ಕೆಲವು ಪ್ರತಿಬಂಧಗಳಿದ್ದವು. ಕುಣಬಿ ಸಮುದಾಯದವರು ಮೂಲತಃ ಮಾಂಸಾಹಾರಿಗಳಾಗಿದ್ದರೂ ಆಶ್ಚರ್ಯಕರ ಸಂಗತಿಯೆಂದರೆ, ಮನೆಯ ಸಾಕು ಪ್ರಾಣಿಗಳ ಮಾಂಸ ತಿನ್ನುವುದನ್ನು ಒಪ್ಪುವುದಿಲ್ಲ. ಕಾಡು ಪ್ರಾಣಿಗಳನ್ನು ಆಹಾರಕ್ಕಾಗಿ ಬೇಟೆಯಾಡಿ ಆ ಮಾಂಸವನ್ನು ಸೇವಿಸುವರು. ಅದನ್ನೇ ಪವಿತ್ರ ನೈವೇದ್ಯವೆಂದು ತಿಳಿಯುತ್ತಾರೆ, ಆದರೂ ಕೆಲವು ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುವುದನ್ನು ನಿಷೇಧಿಸಿದ್ದಾರೆ.

ಕುಣಬಿ ಸಮುದಾಯದವರಲ್ಲಿ ಅನಾರೋಗ್ಯವು ಒಂದು ದೊಡ್ಡ ಸಮಸ್ಯೆಯಾಗಿದೆ. ಶುದ್ಧ ನೀರು, ಅಪೌಷ್ಠಿಕ ಆಹಾರ ಸೇವನೆಯಿಂದ ಭಯಂಕರ ಸುಧೀರ್ಘ ರೋಗಗಳಿಗೆ ತುತ್ತಾಗುತ್ತಾರೆ. ಇತರ ಜನರಿಗಿಂತ ಕುಣಬಿಗಳೇ ಹೆಚ್ಚಾಗಿ ಕ್ಷಯ ರೋಗಕ್ಕೆ ತುತ್ತಾಗುವ ಸಂಭವ ಹೆಚ್ಚು. ಇದಕ್ಕೆ ಕುಣಬಿಗಳ ಅನಾರೋಗ್ಯಕರ ಪರಿಸರವೇ ಕಾರಣ.

ಈಗ ಬಹಳ ಜನರು (ಕುಣಬಿಗಳು) ತಮ್ಮ ರೋಗಶಮನಕ್ಕಾಗಿ ಆಧುನಿಕ ವೈದ್ಯರನ್ನು ಹಾಗೂ ಧಾರ್ಮಿಕ ಮಂತ್ರವಾದಿಗಳನ್ನು ಏಕಕಾಲಕ್ಕೆ ಸಂಪರ್ಕಿಸುವುದು ಆಶ್ಚರ್ಯಕರ ಸಂಗತಿ, ಅವರು ತಮ್ಮ ರೋಗ-ರುಜಿನಗಳಿಗೆ ಹೆಚ್ಚಾಗಿ ಪವಾಡಶಕ್ತಿ ಹಾಗೂ ದುಷ್ಟ ಶಕ್ತಿಗಳೇ ಕಾರಣವೆಂದು ಬಲವಾಗಿ ನಂಬಿರುವರು. ಒಂದು ಮಹತ್ವದ ಸಂಗತಿಯೆಂದರೆ, ಬಹುಸಂಖ್ಯಾತ ಕುಣಬಿ ಜನರು ಮೂಢನಂಬಿಕೆಯುಳ್ಳವರಾಗಿದ್ದರೂ, ಅವರೂ ಆಧುನಿಕ ವೈದ್ಯರನ್ನು ಭೇಟಿಯಾಗುತ್ತಿರುವದು ಒಳ್ಳೆಯ ಲಕ್ಷಣವೆನಿಸಿದೆ.

ಶೈಕ್ಷಣಿಕ ವಿಷಯದಲ್ಲಿ ಕುಣಬಿ ಸಮುದಾಯ ಬಹಳ ಹಿಂದುಳಿದವರಾಗಿದ್ದಾರೆ. ಆದರೆ ಕುಣಬಿ ಯುವ ಸಮುದಾಯದ ಶಿಕ್ಷಣ ಮಟ್ಟವನ್ನು ಅವರ ಹಿರಿಯರಿಗೆ, ಪಾಲಕರಿಗೆ ಹೋಲಿಸಿದರೆ ಸುಧಾರಣೆ ಕಂಡುಬರುತ್ತದೆ. ಒಂದು ಮಹತ್ವದ ಬೆಳವಣಿಗೆಯೆಂದರೆ, ಕುಣಬಿ ಸಮುದಾಯದ ಅನೇಕ ಪಾಲಕರು ತಮ್ಮ ಮಕ್ಕಳಿಗೆ ಕನಿಷ್ಠ ಹೈಸ್ಕೂಲ ಮಟ್ಟದ ಶಿಕ್ಷಣ ನೀಡ ಬಯಸುವರು.

ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಿಂದೆ ಬ್ರಿಟಿಷ್ ಸರಕಾರವು ಪ್ರತಿ ಸಮುದಾಯದೊಳಗೆ ಬಾಲಕ, ಬಾಲಕಿಯರ ಶಾಲೆಗಳನ್ನು ತೆರೆದಿದ್ದಿತು. ಸ್ವಾತಂತ್ರ್ಯಾ ನಂತರ ಆ ಶಾಲೆಗಳು ಸ್ಥಳೀಯ ಸರಕಾರಗಳ ಹಿಡಿತಕ್ಕೆ ಬಂದವು. ಜೊತೆಗೆ ಇತರೆ ಸಂಘ ಸಂಸ್ಥೆಗಳು ಬುಡಕಟ್ಟು ಪ್ರದೇಶಗಳಲ್ಲಿ ಬಂದು ತಮ್ಮ ಖಾಸಗಿ ಶಾಲೆಗಳನ್ನು ಪ್ರಾರಂಭಿಸಿವೆ. ಆದರೂ ಬುಡಕಟ್ಟು ಪ್ರದೇಶದಲ್ಲಿ ಜನರ ಸಾಕ್ಷರತಾ ಮಟ್ಟ ನಿರೀಕ್ಷಿತ ಮಟ್ಟ ತಲುಪಲು ಸಾಧ್ಯವಾಗಿಲ್ಲ. ಇಂದಿಗೂ ಸರಕಾರ ಕಡ್ಡಾಯ

ಶಿಕ್ಷಣ, ಸರ್ವ ಶಿಕ್ಷಣ ಅಭಿಯಾನ, ಬಿಸಿಯೂಟ ಮುಂತಾದ ಕಾರ್ಯಕ್ರಮಗಳನ್ನು ಹಾಕಿಕೊಂಡು ಶಾಲೆಗೆ ಮಕ್ಕಳು ಹಾಜರಾಗುವಂತೆ ಮಕ್ಕಳು ಹಾಗೂ ಪಾಲಕರಿಗೆ ನಾನಾ ಆಕರ್ಷಣೆಗಳನ್ನು ಒಡ್ಡುತ್ತಿದೆ. ರಾಜ್ಯದ ಒಟ್ಟಾರೆ ಸಾಕ್ಷರತೆ ಪ್ರಮಾಣಕ್ಕಿಂತ ಕುಣಬಿಯರ ಸಾಕ್ಷರತಾ ಪ್ರಮಾಣ ಗಣನೀಯವಾಗಿ ಇಳಿಮುಖವಾಗಿದೆ. ಆಶ್ಚರ್ಯವರೆಂದರೆ ಪರಿಶಿಷ್ಟ ಜಾತಿಯವರಿಗಿಂತಲೂ ಕಡಿಮೆ ಇರುವುದು ಶೋಚನಿಯವೆನಿಸುತ್ತದೆ. ಸ್ತ್ರೀಯರ ಸಾಕ್ಷರತಾ ಪ್ರಮಾಣವಂತೂ ಹೇಳತೀರದು. ಆದರೂ ಆ ಯೋಜನೆಗಳು ಬುಡಕಟ್ಟುಗಳನ್ನು ನಿರೀಕ್ಷಿತ ಮಟ್ಟದಲ್ಲಿ ಸಾಕ್ಷರರನ್ನಾಗಿಸುವಲ್ಲಿ ಸೋತಿವೆ.

ಕುಣಬಿ ಸಮುದಾಯಕ ಸಾಮಾನ್ಯ ಉಡುಪೆಂದರೆ ಸೊಂಟದ ಸುತ್ತಲು ಸುತ್ತಿಕೊಳ್ಳುವ ಧೋತರ, ಹೆಣ್ಣು ಮಕ್ಕಳು "ಜಂಟೆ" ಮಾದರಿಯ ಸೀರೆ ಉಡುವರು. ಇತ್ತೀಚೆಗೆ ಅವರಲ್ಲೂ ಸಾಕಷ್ಟು ಜನರು ಸಾಂಪ್ರದಾಯಿಕ ಉಡುಪನ್ನು ಬಿಟ್ಟು ಆಧುನಿಕ ಉಡುಗೆ-ತೊಡುಗೆಗಳನ್ನು ಧರಿಸುತ್ತಾರೆ. ಅವರೂ ಕೂಡ ಶಹರದ ಸಂಪರ್ಕಕ್ಕೆ ಹಾಗೂ ಇತರ ಸಮುದಾಯದ ಜನರ ಸಂಪರ್ಕಕ್ಕೆ ಬಂದ ನಂತರ ಸೌಂದರ್ಯ ಪ್ರಸಾಧನ ಸಾಮಗ್ರಿಗಳನ್ನು ಬಳಸುತ್ತಿರುವುದು ಕಂಡುಬಂದಿದೆ.

ಕುಣಬಿ ಸಮುದಾಯಗಳು ಪಿತೃಪ್ರಧಾನ ಕುಟುಂಬಗಳಾಗಿದ್ದು, ಮನೆಯ ಹಿರಿಯನೇ ಯಜಮಾನ. ಇಂತಹ ಸುಸಂಘಟಿತ 'ಕುಟುಂಬಗಳು' ಈಗ ಮಾಯವಾಗತೊಡಗಿದ್ದು ಭಾವನಾತ್ಮ ಸಂಬಂಧಗಳೂ ಕಳಿಚಿಕೊಳ್ಳುತ್ತಿವೆ. ಕುಣಬಿ ಕುಟುಂಬಗಳಲ್ಲಿ ಅವರವರ ವಯಸ್ಸು ಹಾಗೂ ಲಿಂಗಗಳಿಗನುಗುಣವಾಗಿ ಕೆಲಸಕಾರ್ಯ ಹಂಚಿಕೆಯಾಗುತ್ತದೆ. ಸಾಮಾನ್ಯವಾಗಿ ಪುರುಷರು ಹೊರಗಡೆಯ ಕೆಲಸಗಳನ್ನು ಮಾಡುತ್ತಿದ್ದರೆ ಸ್ತ್ರೀಯರು ಹೊರಗಡೆ ಹಾಗೂ ಗೃಹಕೃತ್ಯಗಳನ್ನು ನೋಡಿಕೊಳ್ಳುತ್ತಿದ್ದು, ಅವಿವಾಹಿತ ಹುಡುಗಿಯರು ಸಹಾಯ ಮಾಡುತ್ತಾರೆ. ಗಂಡು ಮಕ್ಕಳು ಪಾಲಕರಿಗೆ ಹೊಲ-ಗದ್ದೆಗಳಲ್ಲಿ, ಬೇಟೆಯಾಡುವುದರಲ್ಲಿ ಹಾಗೂ ದಿನನಿತ್ಯದ ಕೆಲಸಗಳಲ್ಲಿ ಸಹಾಯ ಮಾಡುತ್ತಿದ್ದಾರೆ.

ಕುಣಬಿ ಸಮುದಾಯದವರು ತಮ್ಮ ಸಂಗಾತಿಯ ಆಯ್ಕೆಯಲ್ಲಿ ವಿವಿಧ ವಿವಾಹ ಪದ್ಧತಿಗಳನ್ನು ಅನುಸರಿಸುವರು. ಹಿರಿಯರು ಆರಿಸಿದ ವಧು/ವರ, ಪರಸ್ಪರ ವಿನಿಮಯ, ವಧು/ವರ ಪರೀಕ್ಷೆ ಹಾಗೂ ವಿವಿಧ ಹಿಂದೂ ಸಂಪ್ರದಾಯ ಪದ್ಧತಿಯಲ್ಲಿ ನಡೆಯುತ್ತದೆ.

ಆದಾಗ್ಯೂ ಕುಣಬಿಗಳ ವಿವಾಹ ಪದ್ಧತಿ ಕಾಲಕಾಲಕ್ಕೆ ಬದಲಾವಣೆಯಾಗುತ್ತಲೇ ಇದೆ. ಮೂಲ ಸಂಪ್ರದಾಯದಂತೆ ಉಪಪಂಗಡಗಳಲ್ಲಿ ಸ್ವಗೋತ್ರ, ಪರಗೋತ್ರ, ಸೋದರಿ ಸಂಬಂಧಿ

ವಿವಾಹ ಪದ್ಧತಿ ಜಾರಿಯಲ್ಲಿದ್ದರೂ, ಮೂಲ ವಿಧಿವಿಧಾನಗಳು ಕೆಲವೆಡೆ ಉಳಿದಿದ್ದರೂ, ನಾಗರಿಕ ಸಮಾಜ ಹಾಗೂ ಹಿಂದೂ ಸಾಂಪ್ರದಾಯಿಕ ಪ್ರಭಾವದಿಂದ ಆಧುನಿಕತೆಗೆ ನಿಧಾನವಾಗಿ ಸಾಗುತ್ತಿದೆ.

ಈಗ ಕುಣಬಿಗಳು ಮದುವೆಯ ವಿಧಿವಿಧಾನಗಳಲ್ಲಿ ಬ್ರಾಹ್ಮಣ ಸಂಪ್ರದಾಯವನ್ನು ಪಾಲಿಸುತ್ತಿದ್ದು, ಬ್ರಾಹ್ಮಣ ಪುರೋಹಿತರನ್ನು ಆಮಂತ್ರಿಸುತ್ತಾರೆ. ವಧುವನ್ನು ಗಂಡನ ಮನೆಗೆ ಕಳಿಸುವ ಸಂದರ್ಭದಲ್ಲಿ ಕುಣಬಿಗಳ ವಧು ಪಕ್ಷದವರು ಸಾಂಪ್ರದಾಯಿಕ ಶೋಕ ಗೀತೆಯನ್ನು ಹಾಡಿ ಬೀಳ್ಕೊಡುವರು. ಇದೇ ರೀತಿ ಅಂಡಮಾನ್ ನಡುಗಡ್ಡೆ ಪ್ರದೇಶದಲ್ಲಿ ಆದಿವಾಸಿಗಳು ಶೋಕಗೀತೆ ಹಾಡಿ ವಧುವನ್ನು ಬೀಳ್ಕೊಡುವರೆಂದು ರ್‍ಯಾಡ್‌ಕ್ಲಿಪ್ ಬ್ರೌನ್ ತಿಳಿಸುತ್ತಾರೆ.

ಭಾರತದ ಅನೇಕ ಬುಡಕಟ್ಟು ಸಮುದಾಯಗಳಂತೆ ಕುಣಬಿ ಸಮುದಾಯದವರು ಕೂಡಾ ಒಂದು ಧರ್ಮವನ್ನು ಪಾಲಿಸುತ್ತಾರೆ. ಇದು ಸರ್ವಚೇತನ ಸ್ವರೂಪಿಯಾಗಿದೆ. ಕುಣಬಿಗಳು ತಮ್ಮ ಜೀವನವು ಅಗೋಚರ, ಪವಾಡ ಶಕ್ತಿ ಹಾಗೂ ಆಧ್ಯಾತ್ಮಿಕ ಮಂತ್ರ ಶಕ್ತಿಯಿಂದ ಮುನ್ನಡೆಯುವುದೆಂದು ನಂಬುವರು. ಈ ಅಸಾಧಾರಣ ಶಕ್ತಿಯು ತಮ್ಮ ಮಳೆ-ಬೆಳೆ, ಅಡುಗೆಮನೆ-ಒಲೆ, ಬೇಟೆಯಾಟ, ಬೀಜ ಬಿತ್ತನೆ, ಅರಣ್ಯ, ಭೂಮಿ, ಪೂರ್ವಿಕರ ವಾಸಸ್ಥಾನಗಳಲ್ಲಿ ಅಡಗಿಕೊಂಡು ಜೀವನ ಮಾರ್ಗದರ್ಶನ ನೀಡುವುದೆಂದು ನಂಬುತ್ತಾರೆ.

ಕುಣಬಿಗಳು ಅನೇಕ ದೇವ-ದೇವತೆಗಳನ್ನು, ಪವಾಡ ಪುರುಷರನ್ನು ಹಾಗೂ ಭೂತ-ಮಾಂತ್ರಿಕ-ಶಕ್ತಿಗಳನ್ನು ಪೂಜಿಸುವರು. ಅನೇಕ ಸ್ಥಾನಿಕ ದೇವರನ್ನು ಹಾಗೂ ಹಿಂದೂ ದೇವತೆಗಳನ್ನು ಆರಾಧಿಸುವರು. ಕುಣಬಿ ಜನರು ಸರ್ವಚೇತನ ಶಕ್ತಿಯಲ್ಲಿ ನಂಬಿಕೆಯೊಂದಿಗೆ ಹಿಂದೂ ದೇವತೆಗಳನ್ನು ಆರಾಧಿಸುವರು.

ಕುಣಬಿ ಸಮುದಾಯದ ಸಂಪ್ರದಾಯದಲ್ಲಿ ದೇವ-ದೇವತೆಗಳ ತಾರತಮ್ಯ ಚಿತ್ರವನ್ನು ಈ ರೀತಿ ಕೊಡಬಹುದು. ಅವರಿಗೆ ಗೋವಾ ಪ್ರದೇಶದ ಆದಿ ದೇವತೆ 'ದುರ್ಗಾ' ಸರ್ವಮಾನ್ಯ ಪ್ರಥಮ ಸ್ಥಾನದಲ್ಲಿ ವಿರಾಜಿಸುತ್ತಾಳೆ. ಆನಂತರ ಗೋವಾ ಜನತೆಯ 'ಮಲ್ಲಿಕಾರ್ಜುನದೇವ' ಗುರಿಕಾರರ ಮನೆದೈವ, ಸ್ಥಳೀಯ ದೇವರು ಹೀಗೆ ದ್ವಿತೀಯ, ತೃತೀಯ, ಚತುರ್ಥ ಸ್ಥಾನದಲ್ಲಿ ನಿಲ್ಲುತ್ತಾರೆ. ಅವರ ಸ್ಥಾನ ಕ್ರಮಾಂಕದೊಡನೆ ಪವಿತ್ರ ಸ್ಥಳಗಳು ಪೂಜಿಸಲ್ಪಡುತ್ತವೆ. ಆನಂತರ ಪುರಾಣ-ಪುಣ್ಯ ಕಥೆಗಳಲ್ಲಿ ವರ್ಣಿತವಾಗಿರುವ ರಾಮ, ಕೃಷ್ಣ, ಕಾಳಿ, ಲಕ್ಷ್ಮೀ ಹಾಗೂ ಸ್ಥಳೀಯ ಶಕ್ತಿ ದೇವತೆಗಳು ಸ್ಥಾನ ಪಡೆಯುವರು.

ಕುಣಬಿಗಳು ವೃಕ್ಷಪೂಜೆ ಕೂಡಾ ಕೈಗೊಳ್ಳುತ್ತಾರೆ. ನಮ್ಮ ಶೋಧನೆಯಂತೆ ತುಳಸಿ ಪೂಜೆ ಹಾಗೂ ಮನೆಯಂಗಳದಲ್ಲಿ ತುಳಸಿಕಟ್ಟೆ ಕಾಣುವುದು. ಕುಣಬಿಗಳು ಸಸ್ಯಾರಾಧನೆಯೊಂದಿಗೆ 'ಪ್ರಾಣಿ ಪೂಜೆ'ಯನ್ನು ಪವಿತ್ರ ಕರ್ತವ್ಯವನ್ನಾಗಿ ಪರಿಗಣಿಸುವರು.

ಕುಣಬಿ ಸಮುದಾಯದಲ್ಲಿ 'ಪೂರ್ವಿಕರ ಪೂಜೆ' ಒಂದು ಮಹತ್ವದ ಆಚರಣೆಯಾಗಿದೆ. ವರ್ಷಕ್ಕೊಮ್ಮೆ ಅಥವಾ ಎರಡು ವರ್ಷಗಳಿಗೊಮ್ಮೆ ಹಿರಿಯರ ಆತ್ಮವನ್ನು ಆಹ್ವಾನಿಸಿ ಪೂಜೆ-ನೈವೇದ್ಯ ಅರ್ಪಿಸುವರು. ಇದಕ್ಕೆ ವಾರ್ಷಿಕ ಪುಣ್ಯ ತಿಥಿ ಎಂದು ಕರೆಯುತ್ತಾರೆ.

ಮಂತ್ರ-ಮಾಟಗಳು ಕುಣಬಿ ಸಮುದಾಯದ ಧರ್ಮಾಚರಣೆಯ ಮಹತ್ವದ ಅಂಗಗಳಾಗಿವೆ. ಈ ಅಧ್ಯಯನ ತಿಳಿಸುವಂತೆ ಬಹು ಸಂಖ್ಯಾತ ಕುಣಬಿಗಳು ಧಾರ್ಮಿಕ ಮನೋಭಾವ, ಮಾಟ-ಮಂತ್ರಗಳಲ್ಲಿ ನಂಬಿಕೆ ಉಳ್ಳವರಾಗಿದ್ದು, ತಮ್ಮ ಮಕ್ಕಳು ಧಾರ್ಮಿಕ ಚಟುವಟಿಕೆಗಳಲ್ಲಿ, ಧಾರ್ಮಿಕ ವಿಧಿ-ವಿಧಾನಗಳಲ್ಲಿ ನಂಬಿಕೆ ಇಡಬೇಕಾಗಿ ಬಯಸುತ್ತಾರೆ. ಆದರೆ ಕುಣಬಿ ಸಮುದಾಯವು ಕಡಿಮೆ ಧಾರ್ಮಿಕ ಮನೋಭಾವ ಹೊಂದಿದೆ.

ಕುಣಬಿ ಸಮುದಾಯದಲ್ಲಿ ಕುಲದೇವತಾ ಪದ್ಧತಿಯು ವಿಶೇಷತೆ ಪಡೆದಿದೆ. ಈ ಕುಲದೇವತೆಗಳಲ್ಲಿ ವೃಕ್ಷ ದೇವತೆ, ಪ್ರಾಣಿ ದೇವತೆ, ವಸ್ತು ದೇವತೆ ಹಾಗೂ ಸ್ಥಳೀಯ ದೈವಗಳು ಸೇರಿರುತ್ತವೆ. ಕುಣಬಿ ಮದುವೆಗಳಲ್ಲಿ ಕೆಲವು ಪ್ರಾಣಿ ಚಿತ್ರಗಳನ್ನು ಗೌರವದಿಂದ ಪೂಜಿಸುತ್ತಾರೆ. ಕೆಲವೊಂದು ಪ್ರಕಾರದ ಹಾವುಗಳನ್ನು ಮತ್ತು ಪಕ್ಷಿಗಳನ್ನು ಕೊಲ್ಲುವದು ಅಥವಾ ನೋಯಿಸುವುದು ಅಪರಾಧವೆಂದು ಪರಿಗಣಿಸಲಾಗಿದೆ. ಹೋಳಿ ಉತ್ಸವದ ಸಂದರ್ಭದಲ್ಲಿ ಮಾತ್ರ ಮೊಲವನ್ನು ಬೇಟೆಯಾಡಿ ಕುಲಪ್ರಸಾದವೆಂದು ಸ್ವೀಕರಿಸುತ್ತಾರೆ. ಈಗೀಗ ಈ ಪದ್ಧತಿಯೇ ಮಾಯವಾಗತೊಡಗಿದೆ.

ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗಾಗಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ವಿಶೇಷ ಅನುದಾನಗಳನ್ನು ಬಿಡುಗಡೆ ಮಾಡುತ್ತಿದೆ. ಆದರೆ ವಿಶೇಷ ಪ್ಯಾಕೇಜ್‌ಗಳು ಬುಡಕಟ್ಟು ಸಮುದಾಯಗಳಿಗೆ ಸಿಗದೇ ಹೋಗುತ್ತಿದೆ. ಸಾಮಾನ್ಯವಾಗಿ ಅವುಗಳಲ್ಲಿ ಕೆಲವನ್ನು ಮುಖ್ಯವಾಹಿನಿಯಲ್ಲಿರುವ ಪರಿಶಿಷ್ಟ ಜಾತಿ-ಪರಿಶಿಷ್ಟ ಪಂಗಡಗಳು ಪಡೆಯುತ್ತಿವೆ. ಬಹುತೇಕ ಅನುದಾನಗಳು ಎಷ್ಟೋ ಸಾರಿ ಸದುಪಯೋಗಗೊಳ್ಳುವುದೇ ಇಲ್ಲ.

ಕುಣಬಿ ಸಮುದಾಯಗಳಿಗೆ ಮೂಲಭೂತ ಸೌಲಭ್ಯಗಳಾದ ನೀರು, ಚರಂಡಿ, ಆಸ್ಪತ್ರೆ, ಶೌಚಾಲಯಗಳ ಕೊರತೆ ಅಧಿಕವಾಗಿದೆ. ಆದರೆ ಕುಣಬಿಯರ ಜನಸಂಖ್ಯೆ ಮಾತ್ರ ವರ್ಷದಿಂದ ವರ್ಷಕ್ಕೆ ಬೆಳೆಯುತ್ತಲೇ ಇದೆ. ಜನಸಂಖ್ಯೆಗೆ ಸಮಾನ ಅನುಪಾತದಲ್ಲಿ ಸೌಲಭ್ಯಗಳು ದೊರೆಯುತ್ತಿಲ್ಲ. ನಿರ್ಮಲ ಕರ್ನಾಟಕ ಯೋಜನೆಯಡಿ ವೈಯಕ್ತಿಕ ಶೌಚಾಲಯಗಳನ್ನು ನೀಡಲಾಗಿದೆಯಾದರೂ ಅವು ಎಲ್ಲಾ ಸಮುದಾಯಗಳಿಗೆ ದೊರೆಯಲು ಸಾಧ್ಯವಾಗಿಲ್ಲ, ಅಕಸ್ಮಾತ ಅವುಗಳನ್ನು ನಿರ್ಮಿಸಿದರೂ ಅವುಗಳನ್ನು ಸಮರ್ಪಕವಾಗಿ ನಿರ್ಮಿಸಿರುವದಿಲ್ಲ. ಹೀಗಾಗಿ ಸರಿಯಾಗಿ ವಾಸಕ್ಕೆ ಯೋಗ್ಯವಿರದ ಮನೆಗಳಲ್ಲಿ ವಾಸಿಸುತ್ತಿರುವವರು ನಿರ್ಮಲ ಕರ್ನಾಟಕ ಯೋಜನೆಯಡಿಯಲ್ಲಿ ದೊರೆತ ಶೌಚಾಲಯಗಳನ್ನು ಅಡುಗೆ ಮಾಡುವ ಅಡುಗೆ

ಮನೆಯಾಗಿಯೂ, ಸ್ನಾನದ ಕೋಣೆಯಾಗಿಯೂ ಇಲ್ಲವೇ ಉರುವಲು ಸೌದೆ, ಕುಳ್ಳುಗಳನ್ನು ಇರಿಸುವ ಸ್ಥಳವಾಗಿಯೂ ಬಳಸಿಕೊಳ್ಳುತ್ತಿರುವುದು ಕಂಡು ಬರುತ್ತದೆ. ಸಾಮೂಹಿಕ ಶೌಚಾಲಯಗಳನ್ನು ಬುಡಕಟ್ಟು ಸಮುದಾಯಗಳಲ್ಲಿ ಕಾಣಬಹುದಾದರೂ ಅವುಗಳ ಬಳಕೆಯು ಸಮರ್ಪಕವಾಗಿ ಆಗುತ್ತಿಲ್ಲ. ಮುಖ್ಯವಾಗಿ ಸಾಮೂಹಿಕ ಶೌಚಾಲಯಗಳು ಸ್ವಚ್ಛತೆಯ ಕೊರತೆಯನ್ನು ಅನುಭವಿಸುತ್ತಿವೆ.

ಬ್ರಿಟಿಷರು ಕುಣಬಿಗಳ ಕೃಷಿ ಚಟುವಟಿಕೆಗಾಗಿ ಕೆಲವು ಕಡೆ ಭೂಮಿಯನ್ನು ಹಂಚಿದರು, ಆದರೆ ಸ್ವಾತಂತ್ರ್ಯ ನಂತರದ ಸ್ಥಳೀಯ ಸರಕಾರಗಳು ಕುಣಬಿ ಸಮುದಾಯಗಳಿಗೆ ಕೃಷಿ ಭೂಮಿ ನೀಡಿಲ್ಲ. ಇರುವ ಕೃಷಿ ಭೂಮಿಗೆ ನೀರಾವರಿ ಮಾಡಬಹುದಾದರೂ ಅಂಥ (ಗಂಗಾಕಲ್ಯಾಣ ಯೋಜನೆ) ಯಾವ ಯೋಜನೆಗಳನ್ನು ಕುಣಬಿ ಸಮುದಾಯಗಳು ಪಡೆಯಲು ಸಾಧ್ಯವಾಗಿಲ್ಲವಾಗಿರುವುದನ್ನು ಕಾಣಬಹುದಾಗಿದೆ.

ಕುಣಬಿ ಸಮುದಾಯಗಳನ್ನು ಪ್ರತ್ಯೇಕವಾಗಿ ಗಣತಿ ಮಾಡಿಲ್ಲದಿರುವುದು ತಿಳಿದುಬರುತ್ತದೆ. ಕುಣಬಿ ಸಮುದಾಯದಲ್ಲಿ ಎಲ್ಲ ಹಬ್ಬಗಳಿಗಿಂತ ಹೋಳಿ ಹಬ್ಬವು ವಿಶೇಷ ಮಹತ್ವ ಹೊಂದಿದ್ದು 'ಗೋವಾ ಅಧಿದೇವತೆ' ಯನ್ನು ಶ್ರದ್ಧಾ-ಭಕ್ತಿಗಳಿಂದ ಪೂಜಿಸುತ್ತಾರೆ. ಕೆಲವೊಮ್ಮೆ ಕುಲದೇವತೆಯನ್ನು ಕೆಲವೆಡೆಗೆ ಗೋವಾ ಮಲ್ಲಿಕಾರ್ಜುನ ಸ್ವಾಮಿಯನ್ನು ಪೂಜಿಸುತ್ತಾರೆ. ಹೋಳಿ ಸಂದರ್ಭದಲ್ಲಿ ಕುಣಬಿಗಳು ತಮ್ಮ ಸಾಂಪ್ರದಾಯಿಕ ಉಡುಗೆ-ತೊಡುಗೆ ಧರಿಸುತ್ತಾರೆ. ನೃತ್ಯ ಸಂಗೀತ ಉತ್ಸವದಲ್ಲಿ ಹರ್ಷದಿಂದ ಪಾಲ್ಗೊಳ್ಳುವರು, ಕುಣಬಿ ಶೈಲಿಯ ಜಾನಪದ ನೃತ್ಯ, ಹಾಡುಗಳು ವಿಶಿಷ್ಟ ವಿಭಿನ್ನತೆಯಿಂದ ಕೂಡಿರುತ್ತವೆ. ಈ ಸಮುದಾಯದ ಜಾನಪದ ಕಥೆ, ಹಾಡು, ನೃತ್ಯಗಳು, ರಾಮಾಯಣ, ಮಹಾಭಾರತದ ದೃಷ್ಟಾಂತ ಕಥೆಗಳ ಆಧರಿತವಾಗಿರುತ್ತವೆ. ಈ ಸಾಂಪ್ರದಾಯಿಕ ಉಡುಗೆ ಧರಿಸಿ ಜಾನಪದ ಹಾಡು-ನೃತ್ಯ ಹೇಳುತ್ತ ಊರಿಂದೂರಿಗೆ ಹೋಗುತ್ತಾರೆ, ಈ ಆಚರಣೆ ಕುಣಬಿ ಸಮುದಾಯ ಮೂಲತಃ ಅಲೆಮಾರಿ ಸಮುದಾಯವೆಂದು ನೆನಪಿಸುತ್ತದೆ.

ಆರ್ಥಿಕವಾಗಿ ಕುಣಬಿ ಸಮುದಾಯವು ಬಹಳ ಹಿಂದುಳಿದಿದೆ. ಬಹಳ ದಿನಗಳಿಂದ ಅವರು ಅಡವಿಯಿಂದ ಅಡವಿಗೆ ಅಲೆದಾಡುತ್ತ, 'ಸ್ಥಳಾಂತರ ಕೃಷಿ' (Shift Cultivation) ಮಾಡುತ್ತ ಸ್ಥಳಾಂತರ ಜೀವನ ನಿರ್ವಹಣೆ ಮಾಡುತ್ತಿದ್ದರು. ಈಗ ಅವರು ಒಂದು ಪ್ರದೇಶದಲ್ಲಿ ಸ್ಥಾಯಿಯಾಗಿ ನೆಲೆಸಿ ಕೃಷಿ, ಕೂಲಿ, ಮಾಡಿಕೊಂಡು ಬದುಕುತ್ತಿರುವರು. ಇತರ ಬುಡಕಟ್ಟು ಸಮುದಾಯಗಳಂತೆ ಕುಣಬಿಗಳು ಮಿಶ್ರ ಆರ್ಥಿಕ ಸ್ಥಿತಿ ಹೊಂದಿರುವರು. ತಮ್ಮ ಜೀವನ

ನಿರ್ವಹಣೆಗಾಗಿ ಅವರು ಕೃಷಿ, ಭೇಟೆ, ಅರಣ್ಯ ಉತ್ಪನ್ನಗಳ ಸಂಗ್ರಹ, ಕರಕುಶಲ, ಔಷಧೀಯ ಸಸ್ಯಗಳ ಶೋಧ ಕೈಗೊಳ್ಳುತ್ತಾರೆ.

ಕುಣಬಿಗಳಿಗೆ ಅರಣ್ಯವೇ ವಾಸಸ್ಥಾನವಾದಾಗ ಅವರ ಆರ್ಥಿಕ ಚಟುವಟಿಕೆಗಳಿಗೆ ಕಚ್ಚಾ ಸಾಮಗ್ರಿ ಅರಣ್ಯ ಪ್ರದೇಶದ ಸುತ್ತಮುತ್ತಲೂ ದೊರೆಯುತ್ತಿತ್ತು. ಆದರೆ ಈಗ ನೂತನ ಅರಣ್ಯ ನೀತಿ, ಅರಣ್ಯ ನಾಶ, ನಗರೀಕರಣದಿಂದಾಗಿ ಕುಣಬಿ ಸಮುದಾಯವು ಅರಣ್ಯದಿಂದ ದೂರ ಉಳಿದು ಏಕಾಂಗಿತನ ಅನುಭವಿಸುತ್ತಿದೆ.

ಔಷಧೀಯ ಸಸ್ಯಗಳ ಪೋಷಣೆ ಹಾಗೂ ಗಿಡಮೂಲಿಕೆಗಳ ಸಂಗ್ರಹ ಹಾಗೂ ಮಾರಾಟ ಕುಣಬಿಗಳ ಮುಖ್ಯ ಕಸುಬಾಗಿದೆ. ಅರಣ್ಯ ಭೂಮಿಯನ್ನು ಕೃಷಿ ಭೂಮಿಯಾಗಿ ಪರಿವರ್ತನೆ, ಅರಣ್ಯ ಪ್ರದೇಶದ ನಿರ್ನಾಮ ಹಾಗೂ ನಗರ-ಕಟ್ಟಡಗಳ ನಿರ್ಮಾಣ, ರಸ್ತೆ, ಬಾವಿ, ಕೆರೆ, ಕಟ್ಟೆಗಳ ರಚನೆ ಇವುಗಳಿಂದ ಔಷಧೀಯ ಸಸ್ಯ ಪ್ರದೇಶ ಸಂಕುಚಿತಗೊಂಡಿದೆ. ಹೀಗಾಗಿ ಕುಣಬಿ ಜನರು ಸ್ಥಳೀಯ ನಾಟಿ ವೈದ್ಯರಾಗಿ, ಔಷಧೀಯ ಗಿಡಮೂಲಿಕೆಗಳ ಸಂಗ್ರಹ ಮತ್ತು ಮಾರಾಟ ವೃತ್ತಿಯನ್ನು ಬಿಡಬೇಕಾಗಿದೆ.

ಬೇಟೆಗಾರಿಕೆ ಹಾಗೂ ಮೀನುಗಾರಿಕೆಗಳು ಕುಣಬಿಗಳ ಉಪವೃತ್ತಿ ಆಗಿರುವುದಲ್ಲದೆ ತುಸುಮಟ್ಟಿಗೆ ಆಹಾರ ಸಾಮಗ್ರಿಗೂ ಪೂರಕವಾಗಿದೆ. ಅರಣ್ಯ ಪ್ರದೇಶದಲ್ಲಿ ಭೇಟೆಯ ನಿರ್ಬಂಧ, ಕಾಡು-ಮೃಗದ ಇಳಿಮುಖತೆಗಳು ಭೇಟೆಗಾರಿಕೆಗೆ ನಿರ್ಬಂಧ ಒಡ್ಡಿದೆ.

ಬೆಟ್ಟ-ತಪ್ಪಲು ಪ್ರದೇಶದಲ್ಲಿ ವಾಸಿಸುತ್ತಿರುವ ಕುಣಬಿಗಳು ಸ್ವಂತ ಕೃಷಿ ಅಥವಾ ಬಾಡಿಗೆ ಕೃಷಿ ಕೈಗೊಂಡಿದ್ದಾರೆ. ಒಂದು ಅಧ್ಯಯನದ ಪ್ರಕಾರ ಬಹುಸಂಖ್ಯಾತ ಕುಣಬಿ ಕುಟುಂಬಗಳು ಒಂದು ಎಕರೆಗಿಂತ ಕಡಿಮೆ ಕೃಷಿ ಯೋಗ್ಯ ಭೂಮಿ ಪಡೆದಿರುವರು. ಕುಣಬಿ ಕುಟುಂಬಗಳ ವಾಸಸ್ಥಳಗಳಲ್ಲಿ ಕೃಷಿ ಯೋಗ್ಯವಲ್ಲದ ಭೂಪ್ರದೇಶವೇ ವಿಸ್ತಾರವಾಗಿದೆ. ಕುಣಬಿಗಳಿಗೆ ದೊರೆತ ಭೂಮಿಯಲ್ಲಿ ನೀರಾವರಿ ಸೌಲಭ್ಯವಿಲ್ಲದ, ಕೃಷಿಗೆ ಯೋಗ್ಯವಲ್ಲದ ಭೂಮಿ ಹೆಚ್ಚಾಗಿರುವುದರಿಂದ ಅವರ ಬಡತನ ಹಾಗೂ ದಾರುಣ ಆರ್ಥಿಕ ಸ್ಥಿತಿಗೆ ಕಾರಣವಾಗಿದೆ.

ಒಂದು ವಾಸ್ತವ ಸಂಗತಿಯೆಂದರೆ ಇಂದು ಕುಣಬಿಗಳು ಆಧುನಿಕ ಗೃಹಪಯೋಗಿ ವಸ್ತುಗಳಾದ ರೇಡಿಯೋ, ಟಿ.ವ್ಹಿ., ಟೇಪ್ ರಿಕಾರ್ಡ್‌ರ, ಫೋನ್, ಮೊಬೈಲ್, ಮುಂತಾದವುಗಳನ್ನು ಕೊಳ್ಳುವ ಆರ್ಥಿಕ ಶಕ್ತಿ ಎಲ್ಲೋ ಒಂದಿಷ್ಟು ಜನ ಪಡೆದಿದ್ದಾರೆಂದರೆ ಅವರ ಜೀವನಮಟ್ಟ ಸುಧಾರಣೆಯಾಗಿ ಸಂತೋಷವಾಗಿದೆಯೆಂದರ್ಥವಲ್ಲ. ಈಗಲೂ ಕುಣಬಿ ಜನರ ಗೃಹ ನಿರ್ಮಾಣ ಸ್ಥಿತಿ ತೃಪ್ತಿದಾಯಕವಾಗಿಲ್ಲ. ಬಹಳ ಮನೆಗಳು ಕೆಳ ಗುಣಮಟ್ಟದ್ದಾಗಿದ್ದು, ಸಾಧಾರಣ ಕಟ್ಟುವಿಕೆ ಕಂಡುಬಂದಿದೆ. ಅವರ ಬಡತನ, ಅಜ್ಞಾನ, ಸರಕಾರದ ಸಾಲ-ಸೌಲಭ್ಯಗಳ

ತಿಳುವಳಿಕೆ ಇಲ್ಲದಿರುವುದೇ ಈ ದುಃಸ್ಥಿತಿಗೆ ಕಾರಣ. ಕೆಲವೊಂದು ಮನೆಗಳಿಗೆ ಇನ್ನೂ ವಿದ್ಯುತಚ್ಛಕ್ತಿ ಸಂಪರ್ಕ ಪಡೆದಿರುವುದಿಲ್ಲ. ಬಹಳ ಮನೆಗಳಲ್ಲಿ ಸುಧಾರಿತ ಶೌಚಾಲಯಗಳು ಇರುವುದಿಲ್ಲ, ಅವರಿನ್ನೂ ಉತ್ತಮ ಸ್ನಾನಗೃಹ, ಸ್ವಚ್ಛ ಪರಿಸರದ ಅವಶ್ಯಕತೆಗಳನ್ನು ಇನ್ನೂ ಮನಗಂಡಿಲ್ಲ. ಜಮೀನು ಹಾಗೂ ಹಿಂದುಳಿದ ವರ್ಗಗಳಿಗೆ ಮೀಸಲಾಗಿರುವ ವಿಶೇಷ ಸಾಲ-ಸೌಲಭ್ಯ, ರಿಯಾಯಿತಿ, ಸಹಾಯಧನದ ತಿಳುವಳಿಕೆ ಇಲ್ಲದಿರುವುದೇ ಕಾರಣ.

ಯಾವ ಸಮುದಾಯವು ಕೇವಲ ಅನಿಶ್ಚಿತ ಮತ್ತು ಅವಲಂಭಿತ ಆರ್ಥಿಕ ಮೂಲಗಳನ್ನು ನೆಚ್ಚಿಕೊಂಡಿರುತ್ತದೆಯೋ, ಆ ಸಮುದಾಯವು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಯಾವತ್ತೂ ಹಿನ್ನಡೆಯನ್ನು ಅನುಭವಿಸುತ್ತಲೇ ಇರುತ್ತದೆ. ಶೈಕ್ಷಣಿಕವಾಗಿ ಸಬಲಗೊಳ್ಳದ ಯಾವ ಸಮುದಾಯವು ವರ್ತಮಾನವನ್ನು ಎದುರಿಸಿ ನಿಲ್ಲಲು ಸಾಧ್ಯವಿಲ್ಲ. ಈ ಕಾರಣದಿಂದ ಕುಣಬಿ ಸಮುದಾಯವನ್ನು ಆರ್ಥಿಕವಾಗಿ ಸಬಲಗೊಳಿಸಿದರೆ ಅದು ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಸಬಲಗೊಳ್ಳಲು ಸಾಧ್ಯವಾಗುತ್ತದೆ.

ಕೇವಲ ಗ್ರಾಮಪಂಚಾಯತಿ, ತಾಲೂಕಾ ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳಿಗೆ ಮಾತ್ರ ಇವರ ರಾಜಕೀಯ ಚಟುವಟಿಕೆ ಸೀಮಿತವಾಗಿದೆ. ಅದರಾಚೆಗೆ ರಾಜ್ಯ ಮತ್ತು ರಾಷ್ಟ್ರ ಮಟ್ಟದ ರಾಜಕಾರಣದಲ್ಲಿ ಇವರು ಪಾಲ್ಗೊಂಡಿರುವುದು ಎಲ್ಲಿಯೂ ಕಂಡುಬರುವುದಿಲ್ಲ.

ಮುಖ್ಯವಾಗಿ ಕುಣಬಿ ಸಮುದಾಯ ಸಮರ್ಪಕವಾಗಿ ರಾಜಕೀಯ ಪ್ರವೇಶ ಮಾಡಲು ಸಾಧ್ಯವಾಗದಿರುವುದಕ್ಕೆ ಹಲವು ಕಾರಣಗಳಿವೆ. ಬಡತನ, ಮೀಸಲಾತಿ ಕೊರತೆ, ಇನ್ನೂ ಮತದಾರರ ಪಟ್ಟಿಯಲ್ಲಿ ಸೇರಬೇಕಾದವರ ಸಂಖ್ಯೆ ಹೆಚ್ಚಾಗದಿರುವುದು.

ಕುಣಬಿ ಸಮುದಾಯದ ಬದುಕಿನ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತಿಗತಿಗಳನ್ನು ಪರಾಂಬರಿಸುವ ಮಹತ್ವದ ಅಧ್ಯಯನವನ್ನು ಈ ಸಂಶೋಧನೆ ಕೈಗೊಂಡಿದೆ. ಭಾರತ ದೇಶದ ಇತಿಹಾಸವೆನ್ನುವುದು ಕೇವಲ ನಮಗೆ ಪರಿಚಿತವಾದ ನಾಡು ಅಥವಾ ಇತಿಹಾಸ ಮಾತ್ರವಲ್ಲ. ಇತಿಹಾಸಕಾರರ ಲೇಖನಿಗೆ ಸಿಗದ ಅನೇಕ ಬದುಕಿನ ಸಂಶೋಧನೆಗೆ ಗೋಚರವಾದ ಇನ್ನು ಎಷ್ಟೋ ಸಮುದಾಯಗಳು ಈ ದೇಶದಲ್ಲಿವೆ. ಅಂತಹ ಒಂದು ಸಮುದಾಯ ಕುಣಬಿಯರು. ತಮ್ಮ ಶ್ರೀಮಂತ ಮತ್ತು ವಿಶಿಷ್ಟ ಬದುಕಿನಿಂದ ಇಂದಿಗೂ ಸ್ವಲ್ಪಮಟ್ಟದ ಸ್ವಂತಿಕೆಯನ್ನು ಎನಿಸಿಕೊಂಡು ಬಂದ ಈ ಸಮುದಾಯ ಬದಲಾದ ಕಾಲಕ್ಕೆ, ಕಾಲದ ಹೊಡೆತಕ್ಕೆ ಈಡಾಗಿ ಪರಿವರ್ತನೆಯಾಗುವ ಹಂತದಲ್ಲಿದೆ. ಸರಕಾರಗಳ ಮುಂದಾಲೋಚನೆ ಇಲ್ಲದ ಯೋಜನೆಗಳಿಂದಾಗಿ ಅಭಿವೃದ್ಧಿಯ ಹೆಸರಿನಲ್ಲಿ ಇಂಥ ಸಮುದಾಯಗಳು ನಾಶವಾಗುವ ಕಾಲಕ್ಕೆ

ನಾವು ಹತ್ತಿರ ಬಂದಿದ್ದೇವೆ. ಈ ಸಂಶೋಧನೆ ಕುಣಬಿ ಸಮುದಾಯಕ್ಕೆ ದೊರಕಬೇಕಾದ ನ್ಯಾಯಯುತವಾದ ಸೌಲಭ್ಯಗಳು ದೊರೆಯುವಂತಾಗಬೇಕು.

ನಾನು ವ್ಯಕ್ತಿ ಅಧ್ಯಯನ (Case Study) ಮಾಡುವ ಸಂದರ್ಭದಲ್ಲಿ ಕುಣಬಿಯರು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಕುರಿತು ನನ್ನ ಗಮನ ಸೆಳೆದರು. ಅವರ ಕೆಲವು ಅಭಿಪ್ರಾಯಗಳನ್ನು ಸಂಗ್ರಹಿಸಿ ಈ ಕೆಳಗೆ ನೀಡುತ್ತಿದ್ದೇನೆ.

೧. ಇಂದಿಗೂ ಕುಣಬಿ ಸಮುದಾಯಗಳ ಸಾಮಾಜಿಕಾರ್ಥಿಕ ಸ್ಥಿತಿ–ಗತಿಗಳಲ್ಲಿ ಯಾವ ಬದಲಾವಣೆಗಳಾಗಿಲ್ಲ. ಹೆಚ್ಚು ಆದಾಯ ಬರುವ ದುಡಿಮೆಗಳಲ್ಲಿ ತೊಡಗಲು ಕುಣಬಿಗಳಿಗೆ ಶೈಕ್ಷಣಿಕ ಅರ್ಹತೆ ಇಲ್ಲದಿರುವುದು ಸರಕಾರಿ ಅಥವಾ ಖಾಸಗಿ ವಲಯದಲ್ಲಿನ ನೌಕರಿಯಿಂದ ಹೆಚ್ಚು ಸಂಪಾದಿಸಬಹುದು ಎನ್ನುತ್ತಾರೆ.

೨. ಜೊತೆಗೆ ಮೀಸಲಾತಿ ಇಲ್ಲದಿರುವುದು ಈ ಸೇವಾ ವಲಯಗಳಲ್ಲಿ ನೌಕರಿ ಸಿಗದಿರುವುದಕ್ಕೆ ಕಾರಣ ಎಂದು ಇವರು ನಂಬಿದ್ದಾರೆ.

೩. ತಾವು ಮಾಡುವ ಕೂಲಿ ಕೆಲಸದಲ್ಲಿ ಯಾವುದೇ ಬಗೆಯ ಕೌಶಲ್ಯವನ್ನು ಬಳಸಿ ಅಧಿಕ ಉತ್ಪಾದನೆ ಮಾಡಿದರೂ ಸಹ ಕೂಲಿ ಎಂಬುದು ನಿಗದಿಗಿಂತ ಜಾಸ್ತಿ ದೊರೆಯುವುದಿಲ್ಲ. ಕುಣಬಿಗಳಿರುವುದೇ ಕಡಿಮೆ ಕೂಲಿಗೆ ಕೆಲಸ ಮಾಡಲು ಎಂದು ಬಹುಪಾಲು ಧನಿಕರು ಭಾವಿಸಿದ್ದಾರೆ.

೪. ಸಂವಿಧಾನಾತ್ಮಕ ಸೌಲಭ್ಯಗಳನ್ನು ಪಡೆಯಲು ಅರ್ಹವಾಗಿದ್ದ ಸಮುದಾಯಗಳು ಅನುಸೂಚಿತ ಪಟ್ಟಿಯಲ್ಲಿ ಜಾಗ ಪಡೆಯಲಾಗದಿದ್ದಕ್ಕೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಸಬಲಗೊಳ್ಳಲಿಲ್ಲ. ಇಂತಹ ಸಮುದಾಯಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಮುದಾಯಕ್ಕಿಂತ ಆರ್ಥಿಕವಾಗಿ ಹೀನಾಯ ಸ್ಥಿತಿಯಲ್ಲಿದೆ.

೫. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಾಕ್ಷರತೆಗಿಂತಲೂ ಕುಣಬಿಗಳ ಸಾಕ್ಷರತೆಯ ಪ್ರಮಾಣವು ಅತ್ಯಂತ ಕಡಿಮೆ ಇರುವುದು ಕಂಡುಬರುತ್ತದೆ. ಅದರಲ್ಲೂ ಮಹಿಳೆಯರು ಕುಣಬಿ ಸಮುದಾಯದಲ್ಲಿ ಗಣನೀಯ ಪ್ರಮಾಣದಲ್ಲಿ ಅನಕ್ಷರಸ್ಥರಿರುವುದು ಕಂಡು ಬರುತ್ತದೆ. ಇದಕ್ಕೆ ಕಾರಣ ಈ ಸಮುದಾಯದ ಆರ್ಥಿಕ ಸ್ಥಿತಿ ಎಂಬುದು ಸ್ಪಷ್ಟವಾಗುತ್ತದೆ.

೬. ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಸಿಸುವ ಕುಣಬಿಗಳಲ್ಲಿ ಕೆಲವೇ ಕುಟುಂಬಗಳಿಗೆ ಭೂಮಿ ಇದೆ. ನಾನು ಅಧ್ಯಯನ ಮಾಡಿದ ೧೦೦೦ ಕುಟುಂಬಗಳಲ್ಲಿರುವ ಪ್ರತಿಶತ ೬೩ ರಷ್ಟು ಕುಟುಂಬಗಳು ೧ ರಿಂದ ೨ ಎಕರೆ ಕೃಷಿ ಭೂಮಿಯನ್ನು ಹೊಂದಿದ್ದರೆ, ಪ್ರತಿಶತ ೩೭ ರಷ್ಟು ಕುಟುಂಬಗಳು ಭೂರಹಿತವಾಗಿದ್ದಾರೆ.

೭. ಕುಣಬಿಗಳಲ್ಲಿ ಬಹುತೇಕರಿಗೆ ನಿರ್ಧಿಷ್ಟವಾದ ಕೆಲಸವಿಲ್ಲ.

೮. ಬ್ರಿಟಿಷ್ ಆಡಳಿತವೇ ಸರಿ ಇತ್ತೆಂಬ ಮನೋಭಾವ ಇದೆ.

೯. ಉತ್ತರ ಕನ್ನಡ ಜಿಲ್ಲೆಯಲ್ಲಿಯೇ ನೆಲೆಸಿರುವ ಸಮುದಾಯಗಳಲ್ಲಿ ಕುಣಬಿಗಳು ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಹೆಚ್ಚು ಹಿಂದುಳಿದಿದ್ದಾರೆ.

೧೦. ಕುಣಬಿಗಳಿಗೆ ಬಹುತೇಕ ಕುಟುಂಬಗಳಿಗೆ ನಿವೇಶನ ವಾಸಯೋಗ್ಯ ಮನೆಗಳಿಲ್ಲ.

೧೧. ಕುಣಬಿ ಸಮುದಾಯಗಳು ಚಿಕ್ಕದಾದ ಒಂದೇ ಮನೆಯಲ್ಲಿ ಮೂರು–ನಾಲ್ಕು ಕುಟುಂಬಗಳು ವಾಸಿಸುತ್ತವೆ.

೧೨. ಕುಣಬಿ ಮಹಿಳೆಯರು, ಮಕ್ಕಳು ಹೆಚ್ಚು ರಕ್ತ ಹೀನತೆ ಹಾಗೂ ಇತರೆ ಕಾಯಿಲೆಗಳಿಂದ ಹೆಚ್ಚು ಬಳಲುತ್ತಾರೆ.

೧೩. ಕುಣಬಿಗಳ ಒಟ್ಟಾರೆ ಕುಟುಂಬಗಳಲ್ಲಿನ ಶೇ. ೭೦ ರಷ್ಟು ಕುಟುಂಬಗಳಲ್ಲಿ ಮಹಿಳೆಯ ದುಡಿಮೆ ಪುರುಷನ ದುಡಿಮೆಯಷ್ಟೇ ನಿರ್ಣಾಯಕವಾದದ್ದು.

೧೪. ನಾನು ಸಂದರ್ಶನಮಾಡಿದ ಶೇ. ೫೦ ರಷ್ಟು ಮಹಿಳೆಯರಿಗೆ ತಮ್ಮ ದುಡಿಮೆಯ ಅಗತ್ಯ ಕುಟುಂಬಕ್ಕೆ ಇದೆ ಎಂಬ ಅರಿವು ಇದೆ. ಇದರ ಜೊತೆಗೆ ಕುಟುಂಬ ಮತ್ತು ಸಮುದಾಯದ ಒಟ್ಟಾರೆಯ ಚಟುವಟಿಕೆಗಳಲ್ಲಿ ತಮಗೆ ಯಾವುದೇ ನಿರ್ಣಾಯಕ ಸ್ಥಾನಮಾನಗಳಿಲ್ಲದಿರುವುದರ ಅರಿವೂ ಇದೆ.

**ಸಲಹೆಗಳು**

ನನ್ನ ಕ್ಷೇತ್ರಕಾರ್ಯದ ಅನುಭವ ಹಾಗೂ ಅವರೊಡನೆ ಇದ್ದ ದೀರ್ಘ ಒಡನಾಟದ ಹಿನ್ನೆಲೆಯಲ್ಲಿ ಕುಣಬಿ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನದ ಕೆಲವು ಸಲಹೆಗಳನ್ನು ಈ ಕೆಳಗೆ ನೀಡಲಾಗಿದೆ. ನನ್ನ ಅಧ್ಯಯನದ ಆಶಯವೇ ಇದಾಗಿದೆ.

೧. ವಿಮುಕ್ತ ಬುಡಕಟ್ಟುಗಳ ಅಮೂಲಾಗ್ರ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಸಹಾಯಕವಾಗುವಂತೆ ಬ್ರಿಟೀಷ್ ವಸಾಹತು ಕಾಲಘಟ್ಟದಲ್ಲಿ ಸ್ಥಾಪಿಸಿದ ಅಯ್ಯಂಗಾರ್ ಸಮಿತಿ ವರದಿಯಲ್ಲಿ ಸೂಚಿಸಿದ ಸಮುದಾಯಗಳ ಜನಸಂಖ್ಯೆಯನ್ನು ಮೂಲವಾಗಿಟ್ಟುಕೊಂಡು ಸ್ವಾತಂತ್ರ್ಯ ನಂತರದ ಕುಣಬಿಗಳ ಜನಸಂಖ್ಯೆಯನ್ನು ಗಣನೆ ಮಾಡಬೇಕು ಮತ್ತು ಅವುಗಳ ಅಭಿವೃದ್ಧಿಗೆ ಪೂರಕವಾದಂತಹ ಯೋಜನೆಗಳನ್ನು ರೂಪಿಸಬೇಕು.

೨. ಪ್ರತಿಯೊಂದು ಕುಣಬಿಗಳ ಪ್ರದೇಶಗಳಲ್ಲಿ ಮಾನವ ಹಕ್ಕುಗಳ ಸಂರಕ್ಷಣೆ ಘಟಕಗಳನ್ನು ಸ್ಥಾಪನೆ ಮಾಡಬೇಕು ಮತ್ತು ಅವುಗಳನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಮಾನವ ಹಕ್ಕುಗಳ ಆಯೋಗಕ್ಕೆ ನೀಡಬೇಕು. ಅವಶ್ಯಕತೆಯಿದ್ದಲ್ಲಿ ಆ ಕಾರ್ಯಕ್ಕಾಗಿ ಹೆಚ್ಚುವರಿ

ಅಧಿಕಾರಿಗಳನ್ನು ನಿಯೋಜಿಸಬೇಕು. ಮಾನವ ಹಕ್ಕುಗಳ ಉಲ್ಲಂಘನೆ ನಡೆದ ಪಕ್ಷದಲ್ಲಿ ಅವುಗಳಿಗೆ ಸೂಕ್ತ ರೀತಿಯ ಕ್ರಮಗಳನ್ನು ಕೈಗೊಳ್ಳುವ ಜವಾಬ್ದಾರಿಯನ್ನು ಮಾನವ ಹಕ್ಕುಗಳ ಆಯೋಗವೇ ಪರಿಹರಿಸುವಂತಾಗಬೇಕು ಮತ್ತು ಆಯೋಗದಲ್ಲಿ ಕುಣಬಿಗಳ ಯಾರದರೊಬ್ಬರನ್ನು ಸದಸ್ಯರನ್ನಾಗಿ ನೇಮಿಸಬೇಕು.

೩. ಕುಣಬಿ ಸಮುದಾಯ ಎಲ್ಲ ದೃಷ್ಟಿಯಿಂದಲೂ ಅಧಿಕೃತ ಬುಡಕಟ್ಟಿನ ಸರ್ವ ಲಕ್ಷಣಗಳನ್ನೂ ಹೊಂದಿರುವುದರಿಂದ ಅವರನ್ನು ಪರಿಶಿಷ್ಟ ವರ್ಗಕ್ಕೆ ಸೇರಿಸುವ ಕ್ರಮ ಕೈಗೊಳ್ಳಬೇಕು.

೪. ಕುಣಬಿಗಳಿಗೆ ಭೂಮಿ ಮತ್ತು ಅರಣ್ಯ ಬೇರೆ ಬೇರೆಯಲ್ಲ ಇವೆರಡನ್ನೂ ಪ್ರತ್ಯೇಕಿಸಿ ನೋಡದೆ ಸಮಸ್ಯೆಗಳನ್ನು ಬಗೆಹರಿಸಬೇಕು.

೫. ಕುಮರಿ ಬೇಸಾಯ ಮಾಡುತ್ತಿರುವ ಅರ್ಥಾತ್ 'ಒತ್ತುವರಿ' ಎಂದು ಸರಕಾರ ಹೇಳುತ್ತಿರುವ ಭೂಮಿಯನ್ನು ತಕ್ಷಣವೇ ಸಕ್ರಮಗೊಳಿಸುವ ಕ್ರಮ ಕೈಗೊಳ್ಳಬೇಕು.

೬. ಭೂಮಿಯಿಂದ ವಂಚಿತರಾಗಿರುವವರಿಗೆ ರೆವಿನ್ಯೂ ಭೂಮಿಯನ್ನಾದರೂ ನೀಡುವ ಕಾರ್ಯ ಜರೂರಾಗಿ ಆಗಬೇಕು.

೭. ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವ ಸ್ವಾತಂತ್ರ್ಯವನ್ನು ಪುನಃ ಜಾರಿಗೆ ತರಬೇಕು ಹಾಗೆ ಸಂಗ್ರಹಿಸಿದ ಉತ್ಪನ್ನಗಳ ನ್ಯಾಯಯುತ ಮಾರಾಟಕ್ಕಾಗಿ ಸಹಕಾರ ಸಂಘಗಳನ್ನು ಸ್ಥಾಪಿಸಬೇಕು.

೮. ಪ್ರತಿಯೊಂದು ಗ್ರಾಮಕ್ಕೆ (ಸೀಮಿತ ಪ್ರದೇಶವೇ ಗ್ರಾಮ) ಒಂದು ಶಾಲೆ ಮತ್ತು ಅಂಗನವಾಡಿಗಳನ್ನು ತೆರೆಯಬೇಕು. ಕಲಿಕೆಯ ಅರಿವು ಮೂಡಿಸುವ ದೃಷ್ಟಿಯಿಂದ ಕನ್ನಡದ ಜೊತೆಗೆ ಕೊಂಕಣಿ ಗೊತ್ತಿರುವ ಶಿಕ್ಷಕರನ್ನು ನೇಮಿಸಬೇಕು.

೯. ಅಲೆಮಾರಿ ಬುಡಕಟ್ಟುಗಳ ಅಭ್ಯುದಯಕ್ಕಾಗಿ ವಿಶೇಷವಾಗಿ ಕೇಂದ್ರ ಮತ್ತು ರಾಜ್ಯ ಸರಕಾರ ಅಲೆಮಾರಿ ಬುಡಕಟ್ಟು ಆಯೋಗವನ್ನು ರಚಿಸಬೇಕು.

೧೦. ನಮ್ಮ ದೇಶದ ಜನಸಂಖ್ಯೆಯಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಇಳಿಮುಖವಾಗುತ್ತಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿಯಾಗಿದೆ. ಕುಣಬಿ ಸಮುದಾಯವು ಇದಕ್ಕೆ ಹೊರತಾಗಿಲ್ಲ. ನಮ್ಮ ಗುಣತಿಯಲ್ಲಿ ೫೪೯೦ ಜನರಲ್ಲಿ ೩೦೯೪ ಜನ ಪುರುಷರು ಮತ್ತು ೨೭೯೬ ಜನ ಮಹಿಳೆಯರು ದಾಖಲಾಗಿದ್ದಾರೆ. ಕೆಲವು ತಾಲೂಕುಗಳಲ್ಲಿ ಲಿಂಗ ಅಸಮಾನತೆ ತೀವ್ರವೂ ಆಗಿದೆ. ಈ ಅಸಮಾನ ಬೆಳವಣಿಗೆಯನ್ನು ಸರಿಪಡಿಸಲು ಕ್ರಮಕೈಗೊಳ್ಳಬೇಕಿದೆ.

೧೧. ಕುಣಬಿಗಳಿಗಾಗಿ ವಿಶೇಷ ಪ್ಯಾಕೇಜ್‌ಗಳನ್ನು ರೂಪಿಸಿ ಅವುಗಳು ಅನುಷ್ಠಾನಗೊಳ್ಳುವಂತೆ ಮಾಡಬೇಕು.

೧೨. ಬುಡಕಟ್ಟುಗಳಲ್ಲಿ ಹಲವಾರು ಸಮುದಾಯಗಳಿಗೆ ಇಂದಿಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಮೀಸಲಾತಿ ಸೌಲಭ್ಯ ದೊರೆತಿರುವುದಿಲ್ಲ ಅಂತಹ ಸಮುದಾಯಗಳಿಗೆ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳ ಮೀಸಲಾತಿ ಸೌಲಭ್ಯ ದೊರೆಯುವಂತೆ ಮಾಡಬೇಕು. ಇಲ್ಲವೆ ಕುಣಬಿಗಳಿಗೆ ಬುಡಕಟ್ಟು ಎಂಬ ವಿಶೇಷ ಮೀಸಲಾತಿ ಸೌಲಭ್ಯ ದೊರೆಯುವಂತೆ ಮಾಡಬೇಕು. ಈ ರೀತಿ ಮಾಡುವಾಗ ಅಧಿಕಾರಿಗಳ ಚಮತ್ಕಾರದಿಂದ ಎಷ್ಟೋ ಬದಲಾವಣೆಗಳಾಗುವ ಸಾಧ್ಯತೆಗಳಿರುತ್ತವೆ. ಅಂದರೆ ಬುಡಕಟ್ಟುಗಳಲ್ಲದ ಸಮುದಾಯಗಳು ಬುಡಕಟ್ಟುಗಳ ಪಟ್ಟಿಯಲ್ಲಿ ಸೇರುವ ಸಾಧ್ಯತೆ ಇರುತ್ತದೆ, ಆ ರೀತಿ ಸೇರಿಸಲು ಅವಕಾಶ ಮಾಡಿಕೊಡಬಾರದು ಮತ್ತು ಆ ರೀತಿ ಅವಗಡಗಳಾಗದಂತೆ ಮುನ್ನೆಚ್ಚರಿಕೆಯನ್ನು ವಹಿಸಬೇಕು.

೧೩. ಕೆಲವೊಂದು ಬುಡಕಟ್ಟು ಸಮುದಾಯಗಳಲ್ಲಿ ನೆಪಕ್ಕೆಂಬಂತೆ ಆಸ್ಪತ್ರೆಯೆನೋ ಇವೆ ಆದರೆ ಅವುಗಳು ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿಲ್ಲ ಹೀಗಾಗಿ ಸುಸಜ್ಜಿತವಾದ ಮೂಲ ಸೌಕರ್ಯಗಳೆಲ್ಲ ಇರುವ ಆಸ್ಪತ್ರೆಯೊಂದನ್ನು ಕುಣಬಿ ಜನರಿರುವಲ್ಲಿಯೇ ನಿರ್ಮಿಸಬೇಕು.

೧೪. ಕುಣಬಿಗಳಲ್ಲಿ ಇಂದು ಶೇ. ೫೦ ಕ್ಕೂ ಹೆಚ್ಚಿನ ಪ್ರಮಾಣದಲ್ಲಿ ಅನಕ್ಷರಸ್ಥರಿರುವುದು ಕಂಡುಬರುತ್ತದೆ. ಆ ಸಮುದಾಯದ ಮಕ್ಕಳು ವಿದ್ಯಾವಂತರಾಗಲು ಅವಶ್ಯವಾದ ಎಲ್ಲಾ ಪ್ಯಾಕೇಜ್‌ಗಳನ್ನು ನೀಡಬೇಕು ಮತ್ತು ಸೈನಿಕ ಶಾಲೆ, ಕೇಂದ್ರೀಯ ಶಾಲೆಗಳ ರೀತಿಯ ವಸತಿ ಶಾಲೆಗಳನ್ನು ಈ ಮಕ್ಕಳಿಗಾಗಿ ಹಟ್ಟಿಗಳ ಹತ್ತಿರದಲ್ಲಿ ಅಥವಾ ವಿಶಾಲವಾದ ಪ್ರದೇಶದಲ್ಲಿ ಪ್ರಾರಂಭಿಸಿ ಕುಣಬಿಗಳ ಪ್ರತಿಯೊಂದು ಮಗುವು ಆ ಶಾಲೆಗಳಲ್ಲಿ ಉಚಿತವಾಗಿ ವಿದ್ಯಾಭ್ಯಾಸವನ್ನು ಪಡೆಯುವಂತಾಗಬೇಕು. ಈ ಶಾಲೆಗಳಲ್ಲಿ ಪ್ರಾಥಮಿಕ ಹಂತದಿಂದ ಹಿಡಿದು ಉನ್ನತ ಮಟ್ಟದವರೆಗೂ ಮಕ್ಕಳಿಗೆ ಶಿಕ್ಷಣ ದೊರೆಯುವಂತಾಗಬೇಕು.

೧೫. ಕುಣಬಿ ಸಮುದಾಯದ ಮಕ್ಕಳಿಗೆ ವೃತ್ತಿ ಕೌಶಲ್ಯಗಳನ್ನು ಕಲಿಸುವ ವೃತ್ತಿ ಶಿಕ್ಷಣ ಕೇಂದ್ರಗಳಾದ ಐ.ಟಿ.ಐ., ಡಿಪ್ಲೊಮಾ ಕಾಲೇಜುಗಳನ್ನು ಆ ಮಕ್ಕಳಿಗಾಗಿಯೇ ಪ್ರಾರಂಭಿಸಬೇಕು ಮತ್ತು ಆ ಕಾಲೇಜುಗಳಲ್ಲಿ ಆ ಮಕ್ಕಳಿಗೆ ಸಂಪೂರ್ಣವಾಗಿ ಉಚಿತವಾಗಿ ಶಿಕ್ಷಣ ದೊರೆಯುವಂತಾಗಬೇಕು ಹಾಗೂ ಉತ್ತಮ ಗುಣಮಟ್ಟದ ಉಚಿತ ವಸತಿ ನಿಲಯಗಳನ್ನು ಕುಣಬಿ ಮಕ್ಕಳಿಗಾಗಿಯೇ ವಿಶೇಷವಾಗಿ ಪ್ರರಾಂಭಿಸಬೇಕು.

೧೬. ಕುಣಬಿ ಮಹಿಳೆಯರ ಸುರಕ್ಷತೆಗಾಗಿ ರಾಷ್ಟ್ರೀಯ ಮಹಿಳಾ ಆಯೋಗದ ಮುಖಾಂತರ ವಿಶೇಷ ಘಟಕವನ್ನು ನಿರ್ಮಿಸಬೇಕು.

೧೭. ಕುಣಬಿ ಮಹಿಳೆಯರಿಗೆ ಶಿಕ್ಷಣ ದೊರೆಯುವಂತೆ ವಿಶೇಷ ಮಹಿಳಾ ಶಾಲೆಗಳನ್ನು ಪ್ರಾರಂಭಿಸಿ ಕುಣಬಿಯ ಪ್ರತಿಯೊಬ್ಬ ಮಹಿಳೆ ಆ ಶಾಲೆಯಲ್ಲಿ ಶಿಕ್ಷಣ ಪಡೆಯುವಂತಾಗಬೇಕು ಮತ್ತು ಮಹಿಳೆಯರಿಗೆ ಅವಶ್ಯಕವಾಗಿ ಉನ್ನತ ಶಿಕ್ಷಣಕ್ಕೆ ಹೋಗಲು ಅವಕಾಶಗಳನ್ನು ಕಲ್ಪಿಸಿಕೊಡಬೇಕು.

೧೮. ಕುಣಬಿ ಸಮುದಾಯದ ಸಾಂಸ್ಕೃತಿಕ ಪರಂಪರೆಯ ರಕ್ಷಣೆಗೆ ಕ್ರಮಕೈಗೊಳ್ಳಬೇಕು. ಅವರ ಭಾಷೆ, ಸಾಹಿತ್ಯ, ಹಬ್ಬಾಚರಣೆಗಳು, ಆಹಾರ ಪದ್ಧತಿ, ಪ್ರಕೃತಿ ಆರಾಧನೆ ಮುಂತಾದ ಆರೋಗ್ಯಕರ ಸಂಪ್ರದಾಯಗಳ ದಾಖಲಾತಿ ಆಗಬೇಕು.

೧೯. ಸರಕಾರ ಕುಣಬಿಯರಿಗಾಗಿಯೇ ಕೆಲವು ವಿಶೇಷ ಅಭಿವೃದ್ಧಿ ಯೋಜನೆಗಳನ್ನು ರೂಪಿಸಬೇಕು. ಅವರ ಕೃಷಿ, ಅರಣ್ಯ ಉತ್ಪನ್ನಗಳು, ಕರಕುಶಲತೆ, ಮುಂತಾದ ಯೋಜನೆಗಳನ್ನು ಅಭಿವೃದ್ಧಿಗೊಳಿಸಬೇಕು.

೨೦. ಬಹುಸಂಖ್ಯಾತರಿಂದ, ಭೂ ಮಾಲೀಕರಿಂದ ಹಾಗೂ ಅಧಿಕಾರಶಾಹಿ ಧೋರಣೆಯಿಂದ ಅರಣ್ಯ ವಾಸಿಗಳನ್ನು ರಕ್ಷಿಸುವ ಸೂಕ್ತ ಕಾನೂನುಗಳ ರಚನೆಯಾಗಬೇಕು.

೨೧. ಕುಣಬಿಗಳು ಪ್ರಸ್ತುತ ಪ್ರವರ್ಗ–೧ ರ ಪಟ್ಟಿಯಲ್ಲಿದ್ದಾರೆ "ಆದಿವಾಸಿಗಳಾಗದ ಆದಿವಾಸಿ". ಕುಣಬಿಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಬೇಕೆನ್ನುವುದು ಈ ಅಧ್ಯಯನದ ಅನಿಸಿಕೆ ಹಾಗೂ ಸಮುದಾಯದ ಮಹತ್ವದ ಆಶಯವಾಗಿದೆ.

# ಅನುಬಂಧಗಳು

೧. ಪರಮಾರ್ಶನ ಗ್ರಂಥಗಳು

೨. ಅಧ್ಯಯನಕ್ಕೆ ಆಯ್ಕೆ ಮಾಡಿದ ತಾಲೂಕು, ಗ್ರಾಮ ಮತ್ತು ಮಾಹಿತಿದಾರರ ಆಯ್ಕೆ ನಮೂನೆ ವ್ಯಕ್ತಿ ಸಂದರ್ಶನ

೩. ಕುಣಬಿ ಸಮುದಾಯ ಉಪಯೋಗಿಸುವ ಔಷಧಿಯ ಸಸ್ಯ ಮತ್ತು ಮರಗಳು

೪. ಕುಣಬಿ ಸಮುದಾಯದವರು ಬೇರೆ ಬೇರೆ ಸಂದರ್ಭಗಳಲ್ಲಿ ಉಪಯೋಗಿಸುವ ಮರದ ಭಾಗಗಳು

೫. ಕುಣಬಿಯದವರ ಜೊತೆ ಆಚರಣೆಗಳಲ್ಲಿ ಪಾಲ್ಗೊಳ್ಳುವ ಪ್ರಾಣಿ ಪಕ್ಷಿಗಳು

೬. ತಿಳುವಳಿಕೆ ನೀಡಿದವರು

೭. ಪ್ರಶ್ನಾವಳಿ

೮. ವ್ಯಕ್ತಿ ಅಧ್ಯಯನ ಪ್ರಶ್ನಾವಳಿ

೯. ಅಂಕಿಅಂಶಗಳ ಪಟ್ಟಿ

೧೦. ಪತ್ರಿಕಾ ವರದಿಗಳು

೧೧. ದಾಖಲೆಗಳು / ಸುತ್ತೋಲೆಗಳು

೧೨. ಛಾಯಾಚಿತ್ರಗಳು

# ಪರಾಮರ್ಶನ ಗ್ರಂಥಗಳು

೧. ಅನಂತರಾಮರಾವ್ ಕೆ., 'ಸುವರ್ಣ ಕರ್ನಾಟಕ ದರ್ಶನ', ವಿದ್ಯಾ ಪಬ್ಲಿಷಿಂಗ್ ಹೌಸ್, ಕದ್ರಿ, ಮಂಗಳೂರು, ೨೦೦೬.

೨. ಆನಂದ ತೇಲ್ ತುಂಬ್ಡೆ, 'ಖೈರ್ಲಾಂಜಿ', (ದಲಿತ ಭಾರತದ ಕಥನ), ಲಂಕೇಶ ಪ್ರಕಾಶನ, ನಂ. ೯, ಪೂರ್ವ ಆಂಜನೆಯ ಗುಡಿ ರಸ್ತೆ, ಬಸವನಗುಡಿ, ಬೆಂಗಳೂರು, ೨೦೦೯.

೩. ಇಂದಿರಾ ಆರ್., 'ಭಾರತೀಯ ಸಮಾಜ', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೫.

೪. ಇಂದಿರಾ ಆರ್., 'ಜೋಯಿಡಾ ತಾಲೂಕಿನಲ್ಲಿ ಕುಣಬಿ ಜನಸಂಖ್ಯೆ ಕೇಂದ್ರೀಕೃತವಾಗಿರುವ ಗ್ರಾಮಗಳ ಬಗ್ಗೆ ಮೂಲ ಮಾಹಿತಿ', ಕರೀಂ ಅಲಿ ಎಸ್. ಕಸಾಮ್ ಸೀಡಾ ಶಾಸ್ತ್ರಿ ಸಹಭಾಗಿತ್ವ ಸಂಶೋಧನೆ ಸಂಯೋಜನೆ, ಥೀಮ್ ಸ್ಕೂಲ್ ಇನ್ ನಾರ್ದರ್ನ್ ಪ್ಲಾನಿಂಗ್ ಅಂಡ್ ಡೆವಲಪ್‌ಮೆಂಟ್ ಸ್ಟಡೀಸ್, ಕ್ಯಾಲ್ಗರಿ ವಿಶ್ವವಿದ್ಯಾಲಯ, ಕೆನಡಾ, ೨೦೦೧.

೫. ಕಾಳೇಗೌಡ ನಾಗವಾರ, ಹುಚ್ಚಪ್ಪ ಮಾಸ್ತರ ಎನ್., 'ಗಿರಿಜನ ಸಂಸ್ಕೃತಿ', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೨೦೦೦.

೬. ಗಣಪತಿ ಫ. ಚಲವಾದಿ, 'ಉತ್ತರ ಕನ್ನಡ ಜಿಲ್ಲೆಯ ಕುಣಬಿಯ : ಭಾಷಾ ವೈಜ್ಞಾನಿಕ ಮಾನವಶಾಸ್ತ್ರೀಯ ಅಧ್ಯಯನ' ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೮.

೭. ಗೋಪಾಲಕೃಷ್ಣ ಪಿ. ನಾಯಕ, 'ಉತ್ತರ ಕನ್ನಡ ದರ್ಶನ', ವಿಜಯ ಭಾರತಿ ಪ್ರಕಾಶನ, ಗೋಕರ್ಣ, ಉತ್ತರ ಕನ್ನಡ, ೧೯೯೭.

೮. ಚಂದ್ರಹಾಸಗುಪ್ತ ಅ.ರಾ., 'ಕರ್ನಾಟಕ ಗ್ರಾಮ ಸೂಚಿ', ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೧೯೮೫.

೯. ಚಂದ್ರ ಪೂಜಾರಿ ಎಂ., 'ಸಂಶೋಧನೆ ಪ್ರಸ್ತಾವ', (ಸಂಪುಟ ಮಾಹಿತಿ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೧೦. ಜಗದೀಶ ಕೆ., 'ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ', ಚಿರಾಗ ಪ್ರಕಾಶನ, ಧಾರವಾಡ, ೨೦೧೦.

೧೧. ದಿವಾಕರ ಆರ್.ಆರ್., 'ಕರ್ನಾಟಕದ ಪರಂಪರೆ', ಸಂಪುಟ–೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೧೯೯೨.

೧೨. ದೇವಾನಂದ ಮಾಲಗತ್ತಿ, 'ಜನಾಂಗಿಕ ಸಾಹಿತ್ಯ', (ಸಂಶೋಧನಾ ಪ್ರಬಂಧಗಳು), ಶೈಲ ಪ್ರಕಾಶನ, ಅಂಬೇಡ್ಕರ ರಸ್ತೆ, ನೇತಾಜಿ ಗಲ್ಲಿ, ಮುದ್ದೇಬಿಹಾಳ, ೧೯೯೫.

೧೩. ನಂಜಮ್ಮಣ್ಣಿ ಎಂ., 'ಭಾರತೀಯ ಸಾಮಾಜಿಕ ಸಂಸ್ಥೆಗಳು', ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೩.

೧೪. ನಾವಡ ಎ.ವಿ., 'ಕೊಂಕಣದ ಕುಡುಬಿಯರು', ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ, ಮಂಗಳೂರು, ೨೦೦೮.

೧೫. ನಿರುಪಮಾ, 'ಸಂಶೋಧನಾ ವಿಧಾನಗಳು', ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು, ೨೦೦೨.

೧೬. ಪ್ರಭಾಕರ ಎ.ಎಸ್., 'ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೧೭. ಪ್ರಭಾಕರ ಎ.ಎಸ್., 'ಬುಡಕಟ್ಟು ಅಭಿವೃದ್ಧಿ ಮೀಮಾಂಸೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೧೮. ಪ್ರಭಾಕರ ಎ.ಎಸ್., 'ಆದಿವಾಸಿ ಆಖ್ಯಾನ', ಸಿದ್ಧಾರ್ಥ ಪ್ರಕಾಶನ, ಎಂ.ಪಿ. ಪ್ರಕಾಶ ನಗರ, ಹೊಸಪೇಟೆ, ೨೦೦೬.

೧೯. ಪ್ರಭಾಕರ ಎ.ಎಸ್., ಚಂದ್ರಕಾಂತ ಟಿ.ಎಸ್., 'ಡೊಂಬರು' ಒಂದು ಚಾರಿತ್ರಿಕ ಹಿನ್ನೋಟ, ಸಿದ್ಧಾರ್ಥ ಪ್ರಕಾಶನ, ಎಂ.ಪಿ. ಪ್ರಕಾಶ ನಗರ, ಹೊಸಪೇಟೆ, ೨೦೦೬.

೨೦. ಪ್ರಭಾಕರ ಎ.ಎಸ್., 'ಕರ್ನಾಟಕ ಡೊಂಬರು' ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೨೧. ಪ್ರಭಾಕರ ಎ.ಎಸ್., 'ಹೆಳವರು', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨೨. ಪ್ರಶಾಂತ ಹೆಚ್.ಡಿ., 'ಜನಸಮುದಾಯ ಸಂಪುಟ', ಕರ್ನಾಟಕ ರಾಜ್ಯಕೋಶ–೪, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೨೩. ಪ್ರಧಾನ್ ಗುರುದತ್ತ, 'ನಮ್ಮ ಪ್ರಾಚ್ಯ ಪರಂಪರೆ', ನಾಗರಿಕತೆಯ ಕಥೆ–೧, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೨೦೦೭.

೨೪. ಪುಟ್ಟಯ್ಯ ಬಿ.ಎಂ., 'ಮುಖಾ ಮುಖಿ', ಸಮಾಜ ಸಂಸ್ಕೃತಿ ಚಳುವಳಿ, ಸಿದ್ಧಾರ್ಥ ಪ್ರಕಾಶನ, ಎಂ.ಪಿ. ಪ್ರಕಾಶ ನಗರ, ಹೊಸಪೇಟೆ, ೨೦೦೮.

೨೫. ಬಂಜಗೆರೆ ಜಯಪ್ರಕಾಶ್, 'ಕರ್ನಾಟಕತ್ವ ಸಮಾಜೋ ಆರ್ಥಿಕ ತಳಹದಿ', ಕನ್ನಡ ಸಾಹಿತ್ಯ ಪರಿಷತ್, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು, ೨೦೦೬.

೨೬. ಬೋರಲಿಂಗಯ್ಯ ಹಿ.ಚಿ., 'ಬುಡಕಟ್ಟು ದೈವಾರಾಧನೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೨೭. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್. (ಸಂ.), 'ಬುಡಕಟ್ಟು ಅಧ್ಯಯನ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೨೮. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್. (ಸಂ.), 'ಬುಡಕಟ್ಟು ಅಧ್ಯಯನ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೨೯. ಬೋರಲಿಂಗಯ್ಯ ಹಿ.ಚಿ., 'ಗಿರಿಜನ ನಾಡಿಗೆ ಪಯಣ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೨೦೦೬.

೩೦. ಬೋರಲಿಂಗಯ್ಯ ಹಿ.ಚಿ., 'ಅಭಿವೃದ್ಧಿ ಪಥ', (ಸುವರ್ಣ ಕರ್ನಾಟಕ ಸಂ. ೧), ಕನ್ನಡ ವಿಶ್ವವಿದ್ಯಾಲಯ, ಹಂಪಿ ಮತ್ತು ಕರ್ನಾಟಕ ಗ್ಯಾಜೆಟೀಯರ ಇಲಾಖೆ, ಬೆಂಗಳೂರು, ೨೦೦೭

೩೧. ಬೋರಲಿಂಗಯ್ಯ ಹಿ.ಚಿ., 'ಕುಣಬಿಯರು', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೩೨. ಮರುಳಸಿದ್ಧಯ್ಯ ಎಚ್.ಎಂ., 'ಸಮುದಾಯ ಸಂಘಟನೆ', ಐ.ಬಿ.ಎಚ್. ಪ್ರಕಾಶನ, ೬೪೫/೬, ೧೦ನೇ 'ಬಿ' ಮುಖ್ಯ ರಸ್ತೆ, ೪ನೇ ಬ್ಲಾಕ್, ಜಯನಗರ, ಬೆಂಗಳೂರು, ೨೦೦೪.

೩೩. ಮಹಮೂದ್ ಟಿ.ಕೆ., 'ಉತ್ತರ ಕನ್ನಡ ದರ್ಶನ', ಕನ್ನಡ ಸಾಹಿತ್ಯ ಪರಿಷತ್, ಪಂಪಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು, ೧೯೮೬.

೩೪. ಮೇರುನಂದನ್ ಕೆ.ಬಿ., ನವೀದ್ ಅಹ್ಮದ್, 'ಭಾರತ ಸಂವಿಧಾನ', ಮೆರಗು ಪ್ರಕಾಶನ, ಬಿ.ಇ.ಎಮ್.ಎಲ್. ಬಡಾವಣೆ ಹತ್ತಿರ, ೮ನೇ ಮುಖ್ಯ ರಸ್ತೆ, ಬಸವೇಶ್ವರ ನಗರ, ಬೆಂಗಳೂರು, ೨೦೦೬.

೩೫. ಮೈತ್ರಿ ಕೆ.ಎಂ., 'ಬುಡಕಟ್ಟು ಕುಲಕಸಬುಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.
೩೬. ಮೈತ್ರಿ ಕೆ.ಎಂ., ಚಲುವರಾಜು (ಸಂ.), 'ಬುಡಕಟ್ಟು ಅಧ್ಯಯನ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.
೩೭. ಮೈತ್ರಿ ಕೆ.ಎಂ., ಚಲುವರಾಜು (ಸಂ.), 'ಬುಡಕಟ್ಟು ಅಧ್ಯಯನ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.
೩೮. ರಮೇಶ ಜೆ.ಕೆ., 'ಮರಾಠಿ ಕುಣಬಿಗಳು', (ಬುಡಕಟ್ಟು ಅಧ್ಯಯನ) ಚಕೋರ ಪ್ರಕಾಶನ, ೧೨ನೇ ಅಡ್ಡ ರಸ್ತೆ, ಸೊಪ್ಪುಗುಡ್ಡೆ, ತೀರ್ಥಹಳ್ಳಿ, ಶಿವಮೊಗ್ಗ, ೨೦೦೮.
೩೯. ರಮೇಶ ಸ.ಚಿ., 'ಅಲೆಮಾರಿಗಳ ಸ್ಥಿತಿಗತಿ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.
೪೦. ರವೀಂದ್ರನಾಥ ಕೆ., 'ಅಧ್ಯಯನ ವಿಧಾನಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.
೪೧. ರಹಮತ್ ತರೀಕೆರೆ, 'ಸಾಂಸ್ಕೃತಿಕ ಅಧ್ಯಯನ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೨೦೦೮.
೪೨. ರಾಮಚಂದ್ರನ್ ಸಿ.ಎನ್., 'ವಸಾಹತ್ತೋತ್ತರ ಚಿಂತನೆ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೨೦೦೨.
೪೩. ರಾಜಶೇಖರ ಜಿ., 'ದಾರು ಪ್ರತಿಮಾ ನ ಪೂಜಿವೇ', ಅಕ್ಷರ ಪ್ರಕಾಶನ, ಸಾಗರ, ೧೯೯೩.
೪೪. ರಾಜಾರಾಮ ಹೆಗಡೆ, 'ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ೨೦೦೪.
೪೫. ಲಕ್ಕಪ್ಪಗೌಡ ಎಚ್.ಜೆ., 'ಕರ್ನಾಟಕ ಬುಡಕಟ್ಟುಗಳು', ಸಂಪುಟ-೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮.
೪೬. ಲಕ್ಷ್ಮೀ ಎನ್., 'ಪರಿಶಿಷ್ಟ ಜಾತಿ, ಪರಿಶಿಷ್ಟ ಬುಡಕಟ್ಟು ಹಾಗೂ ಇತರ ಜನಾಂಗದವರು ತಾರುಣ್ಯಾವಸ್ಥೆಯಲ್ಲಿ ಹೆಣ್ಣು ಮಕ್ಕಳ ಶೈಕ್ಷಣಿಕ ಹಿಂದುಳಿಯುವಿಕೆ', ಪಿಎಚ್.ಡಿ. ಮಹಾಪ್ರಬಂಧ, ಚೇತನ ಬುಕ್ ಹೌಸ್, ಮೈಸೂರು, ೨೦೦೪.
೪೭. ವಿಷ್ಣು ನಾಯಕ್, 'ದುಡಿಯುವ ಕೈಗಳ ಹೋರಾಟ ಕಥೆ', ದಿನಕರ ದೇಸಾಯಿ ಸ್ಮಾರಕ, ಉತ್ತರ ಕನ್ನಡ ಜಿಲ್ಲೆ, ೨೦೦೪.
೪೮. ಶರ್ಮಾ ಆರ್.ಎಸ್., 'ಪ್ರಾಚೀನ ಭಾರತದಲ್ಲಿ ಶೂದ್ರರು', ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು, ೨೦೦೬.
೪೯. ಶಿರೂರ ಬಿ.ವ್ಹಿ., 'ಸಂಶೋಧನಾ ಸ್ವರೂಪ', ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ, ೨೦೦೮.
೫೦. ಶ್ರೀಕಂಠಶಾಸ್ತ್ರಿ ಎಸ್., 'ಭಾರತೀಯ ಸಂಸ್ಕೃತಿ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ಬೆಂಗಳೂರು, ೨೦೦೬.
51. Ananthakrishna Iyer L.K., 'The Mysore Tribes and Castes', Vol. V, The Mysore University, Mysore, 1930, Reprint, Mittal Publications, New Delhi, 1998.
52. Buchanan, Francis, 'A Journey from Madras through the Countries of Mysore, Canara and Madras', Vol. III, Asia Educational Services, New Delhi, 1972.
53. Fuchs Stephen, 'The Aboriginal Tribes of India', Mac Millan, Delhi, 1973.
54. Ghurye G.H., 'The Scheduled Tribes', Popular Prakashan, Bombay, 1959.

55. Ghurye G.H., 'The Mahadev Kolis (A Scheduled Tribe)', Popular Prakashan, Bombay, 1963.
56. Gomes Olivino J.F., 'Village Goa (A Study of Goan Social Structure and Change)', S. Chanda and Co., New Delhi, 1987.
57. Halbar B.G., Morab S.G., Suresh Patil, Ramji Gupta, 'People of India', 'Karnataka', Vol. XXVI, Part-2, pp. 818-823. Affiliated East-West Press Pvt. Ltd., New Delhi. 2003.
58. Herskoxits M.J., 'Cultural Anthropology', India Book House, New Delhi, 1974.
59. Luiz A.A.D., 'Tribes of Mysore', p. 21, C.S. Viswa and Co., Bangalore, 1961.
60. Mann R.S., 'Anthropological and Sociological Theory', Approaches and Applications, Rawat, Jaipur, 1984.
61. Mascarenhas Antonia, 'The Kudubies', Goa from Pre-historic Times, Post Box No. 7, Vasco, 1987.
62. Prabhu S.S., 'The Konkani People', Amche Daaiz (our Heritage), Mangalore, 1965.
63. Pratapsinh Velip Kankar, 'The Kurmis-Kunbies of India', Pritam Prakashan, Paji Fard, Margao, Goa, 2006.
64. Ravindranath Rao Y., 'Tribal Tradition and Change – A Study of Kudubis of South India', Managlore Publication, Managlore 2003.
65. Shambhu Shrikant Ghadi, 'Historical and Comparative Study of Kunbis of Coastal Karnataka and Aborigine Tribes of Goa', Ph.D. Thesis, Kannada University, Hampi, 2008.
66. Sherring M.A., 'Hindu Tribes and Castes', Vol. II, p. 222, Cosmo Publications, 24 B, Ansari Road, Darya Ganj, Delhi, 1974.
67. Shyam Bhat N., 'South Kanara', Mittal Publications, New Delhi, 1995.
68. Singh K.S., 'Indian's Communities', National Series, Vol. V, p. 1887, Oxford University Press, Delhi, 1998.
69. Singh K.S., 'Economics of the Tribes and their Transformation', Vol. XIX, New Delhi, 1982.
70. Thurston Edger, 'Caste and Tribes of South India', Vol. I to VII, p. 34, Government Press, Madras, 1909.
71. Vidyarthi and Rai B.K., 'The Tribal Culture of India', Concept Publication, Delhi, 1977.
72. William Pais, 'The Land Called South Kanara', Manipal Press Limited, 2003.

**ಅಂಕಿಅಂಶಗಳು**

೭೩. ಉತ್ತರ ಕನ್ನಡ ಜಿಲ್ಲೆ ಅಂಕಿಅಂಶಗಳ ನೋಟ, ೨೦೦೯-೧೦, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಉತ್ತರ ಕನ್ನಡ, ಕಾರವಾರ.

೭೪. ಕರ್ನಾಟಕ ಅಂಕಿಅಂಶಗಳ ನೋಟ, ೨೦೦೯-೧೦, ಅಂಖಿಕ ಮತ್ತು ಸಾಂಖಿಕ ನಿರ್ದೇಶನಾಲಯ, ಬೆಂಗಳೂರು.

**ಪತ್ರಿಕೆ / ಮ್ಯಾಗಜೀನ್‌ಗಳು**

೭೫. ಅಚ್ಯುತಾನಂದ ಸಮಂತಾ, 'ಬುಡಕಟ್ಟು ಮಕ್ಕಳ ಆಶಾಕಿರಣ', ವಿಜಯ ಕರ್ನಾಟಕ ದಿನಪತ್ರಿಕೆ, ಸಾಪ್ತಾಹಿಕ, ಪುಟ-೧, ೨೫ನೇ ಡಿಸೆಂಬರ್, ೨೦೦೭.

೭೬. ಕಮಲಾಕ್ಷ್ಮಿ ಕೆ., 'ಕುಡುಬಿಯರ ವಿಶಿಷ್ಟ ಕಲೆ, ಕೋಲಾಟ ಮತ್ತು ಗುಮಟೆ ಕುಣಿತ', ತರಂಗ ವಾರಪತ್ರಿಕೆ, ಮಣಿಪಾಲ, ೧೪ನೇ ಆಗಸ್ಟ್, ೧೯೯೪.

೭೭. ಕಂಚೀಕೈ ವಿರುಪಾಕ್ಷ ಹೆಗಡೆ, 'ಪರಿಸರದ ಮೇಲೆ ಬೃಹತ್ ಯೋಜನೆಗಳ ದುಷ್ಪರಿಣಾಮ', ವಿಜಯ ಕರ್ನಾಟಕ ದಿನಪತ್ರಿಕೆ, ಪುಟ-೨, ೨೯ನೇ ಡಿಸೆಂಬರ್, ೨೦೦೯.

೭೮. ಗೋಪಾಲ ಎಂ. ಗೌಡ, 'ದಕ್ಷಿಣ ಕನ್ನಡ ಕುಡುಬಿ ಜನಾಂಗ', ಕಿರಣ ವಾರ್ಷಿಕ ಮ್ಯಾಗಜೀನ್, ಸಂಚಿಕೆ-೨, ಜೈನ್ ಜೂನಿಯರ್ ಕಾಲೇಜು, ಮೂಡುಬಿದರೆ.

೭೯. ಜಾನ್‌ಡಿಸೋಜ್, 'ಬದಲಾಗುತ್ತಿದೆ ಕುಣಬಿ ಕಾಸ್ಟ್ಯೂಮ್ಸ್', ವಿಜಯ ಕರ್ನಾಟಕ ದಿನಪತ್ರಿಕೆ 'ನಮ್ಮ ಕರಾವಳಿ', ಪುಟ-೫, ೪ನೇ ನವೆಂಬರ, ೨೦೦೯.

೮೦. ಪಟಗಾರ ಪಿ.ಡಿ., 'ಬುಡಕಟ್ಟು ಜನರ ಬದುಕಿಗೆ ಬರೆ ಎಳೆದ ಹುಲಿಯೋಜನೆ', ಸಂಯುಕ್ತ ಕರ್ನಾಟಕ ದಿನಪತ್ರಿಕೆ, ಪುಟ-೧೨, ೩೦ನೇ ಡಿಸೆಂಬರ, ೨೦೦೯.

೮೧. ಪಾಲ್ತಾಡಿ ರಾಮಕೃಷ್ಣ ಅಜಾರ್, 'ಹೋಳಿ ಕುಣಿತ, ಜಾನಪದ ಕುಣಿತಗಳು', ಕರ್ನಾಟಕ ಸಂಘ, ಪುತ್ತೂರು, ೧೯೯೨.

೮೨. ಬೋರಲಿಂಗಯ್ಯ ಹಿ.ಚಿ., 'ಗಿರಿಜನರಿಗೆ ಇನ್ನು ಕನಸಾಗಿರುವ ಅಭಿವೃದ್ಧಿ', ಪ್ರಜಾವಾಣಿ ದೀಪಾವಳಿ ವಿಶೇಷಾಂಕ, ಪುಟ ೧೧೪-೧೨೯, ೧೯೯೧.

೮೩. ಶಶಿಧರ ಎಂ., 'ಗೋವಾ ಕುಣಬಿಯರ ಹೋಳಿ ಕುಣಿತ', ಸುಧಾ ಕನ್ನಡ ವಾರಪತ್ರಿಕೆ, ಪುಟ ೨೩-೨೪, ೧೮ನೇ ಮಾರ್ಚ್, ೧೯೮೪.

೮೪. ಶಶಿಧರ ಎಂ., 'ಕುಣಬಿಯರ ಹೋಳಿ', ಕನ್ನಡಪ್ರಭಾ ದಿನಪತ್ರಿಕೆ, ೨೧ನೇ ಫೆಬ್ರವರಿ, ೧೯೮೮.

೮೫. ಸುಚೇತ ಜೋಷಿ ಎಂ., 'ಕೊಂಕಣಿ ಕುಣಬಿ ಜನಾಂಗ', ರಜತ್ ವಿವೇಕ ವಾರ್ಷಿಕ ಪತ್ರಿಕೆ, ಎಸ್.ವ್ಹಿ. ಜೂನಿಯರ್ ಕಾಲೇಜು, ಎಡಪದವು, ೧೯೯೮.

**ನಿಘಂಟು**

೮೬. ವೆಂಕಟಸುಬ್ಬಯ್ಯ ಜಿ., 'ಕನ್ನಡ ನಿಘಂಟು', ಸಂಪುಟ-೨, ಪು-೯೧೭, ಕನ್ನಡ ಸಾಹಿತ್ಯ ಪರಿಷತ್, ಚಾಮರಾಜಪೇಟೆ, ಬೆಂಗಳೂರು, ೧೯೭೬.

**ಗ್ಯಾಜೆಟೀಯರ್‌ಗಳು**

೮೭. ವರದರಾಜ ಹುಯಿಲಗೋಳ, (ಅನು) 'ಭಾರತದ ದೇಶ-ಕೋಶ', ಸಂಖ್ಯೆ-೩, ಭಾಗ-೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರಕಾರ, ಬೆಂಗಳೂರು, ೧೯೮೭.

೮೮. ವೆಂಕಟರಂಗೋ ಕಟ್ಟೀ, 'ಗ್ಯಾಜೆಟೀಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಅಥವಾ ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು ಸಹಿತ (ಧಾರವಾಡ, ಬೆಳಗಾವಿ, ವಿಜಾಪುರ, ಕಾನಡಾ, ನಾಲ್ಕು ಜಿಲ್ಲೆಗಳದ್ದು)', ಏಶಿಯನ್ ಎಜ್ಯುಕೇಶನ್ ಸರ್ವಿಸಸ್, ಹೊಸ ದೆಹಲಿ, ೧೯೮೪.

೮೯. ಸೂರ್ಯನಾಥ ಯು. ಕಾಮತ್, (ಸಂ.), 'ಕರ್ನಾಟಕ ರಾಜ್ಯ ಗ್ಯಾಜೆಟೀಯರ್', ಭಾಗ–೧, ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು, ೧೯೮೫.

**Report**

90. Chinnappa Reddy, Report of the Karnataka Third Backward Classes Commission, Vol. I, Publication Government of Karnataka, 1990.

91. Government of India, Report of Scheduled Area and Scheduled Tribes Commission in 1960-61, Mange Publication, Government of India.

92. Havanur L.G. (Chairman), Karnatak Backward Classes Commission Report (5 Vols.), Vol. II, Publication Government of Karnataka, 1975.

93. Census of India-2001, District Population Booklet, Uttara Kannada, Directorate of Census Operations, Karnataka.

**Circular / Notification**

94. Government of Goa : Notified as Scheduled Tribes for the State of Goa, Directorate of Social Welfare, 22nd April, 2003. No. 13/14/90-SWD (Vol. 2).

## ಅನುಬಂಧ-೧

## ಅಧ್ಯಯನಕ್ಕೆ ಆಯ್ಕೆ ಮಾಡಿದ ತಾಲೂಕುಗಳ, ಗ್ರಾಮಗಳ ಮತ್ತು ಮಾಹಿತಿದಾರರ ಆಯ್ಕೆ ಸಂಖ್ಯೆ ನಮೂನೆ

## ವ್ಯಕ್ತಿ ಸಂದರ್ಶನ

## ಉತ್ತರ ಕನ್ನಡ ಜಿಲ್ಲೆ

| ಕ್ರ ಸಂ. | ತಾಲೂಕು ಆಯ್ಕೆ | ಗ್ರಾಮಗಳ ಆಯ್ಕೆ | ಮಾಹಿತಿದಾರರ ಆಯ್ಕೆ ಸಂಖ್ಯೆ |
|---|---|---|---|
| ೧ | ಜೋಯಿಡಾ ತಾಲೂಕು | ೧. ಅಣಶಿವಾಡ | ೧೦ |
| | | ೨. ಕಿಂದಳವಾಡ | ೦೨ |
| | | ೩. ಕುಂಬಾರವಾಡ | ೦೩ |
| | | ೪. ಗುಂದ | ೦೫ |
| | | ೫. ಯರಮುಖ | ೦೨ |
| | | ೬. ಡಿಗ್ಗಿ | ೦೪ |
| | | ೭. ಬೊಂಡೇಲಿ | ೦೬ |
| | | ೮. ಮಾಹೆರೆ | ೦೭ |
| | | ೯. ದೂಧಮಾಳಾ | ೦೯ |
| | | ೧೦. ಕಾರಟೊಳಿ | ೦೭ |
| | | ೧೧. ದಾಮಣ ಕುಣಂಗ | ೦೨ |
| | | ೧೨. ವಾಗೇರಿ | ೧೪ |
| | | ೧೩. ಜನತಾಶಿವ ತೀರ್ಥ | ೦೩ |
| | | ೧೪. ಚಂದ್ರಾಳಿ | ೦೪ |
| | | ೧೫. ಹನ್ನೋಲಿ | ೦೨ |
| | | ೧೬. ಮಲಕರ್ಣಿ | ೧೬ |
| | | ೧೭. ನಗರಭಾವಿ | ೧೨ |
| | | ೧೮. ಗಂಗೋಡಾ | ೦೪ |
| | | ೧೯. ಅಂಬರವಾಡಾ | ೦೭ |
| | | ೨೦. ಹುಡಸಾ | ೦೯ |
| | | ೨೧. ಬಾಂದೇಗಾಳಿ | ೦೫ |
| | | ೨೨. ಜೊಯಿಡಾ (ನಗರ) | ೦೨ |
| | | ೨೩. ಕಾರಸಿಂಗಳ್ | ೦೯ |

| ಕ್ರ ಸಂ. | ತಾಲೂಕು ಆಯ್ಕೆ | ಗ್ರಾಮಗಳ ಆಯ್ಕೆ | ಮಾಹಿತಿದಾರರ ಆಯ್ಕೆ ಸಂಖ್ಯೆ |
|---|---|---|---|
| | | ೨೪. ಭಾವ್ಕಣಿ | ೦೮ |
| | | ೨೫. ತೇಲೊಲಿ | ೧೩ |
| | | ೨೬. ಕಾಟೇಲ | ೦೮ |
| | | ೨೭. ಕುಣಂಗ | ೦೭ |
| | | ೨೮. ಗೊಡಸೆತ್ | ೦೩ |
| | | ೨೯. ಕುಂಡಲ | ೩೫ |
| | | ೩೦. ರಾಮನಗರ ವಾರ್ಡ್ ನಂ.–೧ | ೧೦ |
| | | ರಾಮನಗರ ವಾರ್ಡ್ ನಂ.–೨ | |
| | | ರಾಮನಗರ ನಾಗನಾಥಗಲ್ಲಿ | |
| | | ರಾಮನಗರ ಗಣೇಶಗಲ್ಲಿ–೨ | |
| | | ೩೧. ಚಾಪಾಳಿ | ೦೬ |
| | | ೩೨. ಅಡಾಳಿ | ೦೪ |
| | | ಒಟ್ಟು | ೨೩೮ |
| ೨ | ಕಾರವಾರ ತಾಲೂಕು | ೧. ಭೈರೆ | ೧೦ |
| | | ೨. ಗೋಯರ | ೦೬ |
| | | ೩. ಹಾತ್ರೆ | ೧೨ |
| | | ೪. ಮೈಗಿನಿ | ೦೫ |
| | | ೫. ಗೊಪಸಿಟ್ಟಾ | ೦೬ |
| | | ಒಟ್ಟು | ೩೯ |
| ೩ | ಯಲ್ಲಾಪುರ ತಾಲೂಕು | ೧. ಮೊಸರಕುಳಿ | ೧೦ |
| | | ೨. ಬಿಸಗೊಡ, ಜೋಡಹಳ್ಳಿ | ೦೪ |
| | | ೩. ಸೋಮನಳ್ಳಿ | ೦೭ |
| | | ೪. ಹಾಸಣಗಿ | ೦೧ |
| | | ಒಟ್ಟು | ೨೨ |
| ೪ | ಅಂಕೋಲಾ ತಾಲೂಕು | ೧. ಕೈಗಡಿ | ೦೧ |
| | | ಒಟ್ಟು | ೦೧ |
| | ಒಟ್ಟಾರೆ | ೪೨ | ೩೦೦ |

## ಅನುಬಂಧ-೨

## ಕುಣಬಿ ಸಮುದಾಯ ಬಳಸುವ ಔಷಧೀಯ ಮರಗಳು, ಸಸ್ಯಗಳು ಮತ್ತು ಉಪಯೋಗಿಸುವ ಭಾಗಗಳು

| ಕ್ರಸಂ. | ಕುಣಬಿ ಭಾಷೆಯಲ್ಲಿ ಬರುವ ಹೆಸರುಗಳು | ಕನ್ನಡ ಭಾಷೆಯಲ್ಲಿ | ಉಪಯೋಗಿಸುವ ಭಾಗಗಳು |
|---|---|---|---|
| ೧ | ಅಮ್ರುತವಾಲ | ಅಮೃತಬಳ್ಳಿ | ಕಾಂಡ |
| ೨ | ಅವಾಳಿ ರೂಕ್ | ನೆಲ್ಲಿಮರ | ಹಣ್ಣು, ತೊಗಟೆ |
| ೩ | ಬಿಕ್ಕೆರುಕ್ | ಬುಕ್ಕಿಮರ | ತೊಗಟೆ |
| ೪ | ಸಡವಾಂಯಿ | ಚಿಟ್ಟಬದನೆ | ಎಲೆ |
| ೫ | ಚಾಪೆ | ನೆಲಸಂಪಿಗೆ | ತೊಗಟೆ |
| ೬ | ಚಿಂಚೆರೂಕ್ | ಹುಣಸೆ | ತೊಗಟೆ |
| ೭ | ಗಾಂಡಲರೂಕ್ | ಹೂಲಿಕಂಜಿ | ಎಲೆಗಳು |
| ೮ | ಹಂಡ್ರಕನ್ | ಎಲಿಕಿವಿ | ಎಲೆ |
| ೯ | ಕೊಡಲಿಪನಾ | ತಗ್ಗಿಸೊಪ್ಪು | ಬಡ್ಡೆ |
| ೧೦ | ಖಾರತೆ | ಹಾಗಲಕಾಯಿ | ಎಲೆಗಳು |
| ೧೧ | ಮಾಕಡವಾಲ | ಮಂಗನಬಳ್ಳಿ | ಕಾಂಡ |
| ೧೨ | ಮೊರ್ಗಿ | ದುಂಡಮಲ್ಲಿಗೆ | ಕಾಂಡ, ಮೊಗ್ಗು |
| ೧೩ | ಮಸ್ಕರೂಕ್ | ನುಗ್ಗೆಕಾಯಿ | ತೊಗಟೆ |
| ೧೪ | ಮೂಸಸೊಪ್ | ನೊನಿನಸೊಪ್ಪು/ಲೊಳೆಸರ | ಕಾಂಡ |
| ೧೫ | ಮಿರಿಯಾ | ಒಲೆಮೆನಸು/ಕರಿಮೆನಸು | ಬೀಜ, ಕಾಂಡ |
| ೧೬ | ಪಾರಿಜಾತ | ಪರಿಜಾತ | ತೊಗಟೆ |
| ೧೭ | ಹಲುಪಲಾ | ಹಳುಬೇರು | ಬಡ್ಡೆ |
| ೧೮ | ರೂಮಡಾರೂಕ್ | ನೂರೆಕಾಯಿ, ಅತ್ತಿಮರ | ಎಲೆಗಳು, ತೊಗಟೆ |
| ೧೯ | ಸಾವರಿರೂಕ | ಕೆಂಪು ಬೊರುಗಾ | ಕಾಂಡ |
| ೨೦ | ಸೂರಗಿ (ಸರಂಗಿ) | ಸುರಗಿ | ಕಾಂಡ |
| ೨೧ | ಸೆಂಬೆಲಾ ಶಾಕೋಡಾ | ಸೇಗೆಕಾಯಿ | ಬೀಜ, ಎಲೆಗಳು |
| ೨೨ | ಥಿಕೆರೂಕ್ | ಕುಂಕಲಮರ/ದಾಲಚೆನ್ನಿ | ಕಾಂಡ, ತೊಗಟೆ |
| ೨೩ | ಟಾಗರೂಕ್ ಸಾಗವಾನಿ | ಸಾಗವನಿ, ತೇಗು | ಎಲೆಗಳು, ತೊಗಟೆ |
| ೨೪ | ಎಚಿಡಿಪೊಲೆ | ಹೊನ್ನೆಕಾಯಿ | ಬೀಜ, ಕಾಂಡ |
| ೨೫ | ಯಕೈನೈಕನಪಲ | ಕೆಂಪುಬೇರು | ಕಾಂಡ |
| ೨೬ | ಜಾಂಬ್ಲೆರೂಕ್ | ನೆರಳೆ | ಎಲೆಗಳು |

ತಿಳುವಳಿಕೆ ನೀಡಿದವರು – ಮಹಾಬಳೇಶ್ವರ ಸೋಮಣ್ಣ ಕಾಜುಗಾರ, ಅಣಶಿವಾಡ, ಜೋಯಿಡಾ ತಾಲೂಕು.

## ಅನುಬಂಧ–೩
## ಕುಣಬಿ ಸಮುದಾಯದವರು ಬೇರೆ ಬೇರೆ ಸಂದರ್ಭಗಳಲ್ಲಿ ಉಪಯೋಗಿಸುವ ಮರದ ಭಾಗಗಳು
## (ಪೂಜಾ ಭಕ್ತಿ, ವೃತ್ತಿ, ನಾಮಕರಣ ಮಾಡುವ ಸಂದರ್ಭದಲ್ಲಿ ದೇವರಿಗೆ ಅರ್ಪಣೆ ಮಾಡುವ ಪದ್ಧತಿ ಇತ್ಯಾದಿ)

| ಕ್ರ.ಸಂ. | ಕುಣಬಿ ಭಾಷೆಯಲ್ಲಿ ಬರುವ ಹೆಸರುಗಳು | ಕನ್ನಡ ಭಾಷೆಯಲ್ಲಿ | ಉಪಯೋಗಿಸುವ ಭಾಗಗಳು |
|---|---|---|---|
| ೧ | ಅಬೋಲಿ/ಅಬ್ಬುಲ | ಅಬ್ಬಲಿಗೆ, ಅಬ್ಬಮಲ್ಲಿಗೆ, ಕನಕಾಂಬರಿ | ಹೂವು |
| ೨ | ಅಳು/ತೇರೂ | ಕೇಸು | ಎಲೆಗಳು, ಟಿಸಲುಗಳು |
| ೩ | ಅವಾಳೆ | ನೆಲ್ಲಿ | ಹಣ್ಣು, ತೊಂಗೆ |
| ೪ | ಅಂಬೊ | ಮಾವು | ಎಲೆಗಳು, ಹಣ್ಣುಗಳು |
| ೫ | ಅಸ್ವಾಂತಾರೂಕ | ಅಶ್ವತ | ತೊಂಗೆ |
| ೬ | ಅಂಬ್ಲಿಕೊಂಡಿ | ಸಣಬು | ಕಾಂಡ |
| ೭ | ಬರೆನ್ ಕರೂಕ್ | ಬನ್ನಿಮರ | ಟೊಂಗೆ |
| ೮ | ಬೂತಪರಂಗಿ | ಪರಂಗಿ | ಪೈಬರ |
| ೯ | ಬೆಂಡೆ | ಬೆಂಡೆ | ಕಾಯಿ |
| ೧೦ | ಚಿಂಚ | ಹುಣಸೆ | ಬಡ್ಡೆ, ಹಣ್ಣು, ಕಾಯಿ |
| ೧೧ | ಜೇ | ಜಾಜಿ | ಹೂ |
| ೧೨ | ಕರ್ಮಲರುಕ | ಕಣಗಿಲೆ | ಹೂ |
| ೧೩ | ಕಾಜ | ಗೇರು | ಹಣ್ಣು, ಬೀಜ |
| ೧೪ | ಕಚ್ಚಿ | ಕಾಚು | ಹಣ್ಣು |
| ೧೫ | ಕಣಂಗ | ಗೆಣಸು | ಟುಬರ |
| ೧೬ | ಕರಟೆ | ಹಾಗಲಕಾಯಿ | ಹಣ್ಣು |
| ೧೭ | ಕಾಪುಸ | ಹತ್ತಿ | ಬಡ್ಡೆ |
| ೧೮ | ದೂಥಿ | ಕಸಿ ಕುಂಬಳ, ಬುದಕುಂಬಳ | ಹಣ್ಣು |
| ೧೯ | ಲಕುಂದಿ (ರಣಸುರಣಗಿ) | ಕಡು ಸುರಗಿ | ಹೂ,ಕಾಯಿ |
| ೨೦ | ಮಡಗಲಕಾಯಿ | ಕಾಡುಹೀರೆ | ಹಣ್ಣು |
| ೨೧ | ಮೊಗರಿ | ಮಲ್ಲಿಗೆ | ಹೂ |
| ೨೨ | ಸುಪಾರಿ | ಅಡಿಕೆ | ಬೀಜ, ಕಾಂಡ, ಹೂ |
| ೨೩ | ಮಾಡ | ತೆಂಗು | ಹೂ |
| ೨೪ | ತವಸೆ | ಸವತೆಕಾಯಿ | ಹಣ್ಣು |

| ಕ್ರ.ಸಂ. | ಕುಣಬಿ ಭಾಷೆಯಲ್ಲಿ ಬರುವ ಹೆಸರುಗಳು | ಕನ್ನಡ ಭಾಷೆಯಲ್ಲಿ | ಉಪಯೋಗಿಸುವ ಭಾಗಗಳು |
|---|---|---|---|
| ೨೫ | ಮಿರಯ | ಮೆಣಸು | ಹಣ್ಣು |
| ೨೬ | ಮೈನೊ (ಗೊಂಡೆ) | ರಾಗಿ | ಬೀಜ |
| ೨೭ | ವಾಯಂಗಿ | ಬದನೆ | ಹಣ್ಣು, ಕಾಯಿ |
| ೨೮ | ಪೊನಸು | ಹಲಸು | ಹಣ್ಣು, ಎಲೆಗಳು |
| ೨೯ | ರುಕಕಂಗ | ಮರಗೆಣಸು | ಟ್ಯೂಬರ್ |
| ೩೦ | ರಮಡಿರುಕ | ಅತ್ತಿಕಾಯಿ | ಹಣ್ಣು, ಬಡ್ಡೆ |
| ೩೧ | ಸಾವರಿರುಕ (ಸವರೂಚೆರೊಕ್) | ಕೆಂಪು ಬುರಗಾ,ಬುರಲಮರ | ಬಡ್ಡೆ |
| ೩೨ | ಸುರಂಗಿ | ಸುರಗಿ | ಹೂ |
| ೩೩ | ಶಿವಂತು | ಸೇವಂತಿಗೆ | ಹೂ |
| ೩೪ | ತುಳಸ | ತುಳಸಿ | ಎಲೆಗಳು |
| ೩೫ | ತೆಂಡುಲಿ (ತೆಂಡರ) | ತೊಂಡೆಕಾಯಿ | ಕಾಯಿ, ಹಣ್ಣು |

ತಿಳುವಳಿಕೆ ನೀಡಿದವರು – ಮಹಾಬಳೇಶ್ವರ ಸೋಮಣ್ಣ ಕಾಜುಗಾರ, ಅಣಶಿವಾಡ, ಜೋಯಿಡಾ ತಾಲೂಕು.

## ಅನುಬಂಧ-೪

## ಕುಣಬಿ ಸಮುದಾಯದವರ ಜೊತೆ ಆಚರಣೆಗಳಲ್ಲಿ ಪಾಲ್ಗೊಳ್ಳುವ ಪ್ರಾಣಿ-ಪಕ್ಷಿಗಳು (ಪೂಜೆ, ಆಹಾರ ಮುಂತಾದ ಸಂದರ್ಭ)

| ಕ್ರ.ಸಂ | ಕುಣಬಿ ಭಾಷೆಯಲ್ಲಿ ಬರುವ ಹೆಸರುಗಳು | ಕನ್ನಡ ಭಾಷೆಯಲ್ಲಿ |
|---|---|---|
| ೧ | ಹತ್ತಿ | ಆನೆ |
| ೨ | ಚಾನಿ | ಈಣಚಿ |
| ೩ | ಗಾಯ | ಆಕಳು |
| ೪ | ಘೊಡೊ | ಕುದುರೆ |
| ೫ | ಗೊನ | ಹದ್ದು |
| ೬ | ಕರಾಮಣಿ (ಕಮಣಿ), ರೆಡ್ ಬ್ರೌನ್ | ಹತ್ತಿಮುದ್ದಾ |
| ೭ | ಕುತ್ರ (ಪೆಟೊ, ಸೊನಿ) | ನಾಯಿ |
| ೮ | ಕಿರ | ಗಿಳಿ |
| ೯ | ಕೊಲ (ಜಂಗ್ಲಿಡುಕ್ಕುರ) | ಕುಡುಹಂದಿ (ಕಾಡುಹಂದಿ) |
| ೧೦ | ಕುರಲಿ | ಯೆದಿ |
| ೧೧ | ಬೊದ್ದನಿ (ಬಿಳಿ) | ಹತ್ತಿಮುದ್ದ |
| ೧೨ | ಮೊರ | ನವಿಲು |
| ೧೩ | ಮಲಿಯ (ಮೊಲಿಯ) | ಕಲ್ಲುಮರ, ಕಳ್ಳದಿ ಮುರಂಗಿ |
| ೧೪ | ಮಾಕಡ | ಮಂಗ |
| ೧೫ | ಒಂಟೆ | ಒಂಟೆ |
| ೧೬ | ಪಿಸೆ (ಬಾರಕ) | ಬಾರ್ಕ |
| ೧೭ | ಗಯೊ | ಕಾಡುಕೋಣ |
| ೧೮ | ಜಂಗ್ಲಿ ಕೊಂಬಿ | ಕಾಡುಕೋಳಿ |
| ೧೯ | ಸಿಂಗ (ಸಿಂಬ) | ಸಿಂಹ |
| ೨೦ | ಸರಪು | ನಾಗರಹಾವು |
| ೨೧ | ಸೊಸೊ ಸಾಸು (ಸೊನಸೇ) | ಮೊಲ |
| ೨೨ | ಸಾಪ, ಸಡ್ಡುಕ | ಉಡ |
| ೨೩ | ಚಿತಳ (ಕದ) | ಜಿಂಕೆ |
| ೨೪ | ಉಂದೀರ | ಇಲಿ |
| ೨೫ | ವಾಘ | ಹುಲಿ (ಚಿತ್ತೆಹುಲಿ) |
| ೨೬ | ವಾಗಿನ | ಹೆಣ್ಣು ಹುಲಿ |
| ೨೭ | ಸಾಳ | ಚಿಪ್ಪು ಹಂದಿ/ಮುಳ್ಳುಹಂದಿ |

ತಿಳುವಳಿಕೆ ನೀಡಿದವರು – ಮಹಾಬಳೇಶ್ವರ ಸೋಮಣ್ಣ ಕಾಜುಗಾರ, ಅಣಶಿವಾಡ, ಜೋಯಿಡಾ ತಾಲೂಕು.

## ಅನುಬಂಧ-೫

# ತಿಳುವಳಿಕೆ ನೀಡಿದವರು (ಮಾಹಿತಿದಾರರ ವಿವರ)

೧. ಜೋಯಿಡಾ ತಾಲೂಕು

| ಕ್ರ. ಸಂ. | ಹೆಸರು | ವಯಸ್ಸು | ವಾಸಿಸುವ ಹಳ್ಳಿಯ ಹೆಸರು | ಉದ್ಯೋಗ |
|---|---|---|---|---|
| ೧ | ಮಹಾಬಳೇಶ್ವರ ಸೋಮಣ್ಣ ಕಾಜುಗಾರ,<br>ಕುಣಬಿ ಸಮುದಾಯದ ಜಿಲ್ಲಾ ಅಧ್ಯಕ್ಷರು | ೫೩ | ಅಣಸಿವಾಡ | ಪೋಸ್ಟಮ್ಯಾನ |
| ೨ | ಶ್ರೀಮತಿ ದ್ರೌಪದಿ ವಿಠ್ಠಲ ವೇಳಿಪ | ೫೦ | ಅಣಸಿವಾಡ | ಕೂಲಿ |
| ೩ | ಗುರುದತ್ತ ಮೀರಾಶಿ ಕುಣಬಿ | ೫೦ | ಅಣಸಿವಾಡ | ಕೃಷಿ |
| ೪ | ತುಕಾರಾಮ ಗಣಪ ವೇಳಿಪ | ೩೧ | ಅಣಸಿವಾಡ | ಕೃಷಿ ಕೂಲಿ |
| ೫ | ಆನಂದ ಮಾಳು ವೇಳಿಪ | ೧೭ | ಅಣಸಿವಾಡ | ವಿದ್ಯಾರ್ಥಿ |
| ೬ | ರಾಮ ವೇಳಿಪ | ೮೦ | ಕಿಂದಳವಾಡ | ಮನೆಯಲ್ಲಿ ವಯೋವೃದ್ಧರು |
| ೭ | ಸುಭಾಶ ಗಾವಡಾ,<br>ಕುಣಬಿ ಸಮುದಾಯದ ಜಿಲ್ಲಾ ಕಾರ್ಯದರ್ಶಿ | ೪೦ | ಕುಂಬಾರವಾಡ | ಪತ್ರಕರ್ತ |
| ೮ | ತುಕಾರಾಮ ಗಣಪ ವೇಳಿಪ | ೩೧ | ಕುಂಬಾರವಾಡ | ಕಂಟ್ರಾಕ್ಟರ್ |
| ೯ | ರವಿದಾಸ ಉಸಪೋ ವೇಳಿಪ | ೩೧ | ಗುಂದ | ಕೂಲಿ |
| ೧೦ | ಶಿವಾ ತಾಂಬುಡೋ ವೇಳಿಪ | ೪೧ | ಗುಂದ | ಕೃಷಿ |
| ೧೧ | ಶ್ರೀಮತಿ ಲಕ್ಷ್ಮೀ ವೇಳಿಪ | ೫೬ | ಗುಂದ | ಮನೆಕೆಲಸ |
| ೧೨ | ರೇಡಿಯೋ ಶಾಬ್ಲಾ ಗಾವಡಾ | ೬೦ | ಯರಮುಖ | ಮನೆಯಲ್ಲಿ ವಯೋವೃದ್ಧರು |

